ದ್ವಿದಶಮಾನೋತ್ಸವ ವಿಶೇಷಾಂಕ

# ಕರ್ನಾಟಕ ಲೋಚನ

ಸಂ.೧೨,೧೩, ಡಿಸೆಂಬರ್ ೧೯೯೯ , ಜೂನ್-ಡಿಸೆಂಬರ್ ೨೦೦೦ ಸಂಚಿಕೆ ೨,೧,೨



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

# 'ಕರ್ನಾಟಕ ಲೋಚನ'



**ಲೇಖನಗಳು-ಟಿಪ್ಪಣಿಗಳು**

ಸಂಶೋಧನಾತ್ಮಕ, ಪಾಂಡಿತ್ಯ-ವಿದ್ವತ್ವಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು-ಇವುಗಳ ಮೇಲಣ ವಿಮರ್ಶೆಗಳು ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ, ಇವುಗಳಿಗೆ ಸಂಬಂಧಿಸಿದ ಟೀಕೆ-ಟಿಪ್ಪಣಿಗಳು-ಇವುಗಳಿಗೆ 'ಕರ್ನಾಟಕ ಲೋಚನ' ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು ; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

**ಲೇಖನಗಳಿಗೆ ಆಹ್ವಾನ**

ಮೇಲ್ಕಂಡ ವಾಕ್ಯವೃಂದದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. ಲೋಚನದ ಗಾತ್ರ ಪರಿಮಿತವಾದ್ದರಿಂದ ಲೇಖನಗಳು ಅಚ್ಚಿನ ೬-೮ ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿ ಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ-ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ವಿನಂತಿ.

# ಉದ್ದೇಶಿತ ಬಿ.ಎಂ.ಶ್ರೀ ಕಲಾಭವನ



ಬೆಂಗಳೂರಿನಲ್ಲಿ ಆಚಾರ್ಯ ಬಿ.ಎಂ.ಶ್ರೀ. ಸ್ಮಾರಕವಾಗಿ ಬಿ.ಎಂ.ಶ್ರೀ ಕಲಾಭವನವನ್ನು ನಿರ್ಮಿಸಲು ಸಂಸ್ಥಾಪಕ ಸೀತಾರಾಮಯ್ಯನವರು ಸತತ ಪರಿಶ್ರಮದಿಂದ ೧೯೮೫ರಲ್ಲಿ ನಗರ ಸಭೆಯಿಂದ ಪಡೆದಿದ್ದ ನಿವೇಶನವನ್ನು ನಾವು ೧೯೯೫ರಲ್ಲಿ ಸರ್ಕಾರದಿಂದ ಪಡೆದು ೨೪-೧೦-೯೭ರಂದು ಶಂಕುಸ್ಥಾಪನೆ ಮಾಡಿ ೩-೨-೨೦೦೧ರಂದು ನೆಲಮಹಡಿಯನ್ನು ಉದ್ಘಾಟನೆ ಮಾಡಲಾಯಿತು.

ಪ್ರತಿಷ್ಠಾನದ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು. ಅಂದಿನಿಂದಲೇ ತನ್ನ ಕಚೇರಿಯನ್ನು ಈ ನೂತನ ವಿಳಾಸದಲ್ಲಿ ಆರಂಭಿಸಿ ೨೦ನೇ ವರ್ಷಕ್ಕೆ ತನ್ನ ಕಾಲಮೇಲೆ ನಿಲ್ಲುವಂತಾಗಿದೆ.

ಭವನ ಇನ್ನೂ ಮೂರು ಮಹಡಿಗಳನ್ನು ಹೊಂದಬೇಕಾಗಿದ್ದು ಸು. ೪೦ ಲಕ್ಷ ರೂ.ಗಳ ವೆಚ್ಚದಲ್ಲಿ ಸಭಾಂಗಣ, ಗ್ರಂಥಾಲಯ, ಹಸ್ತಪ್ರತಿ ಸಂಗ್ರಹಾಲಯ, ಸ್ಥಿರ ವಸ್ತು ಸಂಗ್ರಹಾಲಯ, ಉಪನ್ಯಾಸ-ಸಮಿತಿ ಕೊಠಡಿಗಳು ಬರಬೇಕಾಗಿದೆ.

**ಕನ್ನಡ ಜನತೆ ಹೊಸಗನ್ನಡ ಯುಗ ಪ್ರವರ್ತಕರಾದ ಬಿ.ಎಂ.ಶ್ರೀ.ಯವರ ಈ ಮಾದರಿ ಕವಿ ಸ್ಮಾರಕವನ್ನು ಪೂರ್ಣ ಮಾಡಲು ಸಹಕರಿಸಬೇಕೆಂದು ಕೋರುತ್ತಿದ್ದೇವೆ.**

# ‘ಶ್ರೀಭವನ’ಕ್ಕೆ ಸಹಾಯ ಮಾಡಿ

ಶ್ರೀಕಲಾಭವನದ ನಿರ್ಮಾಣ ವೆಚ್ಚ ನಲವತ್ತು ಲಕ್ಷ ರೂ.ಗಳಾಗಬಹುದೆಂದು ಅಂದಾಜು ಮಾಡಲಾಗಿದೆ. ಸಾಹಿತ್ಯ ಪ್ರೇಮಿಗಳು, ಸಾಹಿತ್ಯಾಸಕ್ತರು, ಸಾಂಸ್ಕೃತಿಕ ಶ್ರೇಯೋಭಿಲಾಷಿಗಳಿಂದ **ಉದಾರವಾದ ಧನಸಹಾಯವನ್ನು ಕೋರುತ್ತೇವೆ. ಒಂದು ಇಡೀ ಅಂತಸ್ತು ಅಥವಾ ಒಂದು ಕೊಠಡಿ ನಿರ್ಮಾಣದ ವೆಚ್ಚ ಭರಿಸುವವರನ್ನು ನಿರೀಕ್ಷಿಸುತ್ತೇವೆ. ಆದರೂ ಅಭಿಮಾನಿಗಳು ನೀಡುವ ಯಾವುದೇ ಅಲ್ಪದಾನವನ್ನು ಪ್ರತಿಷ್ಠಾನವು ಸಂತೋಷದಿಂದ ಮತ್ತು ಕೃತಜ್ಞತೆಯಿಂದ ಸ್ವೀಕರಿಸುತ್ತದೆ.** ಈ ಮೂಲಕ ನಾಡಿನ ಒಂದು ಭವ್ಯ ಸಾಂಸ್ಕೃತಿಕ ಪರಂಪರೆ (ಸಂರಕ್ಷಣೆ, ಬೆಳವಣಿಗೆ, ಪ್ರಸರಣೆ)ಯಲ್ಲಿ ಪಾಲುದಾರರಾಗಲು ಮನವಿ ಮಾಡಿಕೊಳ್ಳುತ್ತೇವೆ.

ಸದ್ಯಕ್ಕೆ ನೆಲಮಹಡಿ ಸಿದ್ಧವಾಗಿದ್ದು, ಸಭಾಂಗಣದ ನಿರ್ಮಾಣ ಕಾರ್ಯ ಆರಂಭವಾಗಬೇಕಾಗಿದೆ. **ದಾನಿಗಳು ಪ್ರತಿಷ್ಠಾನಕ್ಕೆ ನೀಡುವ ಕಟ್ಟಡ ನಿಧಿ ದಾನಕ್ಕೆ ಸೆಕ್ಷನ್ ೮೦G ಆದಾಯ ತೆರಿಗೆ ಆಕ್ಟ್ ೧೯೬೧ ಪ್ರಕಾರ, ಪತ್ರ ಸಂಖ್ಯೆ : ಟ್ರಸ್ಟ್/೭೧೮/೧೦G/೩೮೦/೯೭-೯೮/ ಸಿಐಟಿ।। ದಿನಾಂಕ ೧೨-೨-೯೮ರ ಮೂಲಕ ೨೦೦೨ರವರೆಗೆ ಆದಾಯ ತೆರಿಗೆ ವಿನಾಯಿತಿ ಸೌಲಭ್ಯವಿದೆ.**

ಚೆಕ್ಕು - ಅಥವಾ ಡಿ.ಡಿ.ಗಳನ್ನು ‘ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ’ ಹೆಸರಿನಲ್ಲಿ ಬರೆದು, ಗೌ।। ಕಾರ್ಯದರ್ಶಿ, ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಬಿ. ಎಂ. ಶ್ರೀ. ಕಲಾಭವನ, ನರಸಿಂಹರಾಜಕಾಲೋನಿ, ಬೆಂಗಳೂರು-೫೬೦ ೦೧೯, ಇಲ್ಲಿರುವ ಪ್ರತಿಷ್ಠಾನದ ಕಾರ್ಯಾಲಯಕ್ಕೆ ಕಳಿಸಿಕೊಡಲು ಸಾರ್ವಜನಿಕರಲ್ಲಿ ಮನವಿ ಮಾಡಿಕೊಳ್ಳುತ್ತೇವೆ.

| | |
|---|---|
| ಎಸ್. ಬಸವಾರಾಧ್ಯ | ನಿಟ್ಟೂರು ಶ್ರೀನಿವಾಸರಾವ್ |
| ಪ್ರತಿಷ್ಠಾನದ ಅಧ್ಯಕ್ಷರು | ಸಂಪನ್ಮೂಲ ಸಮಿತಿ ಅಧ್ಯಕ್ಷರು |

# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಬಿ. ಎಂ. ಶ್ರೀ ಕಲಾಭವನ
ಎನ್. ಆರ್. ಕಾಲೋನಿ, ಬೆಂಗಳೂರು-೫೬೦ ೦೧೯
ದೂರವಾಣಿ : ೬೬೧೫೮೭೭ ಇಮೇಲ್ : bmsri/trust@yahoo.com
ವೆಬ್‌ಸೈಟ್ : http://in.members.tripodasia.com/bmsri/



ಸಂಪುಟ ೧೨, ೧೩ ಡಿಸೆಂಬರ್ ೧೯೯೯ ಸಂಚಿಕೆ-೨, ೧-೨
ಜೂನ್, ಡಿಸೆಂಬರ್ ೨೦೦೦

**ಶ್ರೀ ಭವನ ಉದ್ಘಾಟನೆ ಮತ್ತು ದ್ವಿದಶಮಾನೋತ್ಸವ ವಿಶೇಷಾಂಕ**

## ಪರಿವಿಡಿ

# KARNATAKA LOCHANA

*Half-Yearly Research Journal, Published by*

**B. M. Sri Smaraka Prathisthana**

**(B. M. Sri Memorial Foundation)** N. R. Colony, Bangalore-560 019

Ph : 6615877 e-mail : bmsri/trust@yahoo.com

website : http://in.members.tripodasia.com/bmsri/



**Vol 12, 13** **December 1999** **No. 2, 1-2**

**June, Dec. 2000**

**Inaguration of SRI BHAVANA & 20th Year Special Issue**

**CONTENTS**

# ಸಂಪಾದಕೀಯ

ಕರ್ನಾಟಕ ಲೋಚನದ ಈ ೩೩ನೇ ಸಂಚಿಕೆ ಡಿಸೆಂಬರ್ ೧೯೯೯ರಿಂದ ಡಿಸೆಂಬರ್ ೨೦೦೦ದವರೆಗಿನ ಮೂರು ಸಂಚಿಕೆಗಳ ಕೂಡು ಸಂಚಿಕೆ. ಪ್ರತಿಷ್ಠಾನ ಸ್ವಂತ ಕಟ್ಟಡ ಮಾಡಿಕೊಳ್ಳುವಲ್ಲಿ ಮತ್ತು ದ್ವಿದಶಮಾನೋತ್ಸವಕ್ಕೆ ಯೋಜನೆ ರೂಪಿಸುವಲ್ಲಿ ಸಂಚಿಕೆಗಳನ್ನು ಸಕಾಲಕ್ಕೆ ತರಲಾಗಿಲ್ಲವೆಂಬ ವಿಷಾದವಿದೆ. ಕರ್ನಾಟಕ ಲೋಚನದ 'ನಿಯುತವಾಗಿ ಪ್ರಕಟವಾಗುವ ಏಕೈಕ ವಿದ್ವತ್ ಪತ್ರಿಕೆ' ಎಂಬ ಹೆಗ್ಗಳಿಕೆಗೆ ಕುಂದುಂಟಾಗದಂತೆ ನಿಗಾವಹಿಸುವ ಜವಾಬ್ದಾರಿ ನಮಗಿದೆ ಎಂದು ಇಲ್ಲಿ ವಿನಮ್ರವಾಗಿ ಹೇಳಲಿಚ್ಛಿಸುತ್ತೇವೆ.

ಮೇ ೬, ೧೯೭೯ರಲ್ಲಿ ಸ್ಥಾಪನೆಯಾದ ಪ್ರತಿಷ್ಠಾನ ಸಂಸ್ಥಾಪಕರಿದ್ದಾಗಲೇ ೧೯೮೯ರಲ್ಲಿ ದಶಮಾನೋತ್ಸವ ಆಚರಿಸಿಕೊಂಡಿತ್ತು. ಈಗ ಅಷ್ಟು ಸಂಭ್ರಮವಾಗಿ ನಡೆಸಲು ಸಾಧ್ಯವಾಗದಿದ್ದರೂ ದ್ವಿದಶಮಾನೋತ್ಸವ ಆಚರಿಸುವುದನ್ನು ನಾವು ಮರೆತಿಲ್ಲ. ಕೆಲವು ಕಾರ್ಯಕ್ರಮ ನಡೆಸಿದ್ದೇವೆ. ನಾವು ನಡೆಸಿದ 'ಸಾಹಿತ್ಯೋಪಾಸಕರು' ಮಾಲೆಯ ಅಮೂಲ್ಯ ಲೇಖನಗಳನ್ನು ಈ ಸಂದರ್ಭದ ನೆನಪಿಗೆ ೨೦ ಪುಸ್ತಕಗಳ ಮಾಲೆಯಲ್ಲಿ ಪ್ರಕಟಿಸುವ ಯೋಜನೆ ಹೊಂದಿದ್ದೇವೆ. ಈವರೆಗೆ ನಾಲ್ಕು ಪುಸ್ತಕ ಪ್ರಕಟವಾಗಿವೆ. ಇದಕ್ಕಾಗಿ ಸರ್ಕಾರ ೫೦ ಸಾವಿರ ಸಹಾಯ ಧನವನ್ನು ನೀಡಿದೆ. ಒಂದೆರಡು ವಿಚಾರಗೋಷ್ಠಿಗಳನ್ನು ನಡೆಸಲು ಆಲೋಚಿಸುತ್ತಿದ್ದೇವೆ. ಈ ಉತ್ಸವದ ಮತ್ತು ಪ್ರತಿಷ್ಠಾನದ ಸ್ವಂತ ಕಟ್ಟಡದ ಪ್ರಾರಂಭೋತ್ಸವದ ಸ್ಮರಣೆಗಾಗಿ ಈ ವಿಶೇಷಾಂಕವನ್ನು ರೂಪಿಸಲಾಗಿದೆ.

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನವು ನಡೆಸಿಕೊಂಡು ಬರುತ್ತಿರುವ ಷಾಣ್ಮಾಸಿಕ ವಿದ್ವತ್ ಪತ್ರಿಕೆಯಾದ "ಕರ್ನಾಟಕ ಲೋಚನ"ದ ಸಂಪಾದಕರಾಗಿ ವಿದ್ವಾನ್ ಟಿ. ಕೇಶವಭಟ್ಟರು ೧೫ ವರ್ಷಗಳಿಂದ ಬಹಳ ಸಮರ್ಥ ರೀತಿಯಲ್ಲಿ ಇದನ್ನು ನಡೆಸಿಕೊಂಡು ಬಂದು, ವಿದ್ವಾಂಸರು, ಸಾಹಿತಿಗಳು ಹಾಗೂ ಎಲ್ಲ ವರ್ಗದ ಸಾಹಿತ್ಯ ಪ್ರಿಯರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ತಮ್ಮ ಅನಾರೋಗ್ಯದ ನಿಮಿತ್ತ ಶ್ರೀಯುತರು ಸಂಪಾದಕತ್ವದ ಹೊರೆಯನ್ನು ಇಳಿಸಿಕೊಳ್ಳಲು ಬಯಸಿದುದನ್ನು ಪರಿಗಣಿಸಿ ಬಿ. ಎಂ. ಶ್ರೀ. ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯವರು ಈ ಗುರುತರ ಹೊಣೆಗಾರಿಕೆಯನ್ನು ನನ್ನ ಮೇಲೆ ವಿಶ್ವಾಸವಿಟ್ಟು ಒಪ್ಪಿಸಿದ್ದಾರೆ. ಸಂಘದ ಗೌರವ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ನಿಟ್ಟೂರು ಶ್ರೀನಿವಾಸರಾವ್, ಸಂಘದ ಅಧ್ಯಕ್ಷರಾದ ಪ್ರೊ॥ ಎನ್. ಬಸವಾರಾಧ್ಯ ಹಾಗೂ ಕಾರ್ಯಕಾರಿ ಸಮಿತಿಯ ಸರ್ವಸದಸ್ಯರಿಗೂ ನಾನು ಹೃತ್ಪೂರ್ವಕ ಕೃತಜ್ಞತೆ

ಅರ್ಪಿಸುತ್ತಿದ್ದೇನೆ. ಈ ಪತ್ರಿಕೆಯ ಸಂಪಾದಕತ್ವವನ್ನು ಬಹಳ ಯಶಸ್ವಿಯಾಗಿ ಇದುವರೆಗೆ ನಡೆಸಿಕೊಂಡು ಬಂದ ವಿದ್ವಾನ್ ಟಿ. ಕೇಶವಭಟ್ಟರನ್ನು ನಾನು ಹಾರ್ದಿಕವಾಗಿ ಅಭಿನಂದಿಸುತ್ತಾ, ಅವರಿಗೆ ಉತ್ತಮ ಆರೋಗ್ಯ ಹಾಗೂ ಸುಖ-ಸಂತೃಪ್ತಿಯನ್ನು ಕರುಣಿಸಲಿ ಎಂದು ಭಗವಂತನಲ್ಲಿ ಪ್ರಾರ್ಥನೆ ಸಲ್ಲಿಸುತ್ತೇನೆ. ನಾನು ಈ ಪತ್ರಿಕೆಯ ಸಂಪಾದಕನಾಗಿ ನಡೆಸಿಕೊಂಡು ಬರಲು ತಾವೆಲ್ಲಾ ವಿದ್ವಾಂಸರು, ಸಾಹಿತಿಗಳು, ಸಾಹಿತ್ಯಪ್ರಿಯರು ಕೃಪೆಯಿಟ್ಟು ಸಹಕಾರ, ಸಲಹೆ, ಸಹಯೋಗ ನೀಡುತ್ತಾ ಬಂದು ಈ ಮೌಲ್ಯಾಧಾರಿತ ಪತ್ರಿಕೆ ಈಗಾಗಲೇ ಗಳಿಸಿರುವ ಹಿರಿಮೆ, ಗರಿಮೆಯನ್ನು ಕಾಪಾಡಿಕೊಂಡು ಬರಲು ನೆರವು ನೀಡಿ ನನ್ನನ್ನು ಆಶೀರ್ವದಿಸಬೇಕೆಂದು ಕಳಕಳಿಯಿಂದ ಬೇಡಿಕೊಳ್ಳುತ್ತಿದ್ದೇನೆ. ಈ ಗುರುತರ ಹೊಣೆಗಾರಿಕೆಯನ್ನು ತ್ರಿಕರಣಪೂರ್ವಕವಾಗಿ ನಿರ್ವಹಿಸುತ್ತೇನೆಂದು ತಮ್ಮಲ್ಲಿ ವಿನಂತಿಸಿಕೊಳ್ಳುತ್ತಿದ್ದೇನೆ.

- ಎಸ್. ವಿ. ಶ್ರೀನಿವಾಸರಾವ್
ಸಂಪಾದಕ

# ಸಮಸ್ಯಾಪೂರಣ

ವಿದ್ವತ್ಪತ್ರಿಕೆಯಾಗಿರುವ ಈ "ಕರ್ನಾಟಕ ಲೋಚನ"ದಲ್ಲಿ ಸಂಪುಟ ೬, ಸಂಚಿಕೆ ೧ ಜೂನ್, ೧೯೯೩ ಮೊದಲ್ಗೊಂಡು "ಸಮಸ್ಯಾಪೂರಣ" ಎಂಬ ಅಂಕಣವನ್ನು ಪ್ರಾರಂಭಿಸಲಾಗಿದೆ. ಇದು ಕನ್ನಡಕ್ಕೆ ಅತಿಶಯ ಲಕ್ಷಣವೆನಿಸುವ ಪ್ರಾಸ-ಪಾದ-ಛಂದೋಬದ್ಧ ಪದ್ಯ ಕವಿತಾ ರಚನೆಗೆ ಸಜೀವತೆಯನ್ನು ನೀಡುವ ಉದ್ದೇಶವುಳ್ಳದು. ಪ್ರತಿ ಸಂಚಿಕೆಯಲ್ಲಿಯೂ ಅದರ ಮುಂದಣ ಸಂಚಿಕೆಗಾಗಿ ಸಮಸ್ಯಾಪದ್ಯದ ಒಂದು ಪಾದವನ್ನು ಕೊಡಲಾಗುತ್ತದೆ. ಒಬ್ಬೊಬ್ಬರಿಂದ ಒಂದೊಂದು ಪದ್ಯ ಮಾತ್ರ ಸ್ವೀಕಾರಾರ್ಹ. ಈ ಸಂಚಿಕೆಗಾಗಿ ಕೊಡಲಾದ ಸಮಸ್ಯಾವಾಕ್ಯ ಹೀಗಿದೆ.

*'ಭಾವಿಪೊಡೆ ಸಾರಮೀಸಂಸಾರಂ"*

೧. ಘೋರತರ ಸಂಸಾರ ಚಕ್ರವ-
ಪಾರ ದುಃಖದ ಭಾರವದರೊಳು
ಮೇರುವಂದದಿ ಸಾರಿಹೀ ನರಜನ್ಮ ಸುಕೃತವಲ ।
ಪಾರವೈದಲು ಭವವಿಷಾಬ್ಧಿಯ
ಮೀರಿಪುರುಷಾರ್ಥಗಳ ಸಾಧಿಸೆ
ಸಾರಮೀಸಂಸಾರಮೀ ಲೌಕಿಕದಿ ಭಾವಿಪೊಡೆ ॥

**- ಎಂ. ಆರ್. ಅನಂತರಾಮಯ್ಯ**

೨. ಬ್ರಹ್ಮದ ಚಿಂತನ ಚಿತ್ತದಿ
ನೆಮ್ಮಿರೆ ಭಾವಿಪೊಡಸಾರಮೀ ಸಂಸಾರಂ ॥
ಸಮ್ಮತ ಗೃಹಸ್ಥ ಸುಖರಸ
ಹೊಮ್ಮಿರೆ ಭಾವಿಪೊಡೆ ಸಾರಮೀ ಸಂಸಾರಂ ॥

**- ತಲೆಂಗಳ ರಾಮಕೃಷ್ಣಭಟ್ಟ**, ವಿದ್ವಾನ್

೩. ಕವಿ ರನ್ನನೊರೆದ ವಾಗಮೃ
ತವಿದೋ ಭಾವಿಪೊಡಸಾರಮೀ ಸಂಸಾರಂ
ಕವಿ ಕೇಶವನ ಸುಧಾವಾ
ಕ್ಯವೆ ತಾಂ ಭಾವಿಪೊಡೆ ಸಾರಮೀ ಸಂಸಾರಂ ॥

**- ಟಿ. ಕೇಶವಭಟ್ಟ**, ವಿದ್ವಾನ್, ಎಂ.ಎ.

೪. ಮುತ್ತೇ ಇರುವ ಹೆಂಡತಿ ಮಕ್ಕಳು
ಕಿತ್ತು ತಿನ್ನುವ ಬಂಧು ಬಳಗ
ಎತ್ತ ಹೋದರು ಮನೆಯೊಳಗೆ.
ಮತ್ತೇನು ಹೊರಗೆ ಬೇರೆಯೇ
ತುತ್ತಾದರೂ ತಿಂದು ಸುಖಿಸೋಣವೆಂದರೆ
ಧುತ್ತೆಂದು ಮೇಲೇ ಬೀಳುವ ಬೆಲೆಗಳು
ತೂತು ಜೇಬಿನಲ್ಲೋ ಬಿಡಿಕಾಸುಗಳು
ಬೇಸ್ತು ಬೀಳಿಸುವ ಮೋಸದ ಜಾಲಗಳ ಬಲೆ
ಹೇಳಿಸ್ವಾಮಿ
ತಾ ತೇಲಲೀಯದ ಮುಳುಗಲೀಯದೀ ಸಂಸಾರ ಯಾ-
ವತ್ತ ಭಾವಿಪೊಡೆ ಸಾರ ?

(ಸರಳರಗಳೆ)

- ನಾ. ಗೀತಾಚಾರ್ಯ



ಮುಂದಿನ ಸಂಚಿಕೆಯ ಸಮಸ್ಯಾವಾಕ್ಯ

ಭಾವಿಪೊಡಸಾರಮೀಸಂಸಾರಂ

- ರನ್ನ

# ಶಂಬಾ ಜೋಶಿಯವರ ಸಾಹಿತ್ಯದಲ್ಲಿ ಗ್ರಾಮದೇವತೆಗಳ ಚಿಂತನೆ

ಡಾ॥ ನಿಂಗಣ್ಣಾ ಸಣ್ಣಕ್ಕಿ

*ಕರ್ನಾಟಕದಲ್ಲಿ*

ಇಪ್ಪತ್ತನೆಯ ಶತಮಾನವು ಅನೇಕ ಕನ್ನಡ ಸಾಹಿತ್ಯದ ದಿಗ್ಗಜರನ್ನು ಕಂಡಿದೆ. ಈ ಶತಮಾನದ ಕನ್ನಡ ಸಾಹಿತ್ಯವು ಮಹತ್ವದ ಸಾಹಿತ್ಯ ಚರಿತ್ರೆಯಾಗುವಷ್ಟು ಕಾರ್ಯ ಸಾಗಿಹೋಗಿದೆ. ನಾವೀಗ ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯದ ಅವಲೋಕನ ಮಾಡುವುದು ಅವಶ್ಯವಿದೆ. ಈ ಬಗೆಗೆ ಅಲ್ಲಿಲ್ಲಿ ಕಾರ್ಯಗಳು ನಡೆದಿರುವುದನ್ನು ಕನ್ನಡ, ಇಂಗ್ಲಿಷ್ ಪತ್ರಿಕೆಗಳು ಸೂಚನೆ ನೀಡಿವೆ.

ಕನ್ನಡ ಸಾಹಿತ್ಯ- ಸಂಸ್ಕೃತಿಯ ಸಂಶೋಧನೆಯಲ್ಲಿಯೇ ಇಡೀ ಜೀವಮಾನವನ್ನು ಚಿಂತನೆಯೊಂದಿಗೆ ಬಾಳಿ-ಬದುಕಿದವರು ಡಾ. ಶಂಕರ ಬಾಳದೀಕ್ಷಿತ ಜೋಶಿ. ಇವರು ಸಂಸ್ಕೃತವನ್ನು ಅಧ್ಯಯನ ಮಾಡಿ ಋಗ್ವೇದದ ತಿರುಳನ್ನು ತಿಳಿಸಿದ ಮಹನೀಯರು. ನಿನ್ನೆ-ಇಂದು-ನಾಳೆಗಳ ಅಂದರೆ ಸಾರ್ವಕಾಲಿಕ ಸತ್ಯವನ್ನು ತಮ್ಮ ಬರಹಗಳ ಹಾಗೂ ಸಾಹಿತ್ಯ ಕೃತಿಗಳ ಮೂಲಕ ತಿಳಿಯಪಡಿಸಿದ್ದಾರೆ. ತಮ್ಮ ಸಂಶೋಧನ ಕೃತಿಗಳ ಮೂಲಕವಾಗಿ ಶಂಬಾ ಅವರು 1960 ರಲ್ಲಿಯೇ ವಿದ್ವಜ್ಜನರ ಗಮನ ಸೆಳೆದರು. 'ಹಾಲುಮತ ದರ್ಶನ' ಕಂನಾಡಿನ ಸಂಶೋಧಕರ ಕಣ್ಣು ತೆರೆಯಿಸಿತು. ಶಂಬಾ ಅವರ ಬದುಕು-ಬರಹ ಕಂಡು ಅವರೊಬ್ಬ ಸಂಶೋಧಕ ವಿಚಾರವಾದಿ, ಮಾನವತಾವಾದಿ ಮುಂತಾದ ಸತ್ಯ ಸಂಗತಿಗಳು ಕರ್ನಾಟಕದ ಜನತೆಯ ಗಮನ ಸೆಳೆದವು. ಹೀಗಾಗಿ ಶಂಬಾ ಜೋಶಿ ಅವರು ಕನ್ನಡ ಸಾಹಿತ್ಯದ ದಿಗ್ಗಜರಾಗಿ ಎಡೆಪಡೆದರು. 'ಸಮನ್ವಯವು ಇವರ ಸಾಮಾಜಿಕ ಪ್ರಜ್ಞೆಯ ದೃಷ್ಟಿಯಾದರೆ, ಅದರ ಹಿಂದಿನ ಶಕ್ತಿಯು ವಿಚಾರವಾದದ್ದು. ವಿಚಾರ ಕ್ರಾಂತಿಯ ಅಗತ್ಯ ಮಹತ್ವಗಳನ್ನು ಇವರಷ್ಟು ನಿಸ್ಸಂದಿಗ್ಧವಾಗಿ ನಿರಪೇಕ್ಷವಾಗಿ ಆಧುನಿಕ ಕನ್ನಡ ಸಾಹಿತಿಕರಲ್ಲಿ ಮತ್ತೆ ಮತ್ತೆ ಪ್ರತಿಪಾದಿಸಿದವರು ಶ್ರೀ ಶಿವರಾಮ ಕಾರಂತರಂಥ ಒಬ್ಬಿಬ್ಬರನ್ನು ಬಿಟ್ಟರೆ ಇನ್ನಾರು ಹೆಚ್ಚು ಕಣ್ಣು ತುಂಬುವುದಿಲ್ಲ.'[1]

ಶಂಬಾ ಜೋಶಿಯವರು ಹತ್ತಿರ ಹತ್ತಿರ ನಲ್ವತ್ತು ಸಾಹಿತ್ಯ ಕೃತಿಗಳನ್ನು ರಚಿಸಿ ನಮ್ಮ ಮುಂದೆ ಪ್ರಾಜ್ಞರಾಗಿ ಇಟ್ಟಿದ್ದಾರೆ.

ಡಾ. ಶಂಬಾ ಜೋಶಿ ಅವರು ತಮ್ಮ ಸಂಶೋಧನೆಗೆ ಬೇಕಾಗಿರುವ ಹಲವಾರು ಆಕರಗಳನ್ನು ಸತ್ಯದ ಅರಿವಿನಿಂದ ಸ್ವೀಕರಿಸಿದ್ದಾರೆ. ಕಂನುಡಿ, ಕಂನಾಡು ಅದೇ ಕರ್ನಾಟ, ಒಟ್ಟಾರೆ ಕನ್ನಡ ಸಂಸ್ಕೃತಿ, ಭಾರತೀಯ ಸಂಸ್ಕೃತಿ ಮತ್ತು ಮಾನವ ಸಂಸ್ಕೃತಿ ಎಂಬ

---

[1] ಪ್ರಜ್ಞಾ ನೇತ್ರದ ಬೆಳಕಿನಲ್ಲಿ-ಲೇ: ಗೌರೀಶ ಕಾಯ್ಕಿಣಿ. ಕಾಲಗತಿ ಪ್ರಕಾಶನ, ರಾಯಬಾಗ, ಪುಟ-14, ಪ್ರಥಮ ಮುದ್ರಣ: 1982.

ಪ್ರಮುಖ ವಿಶ್ವ ಪರಿಧಿಯಲ್ಲಿ ತಮ್ಮ ಕೆಲಸವನ್ನು ಮಾಡಿದ್ದಾರೆ. 1979ರಲ್ಲಿ 'ವೈವಸ್ವತ ಮನು ಪ್ರಣೀತ ಮಾನವ ಧರ್ಮದ ಆಕೃತಿ' ಗ್ರಂಥವನ್ನು ರಚಿಸಿದರು. ಅವರ ಓರೆಕೋರೆ ಅಕ್ಷರಗಳನ್ನು ನಾನು ದುಂಡಾಗಿ ಬರೆದು ಮುದ್ರಣಕ್ಕೆ ನೀಡಿದ್ದೇನೆ. ಆ ಅವಧಿಯಲ್ಲಿ ಹಲವಾರು ಪ್ರಶ್ನೆಗಳನ್ನು ನೀಡಿ, ಅವರಿಂದ ನನ್ನ ಸಂಶಯಗಳನ್ನು ನಿವಾರಿಸಿಕೊಂಡಿದ್ದೇನೆ.

1) ಕರ್ನಾಟಕ ಸಂಸ್ಕೃತಿಯು ಭಾರತೀಯ ಸಂಸ್ಕೃತಿಯ ಅಂಗವಾಗಿದೆ. 2) ದೇವರು ಭಕ್ತರನ್ನು ರೂಪಿಸಿದನು ಎಂಬ ಮಾತಿಗಿಂತ ಭಕ್ತರು ತಮ್ಮ ದೇವರನ್ನು ರೂಪಿಸಿದ್ದಾರೆ ಎಂದರೂ ತಪ್ಪಲ್ಲ. (ಪು-19) 3) 'ಭಾರತೀಯರ ಸಂಸ್ಕೃತಿ ಅವರ ದೇವಾಲಯಗಳಲ್ಲಿದೆ. ಈ ಪ್ರಮುಖ ಸಂಗತಿಗಳಿಂದ ಶಂಬಾ ಅವರು ಗ್ರಾಮ ದೇವತೆಗಳ ಬಗೆಗೆ ಮಾಡಿದ ಚಿಂತನೆಗಳನ್ನು ತಿಳಿಯುವುದು ಅವಶ್ಯ ಎನಿಸಿದೆ.

ಶಂಬಾ ಅವರ ದೃಷ್ಟಿಯಲ್ಲಿ ಅರಿವು ಅಂದರೆ ಪ್ರಜ್ಞೆ ಮಾನವರಲ್ಲಿ ಎಲ್ಲಿ ಹೇಗೆ ಬಂದಿದೆ. ವಾನರ, ನರ ಮತ್ತು ಮಾನವ ಹಂತಗಳನ್ನು ಗುರುತಿಸಿ, ದೇವರ ಬಗೆಗೆ ತಮ್ಮ ಚಿಂತನೆಗಳನ್ನು ಅಲ್ಲಲ್ಲಿ ನೀಡಿದ್ದಾರೆ.

ಪ್ರಮುಖವಾಗಿ ಅವರ ಇಡೀ ಬರಹಗಳನ್ನು ನಿರೀಕ್ಷಿಸಿದಾಗ ವೈದಿಕ ದೇವತೆಗಳು ಮತ್ತು ಅವೈದಿಕ ದೇವತೆಗಳು ಎಂಬ ಕಲ್ಪನೆ ಮೂಡಿ ನಿಲ್ಲುತ್ತದೆ.

ಮತ್ತೊಂದು ಬಗೆಯಲ್ಲಿ ಶಿಷ್ಟ ದೇವತೆಗಳು ಮತ್ತು ಜನಪದ ದೇವತೆಗಳು ಎಂಬ ವರ್ಗೀಕರಣವೂ ತಿಳಿದು ಬರುತ್ತದೆ. ಆರ್ಯ-ದ್ರಾವಿಡರ ಸಮ್ಮಿಳನದಿಂದಾಗಿ ಮೇಲನೋಟಕ್ಕೆ ಒಂದು ಬಗೆಯಾಗಿ ಹೊಳೆದು, ಒಳನೋಟಕ್ಕೆ ಇನ್ನೊಂದು ಬಗೆಯಾಗಿರುತ್ತದೆ. ಹೀಗಾಗಿ ದ್ರಾವಿಡ ದೇವತೆಗಳು ಮತ್ತು ಆರ್ಯರ ದೇವತೆಗಳು ಇಲ್ಲವೆ ಆರ್ಯರ ದೇವತೆಗಳು ಆರ್ಯೇತರ ದೇವತೆಗಳು ಎಂಬುದನ್ನು ತಿಳಿಯಬೇಕಾಗುತ್ತದೆ.

ಇನ್ನು ಕೆಲವು ಸಂಶೋಧಕರ ದೃಷ್ಟಿಯಿಂದ ಗುಣ ಸ್ವಭಾವದ ಪ್ರಕಾರ ಸೌಮ್ಯ ದೇವತೆಗಳು ಮತ್ತು ಉಗ್ರ ದೇವತೆಗಳು, ಆಹಾರ (ನೈವೇದ್ಯದ ಪ್ರಕಾರ) ಮಾಂಸಾಹಾರಿ ಮತ್ತು ಸಸ್ಯಾಹಾರಿ ದೇವತೆಗಳೆಂದೂ ವಿಭಾಗಿಸಿಯೂ, ಪೂಜಾ- ಆಚರಣೆಗಳ ಬಗೆಯಲ್ಲೂ ಅಧ್ಯಯನವನ್ನು ಮಾಡಬಹುದು. ಶಂಬಾ ಅವರ ಅಧ್ಯಯನ ದೃಷ್ಟಿಯಲ್ಲಿ ಲಿಂಗಗಳ ಪ್ರಕಾರವಾಗಿಯೂ ಗಂಡು ದೇವತೆಗಳು, ಹೆಣ್ಣು ದೇವತೆಗಳು ಎಂಬುದಾಗಿಯೂ ತಿಳಿಯುವಂತಹ ಸಂಗತಿಗಳುಂಟು. ಇಡಿಯಾಗಿ ಅವರ ವಿಚಾರಗಳು ಈ ಪ್ರಬಂಧದಲ್ಲಿ ಮೂಡಿರದಿದ್ದರೂ ಹಲವಾರು ವಿಚಾರಗಳನ್ನು ಇಲ್ಲಿ ಗ್ರಾಮ ದೇವತೆಗಳ ಬಗೆಗೆ ತಿಳಿಯೋಣ.

ಶಂಬಾ ಅವರು 'ದೇವಾನುದೇವತೆಗಳು' ಎಂಬ ವಿಷಯವಾಗಿ ಹಾಲು ಮತ ದರ್ಶನ, ಕರ್ನಾಟಕ ಸಂಸ್ಕೃತಿ ಪೂರ್ವ ಪೀಠಿಕೆ ಭಾಗ-1 ಮತ್ತು 2, ನಾಗ ಪ್ರತಿಮಾ, ಋಗ್ವೇದ ಸಾರ, ಮರ್‍ಹಾಟೀ ಸಂಸ್ಕೃತಿ ಕೆಲವು ಸಮಸ್ಯೆಗಳು (ಮರಾಠಿ ಸಂಸ್ಕೃತಿ ಕಾಹಿ ಸಮಸ್ಯಾ) ಶಿವ ರಹಸ್ಯ, ಬುಧನ ಜಾತಕ, ವೈವಸ್ವತ ಮನು ಪ್ರಣೀತ ಮಾನವ ಧರ್ಮದ ಆಕೃತಿ' ಇತ್ಯಾದಿ ಸಾಹಿತ್ಯಿಕ-ಸಂಶೋಧನಾತ್ಮಕ ಕೃತಿಗಳಲ್ಲಿ ಚಿಂತನಗೈದಿರುವರು.

## (1) ಶಿವ-ರುದ್ರ ಅಥವಾ ರುದ್ರ-ಶಿವ ದೇವತೆಗಳು

ಕರ್ನಾಟಕದಲ್ಲಿ ಮತ್ತು ಮಹಾರಾಷ್ಟ್ರದಲ್ಲಿ ಶಿವದೇವಾಲಯಗಳು ಶಿವನ ಹೆಸರಿನ ಗ್ರಾಮಗಳು ಬಹುಸಂಖ್ಯಾಕರವಾಗಿವೆ. ಮಹಾರಾಷ್ಟ್ರದಲ್ಲಿ ಶಿವಾಜಿಯು ಜನಿಸಿದ ಊರಿನ ಹೆಸರೇ ಶಿವನೇರಿ (ಶಿವನ+ಏರಿ) ಕನ್ನಡ ಪದವಾಗಿರುವುದನ್ನು ಗಮನಿಸಬಹುದಾಗಿದೆ. ಈಗ ಇಲ್ಲಿ ಶಿವನ ದೇವಾಲಯ ಹಾಗೂ ಶಿವಾಜಿ ದೇವಾಲಯಗಳು ಶೋಭಿಸುತ್ತಿವೆ. ಶಿವನ ಏರಿ ಕಂನಾಡಿನ ಭಾಗವಿರಲು ಶಕ್ಯವಿದೆ.

ರುದ್ರ ಎಂಬ ಶಬ್ದವು ದೊರಕುವುದು ಋಗ್ವೇದದಲ್ಲಿ 'ರುದ್ರನಿಗೆ' 'ಶಿವ' ಎಂದು ವಿಶೇಷಣವನ್ನು ವೈದಿಕ ಋಷಿಗಳು ಉಪಯೋಗಿಸುತ್ತಿದ್ದು ಅದು ಎಷ್ಟೊಂದು ಉಚಿತಾರ್ಥ ಉಳ್ಳುವುದೆಂಬುದು ಈಗ ಗೊತ್ತಾಗುವುದು! ಆದುದರಿಂದ ರುದ್ರ ಮತ್ತು ಶಿವ ಎಂದರೆ ಬೇರೆ ಅಲ್ಲ; ರುದ್ರ ಎಂದರೆ ಶಿವ, ಶಿವ ಎಂದರೆ ರುದ್ರ.[2] ಈ ಸ್ಪಷ್ಟೀಕರಣವನ್ನು ಹಲವು ರೀತಿಯಿಂದ ಶಂಬಾ ಅವರು ನೀಡುತ್ತಾರೆ. ಆರ್ಯರ ದೇವತೆ ರುದ್ರ. ದ್ರಾವಿಡರ ದೇವತೆ ಶಿವ. ಆದರೆ ರುದ್ರ ಶಿವ ಈ ಜೋಡು ನುಡಿಯು 'ಕೂಡಲ ಸಂಗಮದಂತೆ ಆಗಿದೆ. 'ಎರಡು ಭಿನ್ನ ಭಾಷೆಯ ಜನಾಂಗಗಳ ದೃಢವಾದ ಸಂಬಂಧ ಸಂಪರ್ಕಗಳು ಉಂಟಾದಾಗ ತಲೆದೋರುವುದುಂಟು. ಛಪ್ಪನ್ನೈವತ್ತಾರು, ಕಾಗದ-ಪತ್ರ ನಡುಮಧ್ಯೆ ಎಂಬಿವೇ ಮೊದಲಾದ ಮಾತುಗಳಲ್ಲಿ ಇದನ್ನು ನೋಡಿಕೊಳ್ಳಬಹುದು. ಆದುದರಿಂದ ರುದ್ರ-ಶಿವರು ಆರ್ಯ-ದ್ರಾವಿಡ ದೇವತೆ ಎಂಬುದು ನಿಶ್ಚಿತ. ರುದ್ರನು ಬೇರೆ ಶಿವನು ಬೇರೆಯಾಗಿರದೆ ಒಂದೇ ದೇವತೆಗೆ ಇರುವ ಭಿನ್ನ ಭಾಷೆಯೊಳಗಿನ ಎರಡು ಶಬ್ದಗಳು ಇವು.[3]

ಶಿವ ದೇವಾಲಯಗಳಿರುವ ಊರುಗಳಲ್ಲಿ ಆಚರಣೆಗಳನ್ನು ನಿರೀಕ್ಷಿಸಿದರೆ, ಶಿವನ ಪೂಜೆ, ನಡೆಯಿಸುವ ಜನಾಂಗ, ಮಾಡುವ ಭಕ್ತಿ, ನೀಡುವ ನೈವೇದ್ಯ ಇವೆಲ್ಲವುಗಳು ವಿಶೇಷವಾಗಿ ಹಾಲು ಮತದವರಿಂದ ನಡೆದುಕೊಂಡು ಬಂದುದಾಗಿದೆ. ಹಾಲುಮತದವರಿಗೆ 'ಕಳವರು' ಎಂದು ಕರೆಯಲಾಗುತ್ತಿದೆ. 'ಕಳವರ ರೀತಿ ನೀತಿಗಳು, ಅವರ ಕುಲದ ಕಥೆ ಪರಂಪರೆಗಳು ಇವನ್ನೆಲ್ಲ ನಿರೀಕ್ಷಿಸಿದರೆ, ಈ ಜನಾಂಗವು ಅತೀ ಪುರಾತನ ಕಾಲದ್ದೆಂದು ಕಂಡು ಬರುತ್ತದೆ. ಮೂಲ ದ್ರಾವಿಡರೆಲ್ಲ ಕಳವರ ಕುಲದವರು ಎಂದರೆ ಹಾಲುಮತದವರೇ. ಆದರೆ ಅನೇಕ ಕಾರಣಾಂತರಗಳಿಂದ ಅವರಲ್ಲಿ ಹಲವು ಬಗೆಗಳಾಗಲಾರಂಭಿಸಿದವು. ಕಳ್ಳನು ಉಳ್ಳವನಾಗುತ್ತಲೇ ಮರವನಾಗುತ್ತಾನೆ' ಎಂಬರ್ಥದ ಗಾದೆಯ ಮಾತು ತಮಿಳಿನಲ್ಲಿದೆ.[4]

---

[2] ಶಿವ ರಹಸ್ಯ-ಶಂ.ಬಾ ಜೋಶಿ, ಪುಟ-10, ಮಾಧವ ಬಲ್ಲಾಳ ಬಂಧುಗಳು, ಧಾರವಾಡ-1946.

[3] ಅದೇ-ಪು-11.

[4] ಶಂ.ಬಾ. ಜೋಶಿ-ಕನ್ನಡದ ನೆಲೆ, ಪುಟ-128, ಸಮಾಜ ಪುಸ್ತಕಾಲಯ, ಧಾರವಾಡ. ಮೂರನೆ ಮುದ್ರಣ-1962

## (ii) ಶಿವನೆಂದರೆ ಮಂಗಲಕಾರಕ

ಗ್ರಾಮೀಣ ಪ್ರದೇಶದಲ್ಲಿ ಶಿವದೇವಾಲಯಗಳು, ನಂದಿ ದೇವಾಲಯಗಳು, ಗಣಪತಿ ದೇವಾಲಯಗಳು ಹೆಚ್ಚಾಗಿ ಕಂಡು ಬರುತ್ತಿವೆ ಮತ್ತು ಶಿವನ ಅವತಾರಿಗಳೆಂದು ಮಠಾಧೀಶರೂ ಶಿವಲಿಂಗದ ದೇವಾಲಯಗಳನ್ನು ರಚಿಸುತ್ತಿದ್ದಾರೆ. ಕೆಲವು ಕಡೆಗೆ ಶಂಭು ದೇವಾಲಯ, ಶಂಭುಕೇಶ್ವರ ದೇವಾಲಯಗಳ ರಚನೆಯಾಗಿವೆ. ಶಿವ ಮತ್ತು ಶಂಭು ಈ ಎರಡೂ ಶಬ್ದಗಳ ಮೂಲ ಶಿನ್ ಎಂಬುದಾಗಿದೆ. ಇದೇ ರೀತಿ ಶಂಕರ ಶಬ್ದದ ಅರ್ಥವೂ ಇರಬೇಕೆಂದು ಶಂಬಾ ಅವರು ತಿಳಿಸುತ್ತಾರೆ. ಶೆನ್ ಅಂದರೆ ಮಂಗಲ ಎಂಬ ಅರ್ಥ ಹಾಗೂ ಶಿನ್ ಶಬ್ದದ ಅರ್ಥವು ಕೆಂಪು. ಶಿವನಿಗೆ ಆರ್ಯರು ಮೂರನೆಯ ಕಣ್ಣು, ಉರಿಗಣ್ಣು, ಅಗ್ನಿ ಸ್ವರೂಪನಾಗಿ ಕಂಡದ್ದುಂಟು. 'ರುದ್ರೋವಾ ಏಷ ಯದಗ್ನಿ': ಎಂದು ವರ್ಣನೆಗಳಿವೆ.

ಶಿವನು ಮಂಗಲಕಾರಕನು ಎಂಬುದು ಎಲ್ಲೆಡೆಯಲ್ಲೂ ಜನಪದದಲ್ಲೂ ಹಬ್ಬಿರುವ ಸಂಗತಿ. ಜನಪದರ ಭಕ್ತಿ ಶಿವನಲ್ಲಿ ಗಟ್ಟಿಯಾಗಿದೆ.

*ಶಿವ ಶಿವನೆಂದರೆ ಸಿಡಿಲೆಲ್ಲ ಬಯಲಾಗಿ*
*ಕಲ್ಲು ಬಂದೆರಗಿ ಕಡೆಗಾಗಿ । ಎಲೆ ಮನವೆ*
*ಶಿವನೆಂಬ ಶಬುದಾ ಬಿಡಬೇಡ ॥*

ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಕಾರ್ಯಗಳಲ್ಲಿ ಬಂಡಿ ಹೊಡೆಯುವಾಗ, ಗಳೆ ಹೊಡೆಯುವಾಗ, ನೇಗಿಲ ಹೂಡಿದಾಗ, ಹಂತಿ ನುರಿಸುವಾಗ ಗಂಡಸರೂ, ಬೀಸುವಾಗ, ಕುಟ್ಟುವಾಗ, ಕಸ ತೆಗೆಯುವಾಗ ಹೆಂಗಸರೂ ಹಾಡ ಹಾಡುತ್ತಾರೆ. ಒಂದು ಊರಿನಿಂದ ಇನ್ನೊಂದು ಊರಿಗೆ ಜಾತ್ರೆಗೆ ಹೋಗುವಾಗ ಶಿವನನ್ನು ನೆನೆಯುತ್ತಲೇ ಹೋಗುತ್ತಾರೆ. ಕೆಲವು ಕಡೆಗೆ ಚಾಂಗ, 'ಚಾಂಗಬಲ, ಚಾಂಗ ಬಲಾ' ಎಂದು ನುಡಿಯುತ್ತ ಸಾಗುತ್ತಾರೆ. "ಮಹಾನುಭಾವ ಸಾಹಿತ್ಯ ಮತ್ತು ಜ್ಞಾನೇಶ್ವರಿಗಳಲ್ಲಿ 'ಚಾಂಗ' ಶಬ್ದ ಹೆಜ್ಜೆ ಹೆಜ್ಜೆಗೆ ಸಿಗುವಂತಹುದಾಗಿದೆ. ಮಹಾರಾಷ್ಟ್ರ ಶಬ್ದಕೋಶದಲ್ಲಿ ಚಾಂಗಶಬ್ದದ ಸಂಬಂಧವನ್ನು ಕನ್ನಡದ 'ಚೆನ್ನ'ದೊಡನೆ ಹಚ್ಚುತ್ತಾರೆ. ಆದರೆ 'ಭಾನ' ಶಬ್ದದ ಮೂಲ ಮಾತ್ರ ಅವರಿಗೆ ಅರಬೀ ಭಾಷೆಯಲ್ಲಿ ಕಾಣುತ್ತದೆ. ಅದೇನೇ ಇದ್ದರೂ 'ಚಾಂಗ' ಶಬ್ದವಾದರೂ 'ಚೆನ್ನ' ಶಬ್ದದಿಂದ ಬಂದುದು ಎಂಬುದರಲ್ಲಿ ಸಂಶಯವಿಲ್ಲ. 'ಚೆನ್ನ' ಎಂದರೆ 'ಒಳ್ಳೆಯ' ಎಂದು ಅರ್ಥ ವ್ಯವಹಾರದಲ್ಲಿದ್ದು, ಅದರ ಮೂಲ ಅರ್ಥ ಅರ್ಥ ಕೆಂಪು ಎಂಬುದಾಗುತ್ತದೆ.'

---

[5] ಶಂ. ಬಾ. ಜೋಶಿ - ಮರ್‍ಹಾಟಿ ಸಂಸ್ಕೃತಿ ಕೆಲವು ಸಮಸ್ಯೆಗಳು - ಪುಟ 139, ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು- ಪ್ರ. ಮು. 1990
ಕನ್ನಡ ಅನು : ಕೀರ್ತಿನಾಥ ಕುರ್ತಕೋಟಿ

## (iii) ಶಿವಲಿಂಗ

ಶಿವಲಿಂಗ, ಶಂಕರಲಿಂಗ, ಶಿವಲಿಂಗೇಶ್ವರ, ಶಿವಲಿಂಗೇಶ್ವರ ಗುಡಿ ಮುಂತಾದ ಹೆಸರುಗಳ ಗ್ರಾಮೀಣ ಪ್ರದೇಶದ ದೇವಾಲಯಗಳಿರುವುದನ್ನು ನೋಡುತ್ತೇವೆ. ಈ ದೇವಾಲಯಗಳಿಗೆ ಸೌಂದರ್ಯಾಯುಕ್ತವಾದ ಸಂಗತಿಗಳನ್ನು ನಿರ್ಮಾಣ ಮಾಡುತ್ತಾರೆ, ಭಕ್ತರಾಗುತ್ತಾರೆ. ಕೈಲಾಸದ ಕಲ್ಪನೆಯನ್ನೂ ಅಲ್ಲಿ ನಿರ್ಮಿಸುತ್ತಿದ್ದಾರೆ. ಆದರೆ ಲಿಂಗ ಮತ್ತು ಶಿವ ಇವರಲ್ಲಿ ಭಿನ್ನತೆ ಉಂಟೆಂದು ಶಂಬಾ ಅವರು ತಿಳಿಸುತ್ತಾರೆ.

ನಮ್ಮ ದೇವತೆಗಳ ಕಲ್ಪನೆಯನ್ನು ಸಮನ್ವಯ ಸಾಧಿಸಲು ಕೂಡಿ ಹೇಳುವ ರೂಢಿಯುಂಟು. ಉದಾ : ಹರಿಯೇ ಬೇರೆ ಹರನು ಬೇರೆ. ಆದರೂ ಹರಿಹರ ದೇವತೆಯು ಪ್ರಚಾರವು ಸಾಗಿತು. 'ಆದರೆ ಶಿವ ಮತ್ತು ಲಿಂಗ ಇವೆರಡೂ ಒಂದೇ ಎಂಬ ಕಲ್ಪನೆ ಇಂದಿಗೂ ಸಾರ್ವತ್ರಿಕವಾಗಿದೆ. ಮೊಹೆಂಜೋದಾರೋ-ಹರಪ್ಪಾ ಪ್ರದೇಶಗಳಲ್ಲಿ ಸಿಗುವ ಲಿಂಗ ಮತ್ತು ಯೋನಿ ಪ್ರತೀಕಗಳ ಸಂಬಂಧವನ್ನು ಶೈವ ಪಂಥದವರಿಗೆ ಜೋಡಿಸುವ ಪ್ರಯತ್ನವನ್ನು ಅನೇಕ ವಿದ್ವಾಂಸರು ಮಾಡಿದ್ದಾರೆ. ಆದರೆ ಇದರಲ್ಲಿ ವೈಚಾರಿಕ ಗೊಂದಲವಿದೆ.'[6]

ವೀರಶೈವ ಅಥವಾ ಲಿಂಗಾಯತ, ಲಿಂಗವಂತ ಪಕ್ಷಗಳು ಒಂದೆಡೆ, ಶ್ರೀ ಬಸವ-ಅಲ್ಲಮಾದಿ, ಶರಣರ ಇನ್ನೊಂದು (ಶೂನ್ಯ ಸಿಂಹಾಸನ) ಪಕ್ಷ ಎಂಬುದನ್ನು ಶಂಬಾ ತಿಳಿಸುತ್ತಾರೆ. ಅದೀಗ ಎಪ್ಪತ್ತೆಂಟು ಒಳಪಂಗಡಗಳಿಂದ ಕೂಡಿದೆ ಎಂದು ಲಿಂಗವಂತ-ಲಿಂಗಾಯತರೇ ತಿಳಿಸುತ್ತಾರೆ.

'ಲಿಂಗಸ್ಯ-ಸೂಕ್ಷ್ಮರೂಪಸ್ಯ' ಎಂದು ಶಾಂಕರ ಭಾಷೆಯಲ್ಲಿ 'ಲಿಂಗ' ಶಬ್ದದ ಅರ್ಥವನ್ನು ತಿಳಿಸಲಾಗಿದ್ದರೂ, ಆ ಅರ್ಥ ಕೆಲವರಿಗೆ ಸಹನವಾಗಿರಲಿಕ್ಕಿಲ್ಲ. 'ಶುದ್ಧ ಶೈವ ಪಂಥೀಯರಿಗೆ ಲಿಂಗರೂಪದಲ್ಲಿರುವ ಶಿವನ ಆರಾಧನೆ ಒಪ್ಪಿಗೆಯಾಗಿರಲಿಕ್ಕಿಲ್ಲ. ಅದಕ್ಕಾಗಿ ಶಿವನನ್ನು ಲಿಂಗವೆಂದು ಕರೆಯುವ ಸಾಹಸವನ್ನು ಈ ಉಪನಿಷತ್ತಿನ ಋಷಿ ಮಾಡಲಿಲ್ಲ'.[7]... ಆದರೆ ಯೋನಿಲಿಂಗ ಪಂಥ ಕ್ರಮವಾಗಿ ಮೇಲೇರುತ್ತ ಬಂದಿತು. ಆಗ ಶಿವನೇ ಪ್ರತ್ಯಕ್ಷ ಲಿಂಗವೆಂದು ಹೇಳಿ ಈ ಪಂಥವನ್ನು ಶಿಷ್ಟಮಾನ್ಯವಾಗಿ ಮಾಡಲು ಪ್ರಯತ್ನಗಳು ನಡೆದವು.'[8]

## (iv) ಎ(ಯ)ಲ್ಲಮ್ಮ : ಅದಿತಿ

ಋಗ್ವೇದದಲ್ಲಿ ಇರುವ ಅದಿತಿಯ ವರ್ಣನೆಯು ಮಹತ್ವದ್ದಾಗಿದೆ. 'ಶ್ರೀದೇವಿಗಿಂತ ಆ ಮಹಾದೇವಿ ಇನ್ನು ಹೆಚ್ಚಿನ ಸಂಪನ್ನೆಯಾಗಿದ್ದಾಳೆ. ಅವಳು ಇಂದಿನ ಪ್ರಾಕೃತರದೇವಿ ಯಲ್ಲಮ್ಮನನ್ನು ಹೋಲುತ್ತಾಳೆ.'[9] ಅದಿತಿ ನಿಜವಾಗಿಯೂ ಎಲ್ಲರ

---

[6] ಅದೇ - ಪು. 146
[7] ಅದೇ - ಪು. 147
[8] ಅದೇ - ಪು. 147
[9] ಶಂ. ಬಾ. ಜೋಶಿ 'ಹಾಲುಮತದ ದರ್ಶನ' ಪುಟ 241, ಮೊದಲ ಮು. 1960

ಅಮ್ಮ Universal Goddess ಆಗಿರುವಳು. ವಿಶ್ವಜನನಿ ಎಂದೂ ಕರೆಯಿಸಿಕೊಂಡಿರುವಳು.

ಈ ದೇವಿಯು ಎಲ್ಲ ದೇವತೆಗಳ ಅದಿತಿ, ವಿಶ್ವಜನನಿ ಅಕ್ಷರಶಃ ಎಲ್ಲರ ಅಮ್ಮ. ಶ್ರೀಸೂಕ್ತ ಮತ್ತು ಅದಿತಿಯ ಸ್ತೋತ್ರಗಳು 'ಮಾರಿ' ಮತ್ತು ಕಾಲಿಯ ಸಂಪ್ರದಾಯಗಳು ಕರಾಳ (ಕತ್ತಲೆ) ಎಂದು ಮಾನ್ಯವಾಗಿಲ್ಲ! ಅದಿತಿಯು ಸರ್ವಮಂಗಳೆ ವಿಶ್ವಮಾತೆ ಎಂಬುದಾಗಿ ಮಾನ್ಯವಿದೆ.

'ಅದಿತಿ ಆದಿಮಾತೆ ಎಲ್ಲರ ಅಮ್ಮ, ಆದಕಾರಣ ದೇಶೀಯ ಯಲ್ಲಮ್ಮ (ಗುಡ್ಡದ ದೇವಿ) ಸಂಸ್ಕೃತ ಸಾಹಿತ್ಯದ ಅದಿತಿಗೆ ಸರಿಸಮಾನಳಾಗಿದ್ದಾಳೆ. ಎಲ್ಲಮ್ಮ ಗಿರಿದೇವಿ ಎಂದುದರಿಂದ ಇವಳು ಗಿರಿದೇವನ ಮಡದಿಯಾಗುತ್ತಾಳೆ. ಗುಡ್ಡದ ಜಾತ್ರೆಯಲ್ಲಿ 'ಎಲ್ಲಮ್ಮ ತಾಯಿ ಉದಯೋಸ್ತು' (ಉಧೋ ಉಧೋ); ಭವಾನಿ 'ನೀನೆ ಎಲ್ಲ ನೀನೆ ಎಲ್ಲಮಾ' ಎಂದು ಅಖಂಡವಾಗಿ ನಡೆದ ಮುದ್ಘೋಷ ಅದಿತಿರ್ದ್ಯೌ ವರ್ಣನೆಗಿಂತ ಬೇರೆಯಲ್ಲ. ಯಲ್ಲಮ್ಮನ ಭಂಡಾರ (ಅರಿಷಿನ ಪುಡಿ) ಪಡೆದು ಧನ್ಯರಾಗಲು ಲಕ್ಷಾವಧಿ ಭಕ್ತಗಣ ಹುಣ್ಣಿಮೆ [ಚಂದ್ರಾ] ಜಾತ್ರೆಗೆ ಸೇರುತ್ತಾರೆ.'[10]

ಮಾರಿ ಮತ್ತು ಕಾಳಿ ಸಂಪ್ರದಾಯವು ಕರಾಳ ಸಂಪ್ರದಾಯ ಎಂಬುದನ್ನು ಡಾ॥ ಶಂಬಾ ತಮ್ಮ ಸಾಹಿತ್ಯ ಸಂಶೋಧನೆಯಲ್ಲಿ ಮೇಲಿಂದ ಮೇಲೆ ಒತ್ತಿ ಒತ್ತಿ ಹೇಳುತ್ತಾರೆ. ಮಾರಿ ಕೊಲ್ಲುವ ದೇವತೆ ಏನನ್ನು ಕೊಲ್ಲುತ್ತಾಳೆ ಎಂದು ಚರ್ಚಿಸಿ, ಆ ತಪ್ಪು ಹೊಳೆದ ಮೇಲೆ ಅಂಬಾ-ತಾಯಿ ಶಬ್ದವನ್ನು ಸೇರಿಸಿ 'ಮಾರಿಕಾಂಬಾ' ಎಂಬುದಾಗಿ ದೇವಿಯನ್ನು ನಿರ್ಮಾಣ ಮಾಡಿ, ಸುಕ್ಷೇತ್ರಗಳೆಂದು ಹೇಳಿಕೊಳ್ಳುವ ಜನ ಯಾವ ಸತ್ಯವನ್ನು ಹಿಂಬಾಲಿಸಿದ್ದಾರೆ? ಎಂದು ಹಲವು ಬಾರಿ ಸಿಟ್ಟಿಗೆದ್ದಿರುವ ಕೇಳುಗರ ಪ್ರಶ್ನೆಗಳಿಗೆ ಉತ್ತರಿಸಿದ್ದಾರೆ.

ಮಡಿಕೇರಿಯ ಸಾಹಿತ್ಯ ಸಮ್ಮೇಳನದಲ್ಲಿ ಅವರ ಕೊರಳಿಗೆ ಪತ್ರಕರ್ತರು ಹಾಗೂ ಸಂಶೋಧಕರು ಶಂಬಾ ಅವರ ಪರೀಕ್ಷೆಗೆಂದೆ ಬಂದಂತಿತ್ತು. 'ನೀವು ಭಗವದ್ಗೀತೆಯನ್ನು ಟೀಕಿಸಿದ್ದೀರಿ?' ಎಂದಾಗ ಅವರು ನೀಡಿದ ವಿವರ : ಇಲ್ಲ, ನೀವೇ ಹೇಳಿ ಕೃಷ್ಣ ಎಂದರೆ ಕಪ್ಪು. ಕಪ್ಪು ಕತ್ತಲೆಯ ಸಂಕೇತ. ಈ ಸಂಕೇತವುಳ್ಳ ಶಬ್ದದ ಅರ್ಥ ಕಪ್ಪು ಎಂದು ಗೊತ್ತಿದ್ದ 'ಕೃಷ್ಣ' ಅರ್ಜುನ [ಶುಭ]ನಿಗೆ ಬುದ್ಧಿ ಹೇಳುತ್ತಾನೆ. ಕಪ್ಪು ಬೆಳಕಿಗೆ ಬುದ್ಧಿ ಕಲಿಸುವುದನ್ನು ಪ್ರಜ್ಞೆ ತಿಳಿಸುವುದನ್ನು ನೀವು ಒಪ್ಪುತ್ತೀರಾ? ಎಂದಾಗ ಕೆಲವು ಕ್ಷಣ ಒಬ್ಬರು ಇನ್ನೊಬ್ಬರ ಮುಖವನ್ನು ನೋಡತೊಡಗಿದರು. ನೀವು ಏನನ್ನು ಒಪ್ಪುತ್ತೀರಿ? ಬೆಳಕು ಬೇಡವಾಗಿದೆಯೇ? ಇಡೀ ಜೀವನ, ಜೀವನ-ಬದುಕಿನ ಪಾತಳಿಗೆ ಬೆಳಕು ಬೇಕೆ ಏನಃ ಕತ್ತಲೆ ಬೇಕಾಗುತ್ತದೆ ಏನು? ಮರು ಪ್ರಶ್ನೆ ! ಆಗ ಕೆಲವರಿಗೆ ಹೊಳೆದು ನಕ್ಕು, ಇಷ್ಟುವರೆಗೆ ನಮಗೆ ತಿಳಿದೇ ಇದ್ದಿಲ್ಲ ಎಂದು ಉತ್ತರಗಳು ಬಂದು, 'ಬೆಳಕೇ ದೇವರು' ಎಂಬುದನ್ನು ಒಪ್ಪಿಕೊಂಡರು. ಡಾ॥ ಶಿವರಾಮಕಾರಂತರ ಬರಹಗಳನ್ನು ಅವರ ಕೃತಿ

---

[10] ಅದೇ - ಪುಟ 242

'ಬೆಳಕೇ ದೇವರು' ಅವರದೂ ವೈಚಾರಿಕ ಕೃತಿ ಎಂಬುದಾಗಿ ಒಪ್ಪಿದರು. ಈ ಬಗೆಗೆ ವಿವರಬೇಕಾದರೆ 'ಬುಧನ ಜಾತಕ' ಕೃತಿಯನ್ನು ಓದಿ ನನಗೆ ತಿಳಿಸಿರಿ ಎಂದು ಮತ್ತೆ ಹಲವಾರು ವಿವರಗಳನ್ನು ನೀಡಿದರು. ಜೀವನ ನಿಷ್ಠೆಯ ಸ್ವರೂಪ. ಸೂರ್ಯ ಸತ್ಯ; ಬೆಳಕಿನ ಆರಾಧನೆ ನಡೆಯಬೇಕು. ಜೀವನ ಸತ್ಯದ ಸ್ವರೂಪವಾಗಬೇಕು. ಬಹುಜನತೆಗೆ ಆ-ಸತ್ಯದ ರೂಪ ಹಿತವಾದಂತಿದೆ. ಕಾಲಿಯ ಪೂಜೆಯನ್ನು ಯಾರು ಯಾರು ಮಾಡಿದ್ದಾರೆ, ಮಾಡುತ್ತಿದ್ದಾರೆಂಬುದನ್ನು ನೀವುಗಳು ಬರೆದು ತಿಳಿಸಿ, ಜೀವನದ ಸತ್ಯ ಸ್ವರೂಪದ ಮಾರ್ಗ ಹಿಡಿಯಿರಿ. "Lead Kindly Light" ಕವಿಯ ಕವಿತೆಯ ಭಾವವನ್ನು ಒಪ್ಪುವುದಾದರೆ, ಬೆಳಕೇ ದೇವರಲ್ಲವೆ. ಎಲ್ಲ ಕವಿಗಳು ಬೆಳಕನ್ನೇ ಆರಾಧಿಸುತ್ತಾರೆ ಎಂದು ತಿಳಿಯಬೇಡಿರಿ. ಕತ್ತಲೆಯನ್ನು ಆರಾಧಿಸುವ ಕವಿ-ಸಂತರು ಅಲ್ಲಲ್ಲಿ ಕಾಣುತ್ತಾರೆ. ಅವರು ಇತರರ ಮೇಲೆ ಮೋಹ ಮೂಡಿಸುವವರಾಗಿದ್ದಾರೆ. ಅಂತಹ ಮೋಹಕರಿಗೆ ಸರಕಾರಿ ಪ್ರಶಸ್ತಿಗಳು ದೊರಕದೆ ಇಲ್ಲ! ಡಾ|| ಶಂಬಾ ಜೋಶಿಯವರು ಈ ಮಾತುಗಳನ್ನಾಡುವಾಗ ಗಂಭೀರತೆಯು ಅವರ ಮುಖದಲ್ಲಿ ತೋರುತ್ತಿತ್ತು. ನನ್ನದನ್ನೇ ಒಪ್ಪಬೇಕೆಂಬ ಒತ್ತಡ ನನ್ನದಲ್ಲ! ನನ್ನಲ್ಲಿ ತಪ್ಪು ಗ್ರಹಿಕೆ ಇದ್ದರೆ ದಯವಿಟ್ಟು ತಿಳಿಸಿರಿ ಎಂದು ಸುಮ್ಮನಾದರು. ಕೆಲವರು ಟಿಪ್ಪಣೆಗಳನ್ನು ಬರೆದುಕೊಂಡು, ಅವರಿಗೆ ನಮಸ್ಕರಿಸಿ ಅಲ್ಲಿಂದ ತೆರಳಿದರು.

ಇಲ್ಲಿ ಯಲ್ಲಮ್ಮನ ಬಗೆಗೆ ಬರೆಯುತ್ತಾ 'ಮಾರಿ' ಹಾಗೂ 'ಕಾಳಿ' (ಕಾಲಿ) ದೇವತೆಗಳ ಬಗೆಗೆ ತಿಳಿಸಿಯಾಯಿತು. ಈ ನಾಡಿನ ಸಿರಸಿಯ 'ಮಾರಿಕಾಂಬಾ' ಪ್ರಸಿದ್ಧಿಯನ್ನು ಕಂಡು ಇದೇನು? ಎನ್ನಬಹುದು. ಸಾಂಸ್ಕೃತಿಕರಣದ ನೆಪದಲ್ಲಿ ಅನೇಕ ಕಥೆಗಳನ್ನು ಕಟ್ಟಿ ಮಾರಿಕಾಂಬಾ ಶಕ್ತಿದೇವತೆಯಾಗಿದ್ದಾಳೆ ಎಂಬುದನ್ನು ಅನೇಕ ಮಾಧ್ಯಮಗಳಿಂದ ತಿಳಿಸುತ್ತಿದ್ದಾರೆ. ಅದೇ ಬಗೆಯಾಗಿ 'ಕಾಲಿ' ಮಾತೆಯನ್ನು ಕುರಿತು ಪ್ರಚಾರಗಳು ನಡೆದು, ಆರಾಧನೆಗಳಾಗುತ್ತಿವೆ. ಕೇಂದ್ರಗಳು ಸ್ಥಾಪನೆಗೊಂಡಿವೆ. ಇವು ಯಾರಿಗೆ ಎಷ್ಟು ಕಲ್ಪನೆಗಳನ್ನು ನೀಡುತ್ತಿವೆ ಎಂಬುದನ್ನು ನೋಡಬೇಕು.

ಯಲ್ಲಮ್ಮನ ಕೇಂದ್ರಗಳು, ಪೂಜಾ ಸ್ಥಳಗಳು ನಮ್ಮ ನಾಡಿನಲ್ಲಿ ಅಲ್ಲಲ್ಲಿ ಸ್ಥಾಪನೆಗೊಂಡಿವೆ. ಇಲ್ಲಿ ನಡೆಯುವ ಆಚರಣೆಗಳು ತಪ್ಪು ಗ್ರಹಿಕೆಗಳಿಂದ ಕೂಡಿವೆ. ಜೋಗ ಬೇಡುವುದು, ಜೋಗತಿ-ಜೋಗಪ್ಪಗಳಾಗುವುದು ಸಮಾಜಕ್ಕೂ-ಸರಕಾರಕ್ಕೂ ಬೇಡವಾಗಿದೆ. ಆದರೂ ಈ ಕಾರ್ಯ ನಡೆದಿರುವುದು ಸರಕಾರ ಜಡೆಗಳನ್ನು ಕತ್ತರಿಸಿ, ಬೇವು ಉಡಿಗೆಯನ್ನು ಅರಿವೆಯ ಮೇಲೆ ಧರಿಸುವ ಬಗೆಗೆ ತಿಳಿಹೇಳುತ್ತಿದೆ. ನಗ್ನತೆಯೇ ನಡೆದುಹೋಗುವ ಚಂದ್ರಾ-ಚಂದ್ರಗುತ್ತಿಯ ಆಚರಣೆ ಅಮಾನವೀಯವಾದದ್ದು ಎಂದು ತಿಳಿದುಬಂದಿದೆ.

ಯಲ್ಲಮ್ಮನೆಂದರೆ ಅದಿತಿ, ಅದಿತಿ ಎಂದರೆ ಯಲ್ಲಮ್ಮ ಎಂದು ತಿಳಿದ ಮೇಲೆ, ಅದಿತಿ ಹಾಲು ಮತದವರ ದೇವಿ ಎಂಬುದಾಗಿ ಶಂಬಾ ಸ್ಪಷ್ಟ ಪಡಿಸಿದ್ದಾರೆ. 'ವಿಶ್ವಜನನಿ ದೇವರು ಮಾನವಾದಿಗಳು ಎಲ್ಲರೂ 'ಅದಿತೇಃ.... ಜಾತಾಃ ಎಂಬೀ ಬಗೆಯ ವಚನಗಳು ಇವೆ. ಆದುದರಿಂದ ಅದಿತಿ ಎಲ್ಲರ ಅಮ್ಮ. ಎಲ್ಲರೂ ಒಂದೇ ತಾಯಿಯ ಮಕ್ಕಳು;

ಜಾತಿ ಭೇದ ಮೇಲು ಕೀಳು ಎಂಬ ಈ ಬಗೆಯ ಸಂಕುಚಿತ ವಿಚಾರಕ್ಕೆ ಸ್ಥಳವಾ ಇಂಬು ಇಲ್ಲ. ಪುರುಷ ಸೂಕ್ತ ಮತ್ತು ಅದಿತಿಯ ಸ್ತೋತ್ರಗಳನ್ನು ರಚಿಸಿದ ಋಷಿಗಳು 'ವಸುಧೈವ ಕುಟುಂಬಕ' ದೃಷ್ಟಿಯ ಆದಿ ಪುರುಷರು ಎಂದು ಹೇಳಲು ಅಡ್ಡಿತೋರದು.'[11] ಎಲ್ಲಮ್ಮ (ರೇಣುಕೆ) ಸ್ಥಳಗಳು, ಕೆಲವು ಕಡೆಗೆ ಪುಣ್ಯಕ್ಷೇತ್ರಗಳೆಂದು ಬಗೆಯಲಾಗಿದೆ. ಚಂದ್ರಗುತ್ತಿ, ಕೊಕಟನೂರ, ಅಥಣಿ ಇತ್ಯಾದಿ ಸ್ಥಳಗಳು ರೇಣುಕೆ ಮಾತಂಗಿಯರ ಜಾತ್ರಾ ಸ್ಥಳಗಳಾಗಿ ಗ್ರಾಮದೇವತೆಗಳಾಗಿ ಹೆಸರುವಾಸಿಯಾಗಿವೆ. ಹುಣ್ಣಿವೆಗೆ ಜಾತ್ರಾ ರೀತಿಯ ಜನಕೂಡುತ್ತದೆ. ಹಗಲು-ರಾತ್ರಿಗಳ ಪರಿವೆಯೇ ಇವರಿಗಿಲ್ಲ. ಕರ್ನಾಟಕ-ಮಹಾರಾಷ್ಟ್ರಗಳಿಂದ ಜನ ಕಿಕ್ಕಿರಿದು ಕೂಡುತ್ತಾರೆ. ಈಗಿನ ಈ ಆಚರಣೆಗಳು ಪ್ರಜ್ಞಾವಂತರಿಗೆ ಲೈಂಗಿಕ ಆಚರಣೆಗಳೆಂದೇ ತಿಳಿಯುತ್ತಿವೆ. ಯಲ್ಲಮ್ಮನಂತೆ ಮಾತಂಗಿಯೂ ಪುರಾಣಕಾಲದ ವ್ಯಕ್ತಿಯ ಹೆಸರಾಗಿರಬೇಕೆಂದು ಶಂಬಾ ಅವರು ತಿಳಿಸುತ್ತಾರೆ.

ಯಲ್ಲಮ್ಮ ಚಾತುರ್ವರ್ಣ್ಯದವರ ಅದಿತಿ ರೇಣುಕೆಯಂತೆ ಮಾತಂಗಿಯೂ ಆಗಿದ್ದಾಳೆ. ಆದರೆ ವಸಿಷ್ಠನ ಮಡದಿಯ ಹೆಸರು 'ಮಾತಂಗಿ' ಇತ್ತು ಎಂಬುದು ಸ್ಪಷ್ಟ. 'ಮಾತಂಗಿಯು ಇಂದು ಜೋಗತಿಯರ ದೇವಿ. ರೇಣುಕೆಯಂತೆ ಮಾತಂಗಿಯೂ ಎಲ್ಲಮ್ಮ (ಅದಿತಿ) ದೇವಿಗೆ ಸರ್ವಾರ್ಪಣ ಮಾಡಿದ ಯೋಗಿನಿಯಾಗಿರುವ ಶಕ್ಯತೆಯುಂಟು.'[12]

ನಮ್ಮ ನಾಡಿನಲ್ಲಿ ಸವದತ್ತಿ (ಸುಗಂಧಪುರ) ಎಲ್ಲಮ್ಮನ ಪ್ರಸಿದ್ಧ ಕ್ಷೇತ್ರ ಸುತ್ತಲಿನ ರಾಜ್ಯದ ಜನತೆಗೂ ಆಕರ್ಷಕ ಕ್ಷೇತ್ರವಾಗಿದೆ. ರೇಣುಕೆಯ ಮುಖ್ಯಕ್ಷೇತ್ರ. ಎಲ್ಲಮ್ಮನ ಸುತ್ತ ಮಾತಂಗಿ ಇರುವಂತೆ ಸತ್ಯಮ್ಮನು ಇದ್ದಾಳೆ. ಸವದತ್ತಿಯ ಯಲ್ಲಮ್ಮನ ಪಶ್ಚಿಮ ದಿಕ್ಕಿನಲ್ಲಿ ಜೋಗುಳ ಭಾವಿ (ಈಗ ಅಣೆಕಟ್ಟಿನಿಂದ ನೀರು ಆವೃತವಾಗಿರುವ) ಇದೆ. ಬದಿಯಲ್ಲಿ ಸತ್ಯಮ್ಮ ಗುಡಿ ಇದೆ. ಜನ ಇಲ್ಲಿಯೂ ಜೋಗ ಹಾಕುತ್ತಾರೆ. ಬೇಡಿಕೆಗಳನ್ನು ಬೇಡುತ್ತಾರೆ. ಹರಕೆ ಸಲ್ಲಿಸುತ್ತಾರೆ. ನೈವೇದ್ಯ ತೋರಿಸುತ್ತಾರೆ. ಈ ಸತ್ಯವ್ವ(ಮ್ಮ) ಯಾರು ಎಂದು ತಿಳಿಯುವದು ಅವಶ್ಯ. ಒಟ್ಟು ತಿಳಿವಳಿಕೆಯಲ್ಲಿ ಯಲ್ಲಮ್ಮನ ಸಂಬಂಧಿಕಳು ಎಂದು ಅರ್ಥವಾಗುತ್ತದೆ. ಅದು ಜನಪದರ ಕಲ್ಪನೆಯಾಗಿದೆ. ಒಂದು ತ್ರಿಪದಿ

ಯಲ್ಲವ್ವ ನಿನಮಗ ಎಳಿಯ ಪರಶುರಾಮ
ಯಾರ ತೂಗಿದರು ಮಲಗೊಲ್ಲ । ಜೋಗಳಭಾವಿ
ಸತ್ತೆವ್ವ(ಮ್ಮ) ತೂಗಿದರ ಸಪನಿದ್ದೆ ॥

ಏಳುಕೊಳ್ಳಗಳಿಂದ ಆವೃತವಾದ ಈ ಎಲ್ಲಮ್ಮನ ಗುಡ್ಡವು ಹಾಲು ಮತದವರ ಎಲ್ಲರ ಅಮ್ಮ (ಅದಿತಿ), ರಟ್ಟರ ಆಳ್ವಿಕೆಯಲ್ಲಿ ಪದ್ಮಾವತಿಯಾಗಿ ಪೂಜೆಗೊಂಡು.

[11] ಅದೇ ಪುಟ -245

[12] ಅದೇ ಪುಟ -245

ಬಳಿಕ ಸಮೂಹದ ದೇವತೆಯಾಗಿ ಎಲ್ಲರಮ್ಮ ಎಲ್ಲಮ್ಮನಾಗಿ ಪೂಜೆಗೊಳ್ಳುತ್ತಿರುವ ದೇವತೆಯಾಗಿರುವಳು. ನಮ್ಮ ಸಂಸ್ಕೃತಿ ನಿಜ ಸಂಸ್ಕೃತಿಯ ಕಡೆಗೆ ತಿರುಗಬೇಕಾದಲ್ಲಿ ಯಲ್ಲಮ್ಮನ ಕಟ್ಟುಕತೆಗಳು, ಹಾಡುಗಳು ಸಂಗ್ರಹವಾಗಬೇಕೆಂದು ಸಂಶೋಧಕರು ಹೇಳುತ್ತಲೇ ಬಂದಿದ್ದಾರೆ.

ರೋಗ ರುಜಿನಗಳು ಬರಬಾರದೆಂದು ಬೇಡಿಕೊಳ್ಳುವ ಜನರಿಗೆ, ಅನೀತಿ ಆಚರಣೆಗಳಿಗೆ, ಮೂಢನಂಬಿಕೆಗಳಿಗೆ ಬೆಳಕು ನೀಡುವುದು ಅವಶ್ಯವಿದೆ.

### (v) ಮಲ್ಲಯ್ಯ - ಮಲ್ಹಾರಿ

ಅಧ್ಯಯನ ದೃಷ್ಟಿಯಿಂದ ಮಲ್ಲ + ಅಯ್ಯ (ಮಲೆ + ಅಯ್ಯ) ಮಲ್ಲಯ್ಯ ಎಂಬುದು ಕನ್ನಡಿಗರು ಹೆಸರಿಸಿದ ದೇವರು. ಮಲೆ ಅಂದರೆ ಪರ್ವತ, ಅಯ್ಯಾ ಎನ್ನುವುದು ಸನ್ಮಾನಾರ್ಥಕ ಪದವಾಗಿದೆ. 'ಪರ್ವತ'ಕ್ಕೆ ಕನ್ನಡಿಗರು ಗುಡ್ಡ ಎಂದೂ ಕರೆಯುವುದುಂಟು. ಗುಡ್ಡದ ದೇವರು ಎಂದರೆ, ಗುಡ್ಡಪ್ಪ, ಗುಡದಪ್ಪ, ಗಿರಿಯಪ್ಪ ಎಂದು ವ್ಯಕ್ತಿಗಳಿಗೆ ನಾಮಗಳುಂಟು. ಹಾಗೆ ಗುಡದೂರ, ಗುಡಮಕೇರಿ, ಗಿರಿದೂರು ಎಂದು ಗ್ರಾಮಗಳಿಗೆ ಹೆಸರುಂಟು. ಹಟ್ಟಿಕಾರರಿಗೆ ಅಂದರೆ ಹಾಲು ಮತದವರಿಗೆ, ಗೋಪಾಲಕರಿಗೆ ಪರ್ವತ ರೂಪದಲ್ಲಿ ಶಿವಪೂಜೆ ಇದೆ ಎನ್ನುವುದು ಜನಪದದಲ್ಲೂ ಉಂಟು. ಒಂದು ತ್ರಿಪದಿ

*ಗುಡ್ಡದ ವಾರ‍್ಯಾಗ ಗುಗ್ಗಳ ಹೊಗಿನ್ಯಾಕ*
*ಅಪ್ಪ ಮಲ್ಲಯ್ಯನ ಶಿವಪೂಜೆ । ಆಗುವಾಗ*
*ಆಕಾಶದ ಗಂಟೆ ನುಡಿದಾವs ॥*

ಇನ್ನೊಂದು ಇದೇ ಅರ್ಥ ನೀಡುವ ತ್ರಿಪದಿಯೂ ಇದೆ.

*ಗುಡ್ಡದ ವಾರ‍್ಯಾಗ ಗುಗ್ಗಳ ಹೊಗಿನ್ಯಾಕ*
*ಅಪ್ಪ ಗುಡದಯ್ಯನ ಶಿವಪೂಜೆ । ನಡೆದಾಗ*
*ಆಕಾಶದ ಗಂಟೆ ಘನಲೆಂದೋs ॥*

ಕರ್ನಾಟಕದಲ್ಲಿ ಮಲೆ ಮೂಲ ಶಬ್ದದಿಂದ ಲಿಂಗಾಯತ, ಕುರುಬರು, ಇತರರಲ್ಲೂ ಶೈವ ಸಂಪ್ರದಾಯದ ಮನೆತನಗಳಲ್ಲಿ ಮಲ್ಲಪ್ಪ, ಮಲ್ಲಯ್ಯ, ಮಲ್ಲಿಕಾರ್ಜುನ, ಮಲ್ಲೇಶ, ಮಲ್ಲಿನಾಥ ಎಂಬಂತ ಹೆಸರುಗಳು ದೊರೆಯುತ್ತವೆ. ಈ ರೀತಿ ಮಹಾರಾಷ್ಟ್ರದ ಕೆಲವು ಲಿಂಗಾಯತ ಮನೆತನಗಳಲ್ಲಿ ಹೆಸರಿರುವುದನ್ನು ಕೇಳಿದ್ದೇವೆ. ಹಟ್ಟಿಕಾರರಲ್ಲೂ (ಧನಗರ) ಉಂಟು. ಮಹಾರಾಷ್ಟ್ರದಲ್ಲಿರುವ 'ಮಲ್ಹಾರಿ'ಯನ್ನು ಮಲ್ಲಯ್ಯನೆಂದೇ (ಶಿವನೆಂದೇ) ಕನ್ನಡಿಗರು ಬಗೆದಿದ್ದಾರೆ. ಶಿವದೇವಾಲಯದಂತೆ ಮಲ್ಲಯ್ಯನ ದೇವಾಲಯಗಳ ರಚನೆಗಳುಂಟು. ಪ್ರಸಿದ್ಧವಾದ ಮಂಗಸುಳಿ ಮಲ್ಲಯ್ಯನನ್ನು ಶಿವನರೂಪ ಸ್ವರೂಪವೆಂದು ಬಗೆದಿರುವರು. ಹಾಲು ಮತದ ವಗ್ಗರಲ್ಲಿ ಪರ್ವತ ಮಲ್ಲಯ್ಯನ ಹಾಡುಗಳುಂಟು. ಶ್ರೀಶೈಲ ಸಂಪ್ರದಾಯದ ಕಂಪಿ ಪೂಜಕರು ಪರ್ವತ ಮಲ್ಲಯ್ಯನನ್ನು ಶಿವನೆಂದೇ

ಆರಾಧಿಸುತ್ತಾರೆ. ದೇವರಗುಡ್ಡದ ಮಲ್ಲಯ್ಯನಂತೂ ಶಿವನ ಅವತಾರವೆಂದು ಪ್ರತೀತಿ. ಪೂಜಾ ಮತ್ತು ಜಾತ್ರಾ ವಿಧಾನಗಳೆಲ್ಲವೂ ಭಯ-ಭಕ್ತಿಯಿಂದ ಸಾಗುತ್ತವೆ. ಶಿವ ಅಂದರೆ ಮಲ್ಲಯ್ಯನ ಬಗೆಗೆ ಪುರಾಣಗಳುಂಟು.

'ಮಲ್ಹಾರಿ' ಎಂಬ ದೇವತೆ ಕರ್ನಾಟಕದಲ್ಲಿಲ್ಲವೆಂದು ಹೇಳಬೇಕು. ಈ ದೇವತೆ ಮಹಾರಾಷ್ಟ್ರದ ಜನತೆಯಿಂದ ಪೂಜೆಗೊಳ್ಳುವ ದೇವತೆ. ಮಹಾರಾಷ್ಟ್ರದಲ್ಲಿ ಈ ದೇವತೆಗೆ ಮಲ್ಹಾರಿ, ಮೈರಾಳ, ಮಲ್ಲಾರಿ-ಮಾರ್ತಾಂಡ, ಮಾಳಸಾ ಮಾರ್ತಾಂಡ ಮೊದಲಾದ ವಿವಿಧ ಹೆಸರುಗಳನ್ನು ಶಂಬಾ ಅವರು ಸೂಚಿಸುತ್ತಾರೆ. ಖಂಡೋಬಾ-ಮಲ್ಹಾರಿ ಎಂದು ಬಗೆಯಲಾಗಿದೆ. ಖಂಡೋಬಾ ಶಿವನ ಅವತಾರಿ ಎಂದು ಬಗೆಯುವುದು ತಪ್ಪಾಗುತ್ತದೆ ಎಂಬುದಾಗಿ ಶಂಬಾ ಅವರು ಎರಡು ಕಾರಣಗಳನ್ನು ನೀಡುತ್ತಾರೆ. ಶಿವನ ವಾಹನ ನಂದಿ, ಆದರೆ ಖಂಡೋಬಾನ ವಾಹನ ಕುದುರೆ. ಶಿವನು ತ್ರಿಶೂಲಧಾರಿ, ಖಂಡೋಬಾ ಖಡ್ಗದಾರಿ. ಹಾಗಾದರೆ ಈ ದೇವರು ಯಾರು? ಎಂದು ಶಂಬಾ ಅವರು ಪ್ರಶ್ನಿಸಿ, ಖಡ್ಗದಾರಿ ಖಂಡೋಬಾ ಅಲ್ಲ ಕಾರ್ತಿಕೇಯ ಎಂಬ ವಾದವನ್ನು ಸಂಶೋಧನೆಯಿಂದ ತಳ್ಳಿ ಹಾಕಿದ್ದಾರೆ. ಓಪರ್ಟ ಎಂಬುವರ ಸಂಶೋಧನೆ ನಿರಾಧಾರವೆಂದೂ ಹೇಳಿದ್ದಾರೆ. ಮಲ್ಹಾರಿ-ಖಂಡೋಬಾ ಎಂಬುದು ಕಾರ್ತಿಕೇಯ ಎಂಬ ವಾದ **ಶ್ರೀ ಜಾಧವರಾವ** ಎಂಬವರಿಗೂ ಒಪ್ಪಿಗೆ ಇಲ್ಲ ಎಂಬುದನ್ನು 'ಕಿರ್ಲೋಸ್ಕರ' ಎಂಬ ಪತ್ರಿಕೆಯಲ್ಲಿ ಬಂದ ಸಂಗತಿಯನ್ನೂ ತಿಳಿಸಿದ್ದಾರೆ.

ಇಂದ್ರನಿಗೂ ಪರ್ವತಕ್ಕೂ ಆಗುತ್ತಿರಲಿಲ್ಲ! 'ಈ ದೃಷ್ಟಿಯಿಂದ ಮಲ್ಹಾರಿ (ಮಲೆ + ಅರಿ) ಎಂದರೆ ಪರ್ವತಗಳ ವೈರಿ ಎಂಬುದು ತಿಳಿಯುತ್ತದೆ. ಮಲೆ (ಪರ್ವತ) ಹಾಗೂ ಇಂದ್ರರ ವಿರೋಧ ಇದ್ದಿತೆಂದು ಭಾಗವತ ಪುರಾಣದಲ್ಲಿ (10ನೆಯ ಸ್ಕಂದ) ಇದ್ದಿತೆಂದು ಶಂಬಾ ಅವರು ವಿವರಿಸಿದ್ದಾರೆ. 'ಮಲ್ಹಾರಿ ಮೂರ್ತಿ ಅಶ್ವಾರೋಹಿ ಯಾಗಿದ್ದು ಅವನ ಕೈಯಲ್ಲಿ ಖಡ್ಗದಂತ ಆಯುಧವಿರುವದರಿಂದ ಕೂಡ ಈ ದೇವತೆ ಇಂದ್ರನಿರಬೇಕೆಂದು ಅನಿಸುತ್ತದೆ.'[13]

ಮಲ್ಹಾರಿಗೆ ಆರಾಧನೆಗಳನ್ನು ಸಲ್ಲಿಸುವುದು ಜಾತ್ರೆ ನಡೆಯಿಸುವುದು ವೀರವತ್ತಾಗಿಯೇ ಸಾಗುತ್ತವೆ. ಕೆಲವು ಗ್ರಾಮದೇವ ಯಾದ ಮಲ್ಹಾರಿಗೆ ರಥವನ್ನು ಗೊತ್ತು ಮಾಡಿದ್ದಾರೆ.

ಡಾ॥ ಶಂಬಾ ಅವರು ಮಲ್ಹಾರ-ಮೈಲಾರ, ಮೈರಾಳ ಹೀಗೆ ಶಬ್ದದ ಉತ್ಪತ್ತಿಯನ್ನು ಕೋಶಕಾರರು ಲಕ್ಷ್ಯಕ್ಕೆ ತೆಗೆದುಕೊಂಡಿಲ್ಲವೆಂದೂ, 'ಕುಮಾರವ್ಯಾಸ ಭಾರತದಲ್ಲಿ 'ರಣ-ಮಲ್ಹಾರ' ಶಬ್ದ ಪ್ರಯೋಗ ಇರುವುದನ್ನೂ ತಿಳಿಸಿದ್ದಾರೆ. ಖಂಡೋಬಾ-ಮಲ್ಹಾರಿ

---

[13] ಶಂ.ಬಾ. ಜೋಶಿ - ಮರ್‍ಹಾಟಿ ಸಂಸ್ಕೃತಿ ಕೆಲವು ಸಮಸ್ಯೆಗಳು, ಪುಟ-158, ಅನು: ಕೀರ್ತಿನಾಥ ಕುರ್ತಕೋಟಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಈ ದೇವತೆಗಳು ವೀರರಿಗೆ ಸ್ಫೂರ್ತಿಯನ್ನು ನೀಡುವ ದೇವತೆಗಳಾಗಿರುವುದನ್ನು ವಿವರಿಸಿದ್ದಾರೆ. ಮಲ್ಲಯ್ಯ ಕನ್ನಡಿಗರಿಗೆ ಶಿವನ ದರ್ಶನವಾದರೆ, ಮಹಾರಾಷ್ಟ್ರೀಯರಿಗೆ ಅಲ್ಲಿ ಮಲ್ಹಾರಿ (ಇಂದ್ರ) ಕಾಣುತ್ತಾನೆ. ಅದು ಅವರವರ ಸ್ವಭಾವಕ್ಕೆ ಅನುಗುಣವಾಗಿದೆ.'[14]

ನಮ್ಮ ದೇಶದ ಜನತೆಗೆ ಸೂರ್ಯೋಪಾಸನೆಯು ಹೊಸದೇನೂ ಅಲ್ಲ! 'ಮಲ್ಹಾರಿ-ಮಾರ್ತಾಂಡದಲ್ಲಿ ಸೂರ್ಯೋಪಾಸನೆಯು ಅವಶೇಷ ಇರುವುದನ್ನು ಗಮನಿಸಬೇಕು. ಸೂರ್ಯನಿಗೆ ಮೂರ್ತಿಪೂಜೆ ಇಲ್ಲವೆಂದು ಶಂಬಾ ಅವರು ತಿಳಿಸಿದ್ದಾರೆ. ಬರಬರುತ್ತ ಗುಪ್ತ ವಾಕಾಟಕರ ಕಾಲಕ್ಕೆ* ಸೂರ್ಯನ ಮೂರ್ತಿ ಪೂಜೆ ಪ್ರಾರಂಭವಾದುದನ್ನು ಗಮನಿಸಬೇಕಾಗುವುದು.

'ಮಲ್ಹಾರಿ ಎಂಬ ಹೆಸರು ಹೇಗೆ ಬಂದಿತೆಂಬುದು ಮಲ್ಹಾರಿ ಪುರಾಣದಿಂದಲೇ ಗೊತ್ತಾಗುತ್ತದೆ. ಮಲ್ಲಾಸುರನೆಂಬ ದೈತ್ಯನನ್ನು ಕೊಂದುದರಿಂದ ಮಲ್ಹಾರಿ ಎಂಬ ಹೆಸರು ಪ್ರಾಪ್ತವಾಯಿತೆಂದು ವರ್ಣನೆ ಇದೆ.'[15] ಈ ಬಗೆಯಾಗಿ ಕೆಲವು ಡೊಳ್ಳಿನ ಹಾಡುಗಳು ಕನ್ನಡ ಜನಪದದಲ್ಲಿ ತೋರುತ್ತಿವೆ.

### (vi) ಹನುಮ ದೇವರು ಅಥವಾ ಮಾರುತಿ ದೇವರು

ಕಂನಡ ನಾಡಿಗೆ ಹನುಮನುದಿಸಿದ ನಾಡೆಂದು ಪ್ರಖ್ಯಾತಿ ಇದೆ. ಗ್ರಾಮಗಳಲ್ಲಿ ಹನುಮ, ಹನುಮಾನ, ಹನಮಂತ, ಹನುಮಂತ ದೇವರು ಬಹುಪ್ರಚಲಿತವಾಗಿರುವ ದೇವರು. ಹೆಚ್ಚಾಗಿ ಕರ್ನಾಟಕದಲ್ಲಿ ಈ ದೇವರು ಬಲಶಾಲಿಯ ಪ್ರತೀಕವಾಗಿರುವನು. ಹನಮಾಪುರ, ಹನುಮನೂರ, ಹನುಮಬಾಗ, ಹನುಮಗುಡಿ ಓಣಿ ಮುಂತಾದ ಹೆಸರುಗಳನ್ನು ಕಾಣುತ್ತೇವೆ. ಮಹಾರಾಷ್ಟ್ರದಲ್ಲಿ ಮಾರುತಿ, ಮಾರುತಿದೇವರು (ಆಂಜನೇಯ), ಮಾರುತಿಪುರ, ಮಾರುತಿಮಾಳ, ಮಾರುತಪಲ್ಲೆ ಇತ್ಯಾದಿ ನಾಮಗಳು ವ್ಯಕ್ತಿಗಳಿಗೂ-ಸ್ಥಳಗಳಿಗೂ ಇರುವುದು ಸ್ಪಷ್ಟ. ಇತ್ತೀಚೆಗೆ ಕರ್ನಾಟಕದಲ್ಲಿ ಮಾರುತಿ ಹೆಸರು ವ್ಯಕ್ತಿಗಳಿಗೂ ಧಾರಣವಾಗಿವೆ.

ಕರ್ನಾಟಕ ಮತ್ತು ಮಹಾರಾಷ್ಟ್ರ ಆಂಧ್ರದ ಕೆಲವು ಭಾಗಗಳಲ್ಲಿ ಮಾರುತಿ ಮಂದಿರಗಳು ಬಹುವೈಭವಯುಕ್ತವಾಗಿ ಕಟ್ಟಲ್ಪಟ್ಟಿವೆ. ಮಧ್ಯಪ್ರದೇಶ, ಉತ್ತರ ಪ್ರದೇಶಗಳಲ್ಲೂ ಜೈಹನುಮಾನ, ಜೈಮಾರುತಿ ಮಂದಿರಗಳೂ ಇವೆ. ಗ್ರಾಮದಿಂದ ದೂರದಲ್ಲಿ ಕಟ್ಟಲ್ಪಟ್ಟ ಹನುಮ ಮಂದಿರಗಳು ಆಧುನಿಕರ ಪುರಗಳಲ್ಲಿ ಮಾರುತಿ ಪುರದ ಮಧ್ಯದಲ್ಲಿ ಸೇರಿರುತ್ತಾನೆ.

ಇಂತಹ ಮಾರುತಿಯ ಗುಡಿಗೆ ಜನರು ತಮ್ಮ ಬೇನೆ ಬೇಸರಿಕೆಗಳನ್ನು ಕಳೆದುಕೊಳ್ಳಲು, ನಿರೋಗಿಗಳು ವಿ...ಂತರಾಗಲು, (ಪೈಲ್ವಾನರಾಗಲು) ದಿನಾಲು

---

[14] ಅದೇ ಪುಟ -161

* Vakataka Gupta by R. C. Mujamdar & Dr. Altekar.

[15] ಅದೇ ಪುಟ -163

ಹನುಮ ಮಂದಿರಕ್ಕೆ ಹೋಗುತ್ತಾರೆ. ಗರಡಿಯವರು, ವಿದ್ಯಾರ್ಥಿಗಳು, ರೋಗಿಗಳು, ವ್ಯಾಪಾರಸ್ಥರು, ಸ್ತ್ರೀಯರು ಮುಂತಾದವರು ನಡೆದುಕೊಳ್ಳುವ ರೀತಿ-ನೀತಿ ಪ್ರತಿದಿನವೂ ನಡೆದೇ ಇದೆ. ಅದರಲ್ಲೂ ಶನಿವಾರ ಹನಮಪ್ಪನ ವಾರವಾಗಿದೆ. ಈ ದಿವಸ ಜನಜಾತ್ರೆಯೇ ಕೂಡುತ್ತದೆ. ಕರ್ಪೂರ, ತೆಂಗಿನಕಾಯಿ, ಹೂವಿನಹಾರ ಈ ಹನುಮಂತ ದೇವರಿಗೆ ಅರ್ಪಿತವಾಗಿ, ಹನಮಂತನ ಪ್ರಸಾದ (ಬೂದಿ) ಭಕ್ತರ ಹಣೆ ತುಂಬುತ್ತದೆ. ಭಕ್ತರು ಮನದಲ್ಲಿ ಕಲ್ಪಿತವನ್ನು ಇಷ್ಟಾರ್ಥಗಳನ್ನು ಬೇಡಿಕೊಳ್ಳುತ್ತಾರೆ. ಕಾರ್ತಿಕಮಾಸದಲ್ಲಿ ಮಾರುತಿಯ ಜಾತ್ರೆ ಜರುಗುತ್ತದೆ.

ಈ ದೇವರು ಬಲಭೀಮನೂ ವೀರದೇವನೂ ಆಗಿರುವನು. ಮರುತರ ತಂದೆಯಾದ ರುದ್ರ-ಶಿವನು, ಶಿವನೇರುದ್ರನು; ರುದ್ರನೇ ಶಿವನು ಎಂಬುದು ಸ್ಪಷ್ಟವಾಗಿ ತಿಳಿದುದಾಗಿದೆ.

ರಾಮಾಯಣದ ಹನುಮಂತನಿಗೆ ಜನರು ಹೀಗೆ ನಡೆದುಕೊಳ್ಳುತ್ತಾರೆಂಬುದು ತಿಳಿದ ಸಂಗತಿಯಾದರೂ, ಈ ಮಾರುತಿ ಅದಕ್ಕೂ ಪೂರ್ವಕಾಲದ ದೇವರೆಂಬುದನ್ನು ಶಂಬಾ ತಿಳಿಸುತ್ತಾರೆ.

'ಋಗ್ವೇದದ ಋಚಗಳಲ್ಲಿ ಇದರ ಉತ್ತರವು ನನಗೆ ದೊರೆತಿದೆ. ಈ ದೇವರು ಬರೀ ರಾಮಾಯಣ ಕಾಲದ ದೇವರಲ್ಲ! ವೇದಕಾಲದಿಂದಲೂ ಪರಂಪರೆಯಿಂದಲೂ ಬಂದ ದೇವರು ಇದು. ಮರುತರೆಂಬ ಹೆಸರಿನಲ್ಲಿ ವೇದಕಾಲದಲ್ಲಿ ಪೂಜೆಗೊಳ್ಳುತ್ತಿದ್ದ ದೇವತೆಯನ್ನೇ ವಾಲ್ಮೀಕಿಯು ತನ್ನ ಪ್ರತಿಭಾ ಶಕ್ತಿಯ ಪ್ರಭಾವದಿಂದ ರಾಮಾಯಣದ ಕುಂದಣದಲ್ಲಿ ಹೊಳೆವ ಒಂದು ರತ್ನವನ್ನಾಗಿ ಮಾಡಿದ್ದಾನೆ. ರಾಮಾಯಣ ಕಾಲದ ಒಬ್ಬ ಮಹಾವೀರನಿಗೆ ಮಾರುತಿಗೆ, ವೇದ ಕಾಲದ ಮರುತ್ ಪರಂಪರೆಯನ್ನು ತಂದು ತಳಕು ಹಾಕಿದ್ದಾನೆ. ನಮ್ಮ ಆದಿಕವಿ ಪಂಪನು ಅರಿಕೇಸರಿಯನ್ನು ವಿಕ್ರಮಾರ್ಜುನನನ್ನು ಮಾಡಿದಂತೆ.'[16]

ವಾಲ್ಮೀಕಿಯು ರಾಮಾಯಣದಲ್ಲಿ ಅಂಗದ, ನೀಲ ಜಾಂಬವರನ್ನು ಬಿಟ್ಟು ಮಾರುತಿಯ ಯೋಜನೆಯನ್ನೇ ಸಂಜೀವಿ ತರುವ ಕಾರ್ಯಕ್ಕೆ ಒಪ್ಪಿಸಿದ್ದು ತುಂಬ ಔಚಿತ್ಯ ತೋರಿದ್ದಾನೆ. 'ಮಾರುತಿಯನ್ನು ಆರಾಧಿಸುವ ಪದ್ಧತಿ ಋಗ್ವೇದದಿಂದ ಕಂಡು ಬರುತ್ತದೆ. ಆ ಪರಂಪರೆಯು ತಲೆ ತಲಾಂತರಗಳಿಂದ ಸಾಗಿ ಬಂದುದನ್ನು ನಮ್ಮ ಹಳ್ಳಿಗರಲ್ಲಿ ಈಗಲೂ ಕಾಣಬಹುದು. ಹನುಮನ (ಮರುತನ) ಹಕ್ಕನ್ನು ವೆಂಕಟೇಶ, ರಾಮ, ಕೃಷ್ಣಾದಿ, ಬೇರೆ ದೇವತೆಗಳು ಕಳೆದುಕೊಂಡಿವೆ. ಹಳ್ಳಿಗರು ಮಾತ್ರ ಇನ್ನೂ ಹನುಮನ (ಮರುತರ) ಬೆನ್ನು ಬಿಟ್ಟಿಲ್ಲ. ವೇದಕಾಲದ ನಡವಳಿಕೆಯು ಅವರಲ್ಲಿ ಇನ್ನೂ ಜೀವಂತವಾಗಿದೆ.'[17]

---

[16] ಶಂ. ಬಾ. ಜೋಶಿ - ಶಿವರಹಸ್ಯ, ಪುಟ 60-61, ಎರಡನೆಯ ಅಚ್ಚು 1949
[17] ಅದೇ ಪುಟ -66

ನಮ್ಮ ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ನೂರಕ್ಕೆ ಅರ್ಧದಷ್ಟು ಗುಡಿಗಳಲ್ಲಿ ಹನುಮಂತ ದೇವರ ಗುಡಿಗಳಿವೆ. 'ಗ್ರಾಮದೇವ ಹನುಮಪ್ಪ'ನಾಗಿದ್ದಾನೆ. ವೈಭವದಿಂದ ಗುಡಿಗಳು ಮತ್ತೆ ರಚನೆಯಾಗುತ್ತಿವೆ. ವೇದಕಾಲದ ದೇವರು ಗ್ರಾಮೀಣ ಜನತೆಯ ಜನಪದ ದೇವರಾಗಿದ್ದಾನೆ ಈ ನಮ್ಮ ಹನುಮಪ್ಪ.

## (vii) ಕೆಲವು ದೇವಿಯರು

'ಜಗದಂಬಾ' ಈ ಶಕ್ತಿದೇವಿಯ ಹೆಸರು ಮಹಾಮಾತೆ, ಲೋಕಜನನಿ, ಸಿಂಹವಾಹಿನಿ, ಮಹಿಷಾಸುರ ಮರ್ದಿನಿ, ಪರಮೇಶ್ವರಿ, ವೈಷ್ಣವೀ, ಲಕ್ಷ್ಮೀ ಮುಂತಾದವುಗಳಾಗಿ ಅರ್ಥ ಹೇಳಿದುದರಿಂದ ಈ ಜಗದಂಬಾ ಹೆಸರು ಸಂದಿಗ್ಧವಾಗಿದೆ ಎಂದು ಶಂಬಾ ಅವರು ತಿಳಿಸುತ್ತಾರೆ. ವೇದ, ಉಪನಿಷತ್ತು, ಪುರಾಣ, ಶಾಸ್ತ್ರ, ಆಗಮುಗಳನ್ನು ಇಡಿಯಾಗಿ ಶ್ರುತಿಯನ್ನು ಅನುಸರಿಸಿದರೆ, ಸ್ಪಷ್ಟವಾದ ಅರ್ಥಗೋಚರಿಸದೆ ವಿವಿಧ ಅರ್ಥಗಳು ಗೋಚರವಾಗಿ, ಅವುಗಳೆಲ್ಲ ಶಕ್ತಿಯ ರೂಪವಾಗಿ ಜಗದಂಬಾಗೆ ರೂಪುಗೊಳ್ಳುತ್ತಿವೆ.

ಕನ್ನಡ ಜನಪದದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಮದೇವತೆಯರನ್ನು ಅಧ್ಯಯನ ಮಾಡಿದಾಗ, ಕರಿಯವ್ವ, ಕಾಟೆವ್ವ, ಮರಗವ್ವ, ಮುರಗಮ್ಮ, ಉದ್ದಮ್ಮ, ಲಕ್ಕಮ್ಮ, ಲಗಮಮ್ಮ, ಕಣ್ಣಮ್ಮ, ಕಾಳಮ್ಮ, ದೊಡ್ಡಮ್ಮ, ಮಂಗಳಮ್ಮ, ಮದ್ದೂರಮ್ಮ, ಮಾರಮ್ಮ, ಕಬ್ಬಾಳಮ್ಮ, ತಾಯಮ್ಮ, ಗುಡಚಮ್ಮ, ಉಡಚಮ್ಮ, ಹುಲಗಮ್ಮ, ಗಂಗಮ್ಮ, ಗೌರಮ್ಮ, ಲಕ್ಷಮ್ಮ, ಹೋಳೆಮ್ಮ, ಚಂಡೆಮ್ಮ ಮುಂತಾದ ಅಮ್ಮಗಳೆಲ್ಲರೂ ಶಕ್ತಿದೇವಿಯರಾಗಿ ಪರಿಣಮಿಸುವ ಸ್ಥಳ ಪುರಾಣಗಳನ್ನು ಜನರು ತಿಳಿಸುತ್ತಾರೆ. ಪ್ರಾಚೀನತೆಯನ್ನು ಹೇಳುತ್ತಾರೆ. ಒಂದಿಲ್ಲೊಂದು ಬಗೆಯಲ್ಲಿ ರಾಕ್ಷಸರನ್ನು ದುಷ್ಟರನ್ನು, ನೀಚರನ್ನು ಈ ಅಮ್ಮಂದಿರು ಕೊಂದಿರುವ ಕಥೆ ಹಾಗೂ ಘಟನೆಗಳನ್ನೂ, ದೃಷ್ಟಾಂತಗಳನ್ನೂ ತಿಳಿಸುತ್ತಿದ್ದಾರೆ, ಹೇಳುತ್ತಿದ್ದಾರೆ. ಅವರ ಬಗೆಗೆ ಸಾಹಿತ್ಯ ಸೃಷ್ಟಿಸುವ ರೀತಿ, ಹಿಂದಿನ ದಾಖಲೆಗಳು ಇಂದಿನ ದನಿ ಸುರಳಿಯಲ್ಲಿ ಮೂಡಿ ಬರುತ್ತಿವೆ. ಅವು ಭಾವಾತ್ಮಕವಾಗಿಯೂ ಇರಬಹುದು.

'ಅಮ್ಮ' ಶಬ್ದದ ಮುಂದೆ 'ದೇವಿ' ಎಂಬ ಅರ್ಥವನ್ನು ಸೇರಿಸಿ, ತಾವೇ ಸೃಷ್ಟಿಸಿದ 'ಅಮ್ಮ'ನಿಗೆ 'ದೇವಿ' ಹೆಸರಿಸುವ ಪದ್ಧತಿ ಒಂದು ರೀತಿಯ ಸಾಂಸ್ಕೃತೀಕರಣವಾಗಿ ಮಾರ್ಪಾಡಾಗುತ್ತಿದೆ. ಅಮ್ಮನಿದ್ದೂ 'ದೇವಿ'ಯರ ಪೂಜೆಯ ದಿನಗಳು ಮಂಗಳವಾರ, ಶುಕ್ರವಾರ ಜರಗುತ್ತಲಿವೆ. ಹೇಳಿಕೆ-ಕೇಳಿಕೆಗಳು ಅಲ್ಲಿ ನಡೆಯುತ್ತಿವೆ. ಕೆಲವರಿಗೆ ಆವೇಶವೂ ಆಗುತ್ತಿದೆ.

'ಗ್ರಾಮದೇವತೆಗಳ ವಿಷಯದಲ್ಲೂ ಸಾಂಸ್ಕೃತೀಕರಣ* ನಡೆದು ಅವುಗಳಿಗೆ ಕೆಲವೆಡೆ ಸಂಸ್ಕೃತದ ಹೆಸರುಗಳೂ ಸಾತ್ವಿಕ ಅಥವಾ ಶಾಸ್ತ್ರೋಕ್ತ ಪೂಜೆಗಳೂ ಸಲ್ಲುತ್ತವೆ.

* Sanskritisation

ಎಷ್ಟೇ ಸಾಂಸ್ಕೃತೀಕರಣವಾಗಿದ್ದರೂ ಗ್ರಾಮ್ಯದೇವತೆಗಳು ತಮ್ಮ ಪ್ರಾಕ್ತನತೆಯನ್ನು ಉಳಿಸಿಕೊಂಡಿವೆ. ಮಾನವ ಶಾಸ್ತ್ರಜ್ಞರಾಗಲಿ, ಜಾನಪದ ಶಾಸ್ತ್ರಜ್ಞರಾಗಲಿ ಗ್ರಾಮ್ಯದೇವತೆಗಳ ಸೂಕ್ಷ್ಮ ಅಧ್ಯಯನಕ್ಕಿಂತ ಸ್ವಾರಸ್ಯವಾದ ವಸ್ತು ಮತ್ತೊಂದು ದೊರಕಲಾರದು. ಅಂತಹ ಅಧ್ಯಯನ ಪುರಾತನ ಮನುಷ್ಯ ಜನಾಂಗದ ಬಗ್ಗೆ ಎಷ್ಟೋ ಬೆಳಕನ್ನು ಚೆಲ್ಲುತ್ತವೆ.'[18]

ಶಂಬಾಜೋಶಿಯವರು ಸಾಂಸ್ಕೃತೀಕರಣವನ್ನು ಒಪ್ಪುತ್ತಾರೆ. ಆದರೆ ಈ ಸಾಂಸ್ಕೃತೀಕರಣ ನಿರ್ಮಾಣಗೊಳ್ಳುವಾಗ ತಪ್ಪುಗ್ರಹಿಕೆ ಅಥವಾ ಧಾರಣ ಆಗುವುದೆಂಬುದನ್ನು ಎಚ್ಚರಿಸುತ್ತಾರೆ. ದೇವರ, ದೇವನ ಹೆಸರಿನಲ್ಲಿ 'ದೆವ್ವನ' ಪೂಜೆ ನಡೆದಿದೆ ಇಂದು ಎಲ್ಲೆಲ್ಲೂ ಎಚ್ಚರ! ಎಚ್ಚರ!' ದೃಷ್ಟಾರನೆಂಬ ಖ್ಯಾತಿಯ ಡೆಕಾರ್ಟ ಹೇಳುವ ಅನುಭವದ ಮಾತು ಇದು. ದೇವನನ್ನು ಮರೆಮಾಚಿ ಕಪಟನಾಟಕ ಸೂತ್ರಧಾರಿ, ವಂಚಕ, ಅನೃತ ಸ್ವರೂಪೀ ಮೃತ್ಯು ತತ್ವವು ಲೋಕದಲ್ಲಿ ಪೂಜ್ಯವಾಗಿದೆ ಎಚ್ಚರ!'[19]

ಈ ಹೇಳಿಕೆಯು ಸತ್ಯವೆನಿಸದೆ ಇರದು. ಗೋಕಾಕ ತಾಲ್ಲೂಕಿನಲ್ಲಿ ಪೂರ್ವದಿಕ್ಕಿಗೆ ಘಟಪ್ರಭೆಯ ದಂಡೆಯ ತಿಗಡಿ ಊರಿನಿಂದಾಚೆ ಒಂದು ತೋಟವಿದೆ. ಅಲ್ಲಿ ಗೆದಲವ್ವ ದೆವ್ವಾಗಿ ತಿರುಗುತ್ತಿದ್ದಾಳೆ ಎಂಬ ಸಂಗತಿ ಈಗ 20 ವರ್ಷಗಳಾಚೆ ಪ್ರಚಲಿತವಿತ್ತು. ಈ ಹೊತ್ತು ಗೆದಲವ್ವ-'ಗೆದಲವ್ವದೇವಿ' ಎಂದು ಪೂಜಾರ್ಹವಾಗಿದ್ದಾಳೆ. ಹೆಸರುವಾಸಿಯಾದ ಸ್ಥಳವಾಗಿದೆ. ಈ ದೃಷ್ಟಿಯಿಂದ 'ಏಳು ಮಕ್ಕಳ ತಾಯಿ'ಯ ನೆನಪಾಗದೆ ಇರದು!

## ಏಳು ಮಕ್ಕಳ ತಾಯಿ

ಕಂನಾಡಿನಲ್ಲಿ ಅಲ್ಲಲ್ಲಿ 'ಏಳು ಮಕ್ಕಳು ತಾಯಿ'ಯ ಪೂಜೆ ನಡೆದಿದೆ. ಈ ಏಳು ಮಕ್ಕಳ ತಾಯಿ ಯಾರು? ಎಂಬುದನ್ನು ಅಲ್ಲಲ್ಲಿ ಮೌಖಿಕವಾಗಿ ಕೇಳಿಯಾಗಿದೆ. ಕೆಲವರು ಬರೆದೂ ಆಗಿದೆ. ಈ ಏಳು ಮಕ್ಕಳ ತಾಯಿ ವಿಧವೆ(ರಂಡೆಮುಂಡೆ) ಆಗಿದ್ದಳು. ತನಗೆ ಏಳೂ ಮಕ್ಕಳನ್ನು ಬಡತನದಲ್ಲಿ ಸಾಕಲಾಗಲಿಲ್ಲ. ಗಂಡನೂ ಬಡತನದಲ್ಲಿ ಬೆಂದು ತೀರಿಹೋಗಿದ್ದನು. ಕಾರಣ ಅವಳೂ ಬಡತನದಿಂದ ಬಳಲುತ್ತ ಚಿಂತಿಸಿ, ಚಿಂತಿಸಿ ಸವೆದಳು. ಆಹಾರವಿಲ್ಲದೆ ತಾನು ತನ್ನ ಮಕ್ಕಳು ಕೊರಗಿದರು. ತಾನೊಬ್ಬಳೆ ಏಕೆ ಸಾಯಬೇಕೆಂದು ಮಕ್ಕಳನ್ನು ಜೀವಘಾತ ಮಾಡಿದಳು. (ಕೆಲವರ ಹೇಳಿಕೆಯಂತೆ ಭಾವಿ ಹಾರಿದರು. ಇನ್ನು ಕೆಲವರು ತಿಳಿಸುವಂತೆ ಅಡುಗೆಯಲ್ಲಿ ವಿಷ ಬೆರೆಯಿಸಿ ನುಂಗಿ ಸತ್ತರು). ಕೆಲವು ದಿನಗಳೆದ ಬಳಿಕ ಆ ತಾಯಿ ದೆವ್ವಾದಳು. ಏಳು ಮಕ್ಕಳು, ಏಳು ಮಕ್ಕಳು, ಬಡತನ ಬಡತನ ಎಂದು ಅರಿಚುತ್ತಲೇ ತಿರುಗುತ್ತಿದ್ದಳು. ಇದರಿಂದ ಆ

---

[18] ಡಾ॥ ಎಂ. ಚಿದಾನಂದಮೂರ್ತಿ, ಹೊಸತು ಹೊಸತು, ಪುಟ-377, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪ್ರ-1993

[19] ಪ್ರೊ॥ ಜ್ಯೋತಿ ಹೊಸೂರು - ಪ್ರಜ್ಞಾ ಪ್ರಕಾಶ, ಭಾಗ-೨, ಪುಟ-30, ಮಾನವಧರ್ಮ ಪ್ರತಿಷ್ಠಾನ ಸಂಸ್ಮರಣ ಸಂಚಿಕೆ.

ಗ್ರಾಮದವರು ಅಂಜಿ ಆಕೆಗೆ ಆಹಾರ ನೀಡುತ್ತಿದ್ದರು. (ಹಾರಾ ಇಡುತ್ತಿದ್ದರು). ಇನ್ನು ಕೆಲವರು ಮೂರ್ತಿ ಮಾಡಿ ಪೂಜಿಸಲು ಸುರು ಮಾಡಿದರು. ಮತ್ತೆ ಕೆಲವರು ಗುಡಿ ಕಟ್ಟಿದರು. ಬಲಿ ನೀಡಿದರು. ರೂಢಿ ಸುರುವಾಯಿತು. ಕಥೆ ಕಟ್ಟಿದರು. ಇದರಿಂದ ಏಳು ಮಕ್ಕಳ ತಾಯಿ ದೇವಿಯಾದಳು. ಬಿಜಾಪೂರ ಜಿಲ್ಲೆಯ ಗೊಳಸಂಗಿ ಗ್ರಾಮದಲ್ಲಿ ಈಗಲೂ ಏಳು ಮಕ್ಕಳ ತಾಯಿಯನ್ನು ಪೂಜಿಸುವುದನ್ನು ಕಾಣುತ್ತೇವೆ.

## (viii) ವೈಭವದ ಶಕ್ತಿ ದೇವತೆಗಳು

### ಶ್ರೀ ಚಾಮುಂಡೇಶ್ವರಿ

ಚಾಮುಂಡಿ, ಚಾಮುಂಡೇಶ್ವರಿ ಎಂದು ಕರ್ನಾಟಕ ಜನತೆಯ ಶಕ್ತಿ ದೇವಿಯಾಗಿ, ದರ್ಶನದೇವಿಯಾಗಿ, ಇಷ್ಟಾರ್ಥಗಳ ಸಿದ್ಧಿದೇವಿಯಾಗಿ ಪೂಜೆಗೊಳ್ಳುತ್ತಿರುವ ಮೈಸೂರಿನ ಚಾಮುಂಡೇಶ್ವರಿ ಬೆಟ್ಟದ ದೇವಿ ಎಂಬುದು ತಟ್ಟನೆ ನಾಡಿನವರಿಗೆ ತಿಳಿದಿರುವ ಜನಪ್ರಿಯ ಹೆಸರೆಂಬುದು ಸತ್ಯ ಸಂಗತಿಯಾಗಿದೆ.

ಆದರೆ ಈ ಪ್ರಸಿದ್ಧಿ ಹೊಂದಿರುವ ದೇವಿಯು ಕನ್ನಡ ಜನಪದರ ನಾಲಿಗೆಯ ಮೇಲಿನ ಜಾನಪದ ಮತ್ತು ಶಿಷ್ಟ ಸಂಸ್ಕೃತಿಗಳನ್ನು ಸಮ್ಮಿಳನಗೊಳಿಸಿಕೊಂಡ ಚಾಮುಂಡೇಶ್ವರಿಯೇ ಆಗಿರುವಳು.

'ಮಹಿಷಾಸುರ ಮರ್ದಿನಿ' ಎಂದು ಪುರಾಣದ ಪುರಾವೆಗಳಿಂದ ಚಾಮುಂಡೇಶ್ವರಿಯಾಗಿ ಮಹಿಷಮರ್ದಿನಿಯಾಗಿ, ಸಿಂಹರೂಪಿಣಿಯಾಗಿ ಶಕ್ತಿ ನಾಮಾವಳಿಯನ್ನು ಹೊಂದಿರುವ ದೇವತೆ ಚಾಮುಂಡೇಶ್ವರಿ.

### ಪೂರ್ವ ಇತಿಹಾಸ

'ವಾಸ್ತವವಾಗಿ ನಾವಿಂದು ಯಾವುದನ್ನು ಚಾಮುಂಡಿ ಬೆಟ್ಟವೆಂದು ಕರೆಯುತ್ತೇವೆಯೋ ಅದನ್ನು ಪುರಾಣಗಳಲ್ಲಿ 'ಮಹಾಬಲಗಿರಿ' ಎಂದು ಉಲ್ಲೇಖಿಸ ಲಾಗಿದೆ. ಸ್ಕಾಂದ, ವಾರಾಹ ಮತ್ತು ಕಾಳಿಕಾಪುರಾಣಗಳಲ್ಲಿ ಈ ಸ್ಥಳ ಮಹಿಮೆಯನ್ನು ಕುರಿತು ಉಕ್ತಿಗಳಿವೆ.'[20]

ಮಾನವರ ಸಂಸ್ಕೃತಿಯ ಪಾತಳಿಗಳನ್ನು ಗುರುತು ಮಾಡುತ್ತ ಹೋದ ಹಾಗೆ, ಮೂಲವಾದ ಸತ್ಯ ಸಂಗತಿಗಳನ್ನು ಬಿಚ್ಚಿ ತೋರಿಸುವ ಕಾರ್ಯ ಸಂಶೋಧನೆಯಲ್ಲಿ ನಡೆಯುತ್ತದೆ. ಮೈಸೂರ ಅರಸರ ಸಾಂಸ್ಕೃತಿಕ ಉತ್ಸವಗಳಿಂದ ಚಾಮುಂಡಿ ಮೂಲದಲ್ಲಿ ಚೌಡಿ, ಚಾಮುಂಡಿ, ಚಾಮುಂಡೇಶ್ವರಿ ಹೆಸರು ಪಡೆದು ವೈಭವದ ದೇವಿಯಾಗಿದ್ದಾಳೆ. ಚೌಡ-ಚಾಮುಂಡ ಅಸುರರನ್ನು ಹೊಡೆದು ಈ ಹೆಸರುಗಳನ್ನು ಪಡೆದ ಐತಿಹ್ಯ ಈ ದೇವಿಗಿದೆ. ಮೈಸೂರಿನ ಸುತ್ತಮುತ್ತಲಿನ ಹಳ್ಳಿ, ಹಟ್ಟಿಗಳಲ್ಲಿ ಚಾಮುಂಡಿಯನ್ನು ಗ್ರಾಮದೇವಿ

---

[20] ಸೂ. ಸುಬ್ರಹ್ಮಣ್ಯಂ, ಶ್ರೀ ಚಾಮುಂಡೇಶ್ವರಿ, ಪು-12, ಐ. ಬಿ. ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು - ಮುದ್ರಣ-1978.

ಎಂದು ಪೂಜಿಸುತ್ತಿದ್ದಾರೆ. 'ಮೈಸೂರ ಅರಸರು ಬೆಟ್ಟದ ಮೇಲಿನ ಮಹಿಷಾಸುರ ಮರ್ದಿನಿಯನ್ನು ಶ್ರೀ ಚಾಮುಂಡೇಶ್ವರಿಯಾಗಿ ತಮ್ಮ ಕಾಲದ ಆರಾಧ್ಯದೇವಿಯಾಗಿ ಪೂಜಿಸಲಾರಂಭಿಸಿದ ಮೇಲೆ ಮರ್ಬಳದ ತೀರ್ಥಕ್ಕೆ ಚಾಮುಂಡಿಬೆಟ್ಟವೆಂಬ ಹೆಸರು ಬಂದು ಜನಪ್ರಿಯವಾಗಿರಬೇಕೆಂಬ ಅಭಿಪ್ರಾಯವಿದೆ.'[21] ಚಾಮುಂಡಿಯ ಬೆಟ್ಟವು ಭಕ್ತ ಜನತೆಯ ಪುಣ್ಯಕ್ಷೇತ್ರವಾಗಿ ಪರಿಣಮಿಸಿದರೆ, ಪ್ರವಾಸಿಗಳಿಗೆ ಅದರಲ್ಲೂ ಮೈಸೂರ ದಸರಾ ಉತ್ಸವದಲ್ಲಿ ಪ್ರೇಕ್ಷಣೀಯ ಸ್ಥಳವಾಗಿದೆ. ವಿಶ್ವವಿಖ್ಯಾತ ದಸರೆ ಹಬ್ಬವು ನಾಡಿನ, ರಾಷ್ಟ್ರೀಯ, ವಿಶ್ವದ ಹಬ್ಬವಾಗಿ ಪರಿಣಮಿಸುತ್ತಿದೆ. ಶಂಬಾ ಜೋಶಿಯವರು ಸಾಂಸ್ಕೃತೀಕರಣ ಮತ್ತು ವೈಭವೀಕರಣಗಳನ್ನು ಅಲ್ಲಗಳೆಯುತ್ತಿರಲಿಲ್ಲ. ಆದರೆ ಅವು ಪ್ರಜ್ಞಾನೇತ್ರದಿಂದ ನಡೆಯಬೇಕೆಂದು ಇಚ್ಛಿಸುತ್ತಿದ್ದರು. ದೇವಿಯ ಪೂಜೆಯನ್ನು ಎರಡು ಉದ್ದೇಶಗಳಿಂದ ಮಾಡಲಾಗುತ್ತಿದೆ. 'ಒಂದು ಅನಿಷ್ಟದ ನಿವಾರಣೆಗಾಗಿ, ಇನ್ನೊಂದು ಸಂಪತ್ತು-ಸಂತತಿಯ ಪ್ರಾಪ್ತಿಗಾಗಿ' ಎಂದು ಪದೇ ಪದೇ ಹೇಳುತ್ತಿದ್ದರು. ಕೆಲವು ಮಠಾಧೀಶರು ದೇವಿಯನ್ನು ಸ್ತುತಿಸುವುದು ದೇವಿ ಪುರಾಣವನ್ನು ಓದಿಸುವುದು ಪರಂಪರೆಯಾಗಿರುವುದನ್ನು ಕಾಣುತ್ತೇವೆ. ಬಹುಶಃ ಅವರದು ಮೊದಲನೆಯ ಉದ್ದೇಶ ಇರಬಹುದೆಂದು ನನ್ನೆದುರು ಒಮ್ಮೆ ಹೇಳಿರುವುದುಂಟು. ಜನಪದರ ಸ್ತುತಿಗಳು ಎರಡೂ ಇಚ್ಛೆಗಾಗಿ ಇರಬಹುದು. ಆದರೆ ತಮ್ಮ ಇಚ್ಛೆ ಈಡೇರುವುದಕ್ಕಾಗಿ ನರಬಲಿ-ಪ್ರಾಣಿಬಲಿ ಇವೆಲ್ಲವುಗಳೂ ರಕ್ತದ ಬಗೆಗಿನವು ಮತ್ತು ಮೂಢತನದವುಗಳೂ ಆಗಿವೆ. ಸಾಧುಪ್ರಾಣಿಗಳನ್ನು ಬಲಿಕೊಡುವುದು, ಕ್ರೂರ ಪ್ರಾಣಿಗಳನ್ನು ಬಲಿಕೊಡದೇ ಇರುವುದು ಅಭ್ಯಸನೀಯವಾದ ಸಂಗತಿ ಎಂಬುದಾಗಿಯೂ ತಿಳಿಸಿರುವರು. ಪೂಜೆಯನ್ನು ಸಲ್ಲಿಸುವ, ಬಲಿಯನ್ನು ನೀಡುವ ಸಂಪ್ರದಾಯ ಅಮಂಗಳ, ಹಿಂಸಾತ್ಮಕ, ಅಶುಭ ಸೂಚಕಗಳೇ ಆಗಿವೆ. ಗ್ರಾಮದೇವತೆಗಳ ಗುಡಿಯ ಸುತ್ತಮುತ್ತ ನಾಗಪ್ರತಿಮೆಗಳನ್ನಿಟ್ಟಿರುವುದನ್ನು ಕಾಣುತ್ತೇವೆ. ನಾಗನನ್ನು ಪೂಜಿಸುವ ಸಂಪ್ರದಾಯವು ಸಾಗಿದೆ. ಇದು ಬಹು ಪುರಾತನವಾಗಿರುವುದನ್ನು ಋಗ್ವೇದ ಕಾಲದಿಂದಲೂ ಕಾಣುತ್ತೇವೆ. ಕರ್ನಾಟಕದ ಕರಾವಳಿಯ ಪ್ರದೇಶದಲ್ಲಿ 'ನಾಗಮಂಡಲ'ವನ್ನು ರಚಿಸಿ ಪೂಜಿಸುತ್ತಿರುವ ವೈಭವದ ಕಾರ್ಯಾಚರಣೆಯನ್ನು ಕಾಣುತ್ತೇವೆ. ಕೆಲವೆಡೆಗಳಲ್ಲಿ ಭೂತ ಕುಣಿತ, ಭೂತದ ಕೋಲುಗಳಿಗೆ ಹರಕೆ ಹೊರುತ್ತಾರೆ. ಇವೆಲ್ಲವುಗಳು ಅರಿವಿನಿಂದಾದವುಗಳೇ? ಎಂಬುದಾಗಿ ಶಂಬಾ ಪ್ರಶ್ನಿಸುತ್ತಿದ್ದರು. "ಇಂದಿನ ಪೂಜೆ ಯಾರದು ಜೀವನದ್ದೋ ಮೃತ್ಯುವಿನದೋ? ಈಗ ಅಂದಿನ ಋಷಿವರ್ಗವೂ ಇಲ್ಲ; ಯಜ್ಞ ಸಂಪ್ರದಾಯವೂ ಇಲ್ಲ. ಇರಬೇಕೆಂದರೂ ಮರಳಿ ಇರಲು ಆಚರಿಸಲು ಶಕ್ಯವಿಲ್ಲ. ಸರ್ಪವನ್ನು ಅಂದರೆ ಮೃತ್ಯುವನ್ನು ಆರಾಧಿಸುತ್ತಿರುವುದು ಮಾತ್ರ ನಿಜವಿದ್ದಷ್ಟೇ ಆದರೆ, ಸರ್ಪವನ್ನು ಎಂದರೆ ಸಂಕಟ ವಿಪತ್ತು ಮೃತ್ಯುವನ್ನೇ ದೇವರೆಂದು ಆರಾಧಿಸುತ್ತಿರುವೆವು ಎಂದು ಕಣ್ಣು ತೆರೆದು ನೋಡಿ ಒಪ್ಪು ಇಚ್ಛೆ ಮಾತ್ರ ನಮಗಿಲ್ಲ!'[22]

---

[21] ಅದೇ ಪುಟ - 16

[22] ಶಂಬಾ ಜೋಶಿ - ಋಗ್ವೇದ ಸಾರ, ನಾಗಪ್ರತಿಮಾ ವಿಚಾರ ಭಾಗ-೨, ಮೂಲ ಪ್ರಬಂಧ, ಪ್ರಸಾರಾಂಗ, ಮೈ.ವಿ.ವಿ.-1971, ಪುಟ-49.

ಈ ರೀತಿಯಾದ ನಾಗಪೂಜೆ ಎಂದಿನಿಂದ ಪ್ರಾರಂಭವಾಗಿದೆ. ಮೂಲದಲ್ಲಿ ಯಾರು ಇದನ್ನು ಕಲ್ಪಿಸಿದರು ಎಂಬ ಪ್ರಶ್ನೆಗೆ ಶಂಬಾ ಅವರ ವಿಶೇಷ ಅಧ್ಯಯನದ ದೇವತೆಗಳ ಬಗೆಗಿನ ಸಂಶೋಧನ ಕೃತಿ 'ಋಗ್ವೇದ ಸಾರ' ನಾಗಪ್ರತಿಮಾ ವಿಚಾರವೇ ಸಾಕ್ಷಿ.

'ಮಾನವ ಜನಾಂಗಕ್ಕೆ ಮೊತ್ತಮೊದಲು ದೇವತೆಗಳ ಅಸ್ತಿತ್ವವು ತಿಳಿದು ಬಂದುದು. ಮೈಯಲ್ಲಿ 'ಆವೇಶ' ಬರುತ್ತಿದ್ದ ಕೆಲವೊಂದು ಭಾವೋನ್ಮತ್ತ 'ಭಕ್ತ' ವರ್ಗದಿಂದಲೇ, ಆದಕಾರಣ ನಾಗಪೂಜೆ ಎಂದರೆ 'ನಾಗ'ನು ಮೈಯಲ್ಲಿ ಬರುತ್ತಿದ್ದಂತಹ ಒಂದು 'ದಿವ್ಯ' ವ್ಯಕ್ತಿಯ ಪೂಜೆಯಿಂದಲೇ ಈ ಸಂಪ್ರದಾಯವು ಆರಂಭವಾಗಿದೆ ಎಂಬಲ್ಲಿ ಸಂದೇಹವೇ ಇಲ್ಲ.'[23]

ಶಂಬಾ ಅವರ ಸಾಹಿತ್ಯ, ಸಂಸ್ಕೃತಿ, ಸಂಶೋಧನೆ, ವೈಚಾರಿಕತೆಗಳ ಚಿಂತನಶೀಲ ಗತಿಯನ್ನು ಗೌರೀಶ ಕಾಯ್ಕಿಣಿ ಒಪ್ಪಿಕೊಂಡು 'ಅದಿತಿ, ಅಂಭೃಣಿ, ಬ್ರಾಹ್ಮಣಸ್ವತಿ, ವಿಶ್ವಕರ್ಮ, ಮರಗವ್ವ, ಎಲ್ಲಮ್ಮ, ಮಾರಿ, ಮಾಳವ್ವ ಇತ್ಯಾದಿ ದೇವತಾ ವಿಚಾರವು ಮಾರ್ಮಿಕವಾಗಿದೆಯೆಂದರೆ ಏನೂ ಆದಂತೆ ಅಲ್ಲ. ವಿಶೇಷತಃ ಎಲ್ಲಮ್ಮ ಮತ್ತು ಅದಿತಿ ಇವರ ಕುರಿತು ವಿಶ್ಲೇಷಣೆ, ಹಾಗೆಯೇ ಕೊಟ್ಟರೀದೇವಿ ಕೊಟ್ಟರವ್ವ, ಕೊಟ್ಟರಪ್ಪ, ಅದೇ ರೀತಿ ಮುರುಗ ಮರುಳ, ಮರಿಯಪ್ಪ (ಕುಮಾರ ರುದ್ರ) ಇವರ ಮೂಲ ಮೌಲ್ಯ ಮಾಪನವು ಅತ್ಯಂತ ಉದ್ಬೋಧಕವಾಗಿದೆ. ಶಬ್ದ ಸಂಕೇತದ ಒಳಗಿನ ವಿಚಾರದ ಗುಟಿಕೆಯನ್ನು ಒಡೆದು ತೋರಿಸುವ ವಿಚಕ್ಷಣತೆಯು ಶಂಬಾ ಅವರ ಪ್ರತಿಭೆಯ ಒಂದು ಲಕ್ಷಣವಂತೆ.[24] ಶಂಬಾ ಅವರು ವೇದಗಳನ್ನು ರಚಿಸಿದ ಋಷಿವರ್ಗವನ್ನು ಕೃತಜ್ಞತೆಯಿಂದ ನೆನಯಿಸುತ್ತಾರೆ. ಮೂಲ ವೇದದ ಬರಹಗಳನ್ನು ತಿರಿವಿದವರನ್ನು ಕಟುವಾಗಿ ನಿಂದಿಸುತ್ತಾರೆ.



[23] ಅದೇ ಪುಟ - 7

[24] ಗೌರೀಶ ಕಾಯ್ಕಿಣಿ - ಪ್ರಜ್ಞಾನೇತದ ಬೆಳಕಿನಲ್ಲಿ - ಪುಟ - 95,ಕಾಲಗತಿ ಪ್ರಕಾಶನ ರಾಯಬಾಗ, ಜ|| ಬೆಳಗಾವಿ - ಪ್ರಕಟಣೆ - 1982.

# ಅನುಬಂಧ

## (1) ಮಾನವ ಧರ್ಮದ ಪ್ರತಿಪಾದಕ

ಡಾ॥ ಶಂಕರ ಬಾಳದೀಕ್ಷಿತ ಜೋಶಿಯವರು ಕನ್ನಡ ಸಾಹಿತ್ಯ, ಸಂಸ್ಕೃತಿ, ಸಂಶೋಧನೆಗಳಲ್ಲಿ ಕೆಲಸ ಮಾಡಿ, ಮಾನವತಾವಾದದ ವಿಚಾರಗಳನ್ನು ಅವರ ಕೃತಿಗಳಲ್ಲಿ ಹಾಗೂ ಬಾಳು-ಬದುಕಿನಲ್ಲಿ ತೋರಿಸಿಕೊಟ್ಟಿದ್ದು ಸುಸ್ಪಷ್ಟವಾಗಿದೆ.

ಶಂ.ಬಾ. ಅವರು ವಿನಯಶೀಲರಾಗಿದ್ದರು. ಸತ್ಯ ಆಚರಣೆಗೆ ಮನಸ್ಸು ಹಿಗ್ಗಿಸುತ್ತಿದ್ದರು. ಆದರೆ ಸತ್ಯ ಆಚರಣೆಯಂತೆ ನಟಿಸುವವರನ್ನು ಸೇರುತ್ತಿರಲಿಲ್ಲ! ನಯ-ವಿನಯಗಳು ಮನುಷ್ಯನ ಬಾಳಿಗೆ ಅವಶ್ಯ ಬೇಕಾಗಿರುವ ಸಂಸ್ಕೃತಿಯ ಎಳೆಗಳಾಗಿವೆ. ಅವು ಮಾನವನನ್ನು ಮುಂದಕ್ಕೆ ಒಯ್ಯುವುವು. ಹಲವರ ಪ್ರೀತಿಗೆ ಪಾತ್ರರನ್ನಾಗಿ ಮಾಡುವುವು. ನಯ-ವಿನಯವಿಲ್ಲದವರು ಸುಸಂಸ್ಕೃತರೇ ಅಲ್ಲ. ಸಂಸ್ಕೃತಿಯನ್ನು ಆಚರಿಸಲು ನಯವು ಶ್ರದ್ಧಾಪೂರ್ವಕವಾಗಿ ಇರಬೇಕಾದುದು. ಇದರಿಂದ ಹಾನಿ ಕಡಿಮೆ, ಲಾಭವೇ ಹೆಚ್ಚು. 'ಮಾನ ಕೊಡುವವರೇ ಮಾನ ಪಡೆಯುವವರಾಗಿರುತ್ತಾರೆ' ಎಂಬುದು ಜಗದ ನೀತಿಯಾಗಿದೆ. ಈ ಜಗತ್ ನೀತಿಯನ್ನು ಗಂಭೀರವಾಗಿ ತಿಳಿಯತಕ್ಕದೆಂದು ಅನೇಕ ಘಟನೆಗಳ ಮೂಲಕ, ಕಥೆಗಳ ಮೂಲಕ ಸಿದ್ಧಪಡಿಸುತ್ತಿದ್ದರು. ಇವು ನಿಮ್ಮಲ್ಲಿರಲಿ, ಯಾರ ಹೆಸರನ್ನು ಹೇಳುವುದು ಬೇಡ ಎಂಬುದಾಗಿ ತಿಳುವಳಿಕೆಯನ್ನು ಶಂಬಾ ನಗುನಗುತ್ತಾ ತಿಳಿಸುತ್ತಿದ್ದರು.

ಆತ್ಮಪ್ರಜ್ಞೆಯನ್ನು ಹೊಂದಿದ್ದ ಶಂಬಾ ಅವರು ತಮ್ಮ ಕೆಲಸಗಳಿಗಾಗಿ ಯಾರಿಗೂ 'ಜೀಯಾ', 'ಹೌದಪ್ಪ' ಎಂದನ್ನಲಿಲ್ಲ. ಸತ್ಯದ ಆಚರಣೆ ಇದೆ ಎಂದು ತಿಳಿದಾಗ ಸಹಜವಾಗಿ ಅವರ ಎರಡು ಕೈಗಳು ಹೃದಯದ ಮೇಲೆ ಕಾಣಿಸಿಕೊಂಡು, ಹಾಗೆ ಕ್ಷಣ ಹೊತ್ತು ನಿಲ್ಲುತ್ತಿದ್ದವು.

ಶಂಬಾರವರು ಜಾತಿಯ ವಿಚಾರದಲ್ಲಿ ಮಾನವತಾವಾದಿಯಾಗಿದ್ದರು. ಮಾನವರೆಲ್ಲ ಒಂದೇ ಎಂಬುದನ್ನು ಬಾಲ್ಯದಲ್ಲಿಯೇ ಆಚಾರ್ಯರೆದುರು ಆಡಿ ತೋರಿದರು. ಜೀವನದಲ್ಲಿ-ಸಾಹಿತ್ಯದಲ್ಲಿ ಆಚರಿಸಿ ತೋರಿದರು. ಕೆಲವು ಬ್ರಾಹ್ಮಣರು ಶಂಬಾ ಅವರನ್ನು, ಇವನೊಬ್ಬ ವಿಚಿತ್ರ ಬ್ರಾಹ್ಮಣನೆಂದು ಕರೆದರು. ಅನ್ಯ ಮಹಿಳೆಯೊಬ್ಬಳ ಹೆರಿಗೆ ತಮ್ಮ ಮನೆಯಲ್ಲಾಯಿತು. ಸಂಬಂಧಿಕಳಲ್ಲದವಳ ಹೆರಿಗೆಯನ್ನು ಈ ಬ್ರಾಹ್ಮಣ ಮಾಡಿಸುತ್ತಿದ್ದಾನಲ್ಲ, ಮಡಿ-ಮೈಲಿಗೆಗಳಿಲ್ಲವೇ? ಎಂದು ಟೀಕಿಸುವ ಜನರಿಗೆ, ತಾವು-ತಮ್ಮ ಪತ್ನಿ ಪಾರ್ವತಿಬಾಯಿ ಎಷ್ಟು ಕರುಣಾಮಯಿಗಳು ಎಂಬುದನ್ನು ಅವರು ಸಹಾಯದ ಆಚರಣೆಯಲ್ಲಿ ತೋರಿದರು.

ಶಂ. ಬಾ. ದೇವರ ಗುಡಿಗಳಿಗೆ ಹೋಗುವುದಿಲ್ಲ! ಕೈ ಮುಗಿಯುವುದಿಲ್ಲ! ಎಂಬ ಟೀಕೆಗಳು ಮೇಲಿಂದ ಮೇಲೆ ಅವರನ್ನು ಪೀಡಿಸಲಾರಂಭಿಸಿದವು. ಅವರು ಅಂತಹ

ಜನರಿಗೆ 'ಮೂರ್ತಿಯಲ್ಲಿ ದೇವರಿದ್ದಾನೇನು?' ಎಂಬುದಾಗಿ ಕೇಳಿ, ಶಕ್ಯವಾದರೆ ನನಗೆ ದಯಮಾಡಿ ತೋರಿಸುವಿರಾ? ಇಲ್ಲದಿದ್ದರೆ ನನ್ನನ್ನೇಕೆ ಪೀಡಿಸುವಿರಿ ಎಂದು ಕಠೋರವಾಗಿ ನುಡಿದ ಪ್ರಸಂಗಗಳು ಹಲವಾರು. ಒಮ್ಮೆ ಅವರ ಆತ್ಮೀಯ ಮಿತ್ರರೆನ್ನುವವರು 'ಎಲೋ ಶಂಬಾ ನೀನು ಒಂದು ಕಡೆಗೆ ಗುಡಿಗೆ ಹೋದ ಸುಳಿವು ಸಿಕ್ಕಿದೆ. ಇದಕ್ಕೇನು ಹೇಳುವೆ?' ಎಂದು ಪ್ರಶ್ನಿಸಿದರು. "ಹೌದು ನಾನು ಒಂದಲ್ಲ, ಅನೇಕ ಅಪರಿಚಿತ ಗುಡಿಗಳನ್ನು ನಿರೀಕ್ಷಿಸಿದ್ದೇನೆ. ಗುಡಿಯ ಒಳಗೂ-ಹೊರಗೂ ಯಾಕೆ ಗೊತ್ತೆ? ನಮ್ಮ ನಾಡಿನ ಜನರ ಇತಿಹಾಸ-ಸಂಸ್ಕೃತಿ ಇಲ್ಲಿ ಏನೇನು ಮಾಡಿದೆ ಎಂಬ ಸಾಕ್ಷಿಗಳನ್ನು ಅರಿಯಲು ಮಾತ್ರ." ಇದಕ್ಕೇನು ಅನ್ನುತ್ತಿ? ಎಂದು ಶಂಬಾ ಕೇಳಿದಾಗ, ಆತ್ಮೀಯ ಮಿತ್ರರು ತಮಗೆ ಗೊತ್ತಿಲ್ಲದೆ ಕೈಮುಗಿದು ಕ್ಷಮೆ ಕೇಳಿದರಂತೆ.

ಶಂಬಾ ಜೋಶಿ ಅವರು ಮಾನವ ಭೂಮಿಯ ಮೇಲೆ ಮಾನವನಾಗಿ ಬದುಕಬೇಕೆಂಬ ಸುಮಾರ್ಗದ ನುಡಾವಳಿ-ನಡಾವಳಿಗಳನ್ನು ಆಳವಾಗಿ ವಿಚಾರಿಸುತ್ತ ಎಲ್ಲಿ ತಪ್ಪುತ್ತಿದೆ ಎಂಬುದನ್ನು ಬೆರಳಿಟ್ಟು ತೋರಿಸುತ್ತ ಬಂದಿದ್ದಾರೆ.

ಮಾನವ ಧರ್ಮ ಬೆಳೆದರೆ ಮಾತ್ರ ಜನ ಒಬ್ಬರನ್ನೊಬ್ಬರು ಅರಿಯಲು ಸಾಧ್ಯ. ಜಗತ್ತು, ನೆಮ್ಮದಿ-ಶಾಂತಿಯಿಂದ ಮುಂದುವರೆಯಬಹುದಾಗಿದೆ. ನನ್ನ ಕಾರ್ಯದಲ್ಲಿ ತಪ್ಪಿದ್ದರೆ ತಿಳಿಸಿ ಹೇಳಿರೆಂದು ಶಂಬಾ ವಿನಂತಿಸಿಕೊಳ್ಳುತ್ತಿದ್ದುದು ಪದೇ ಪದೇ ನೆನಪಿಗೆ ಬರುವುದು.

ಮರೆತು ಹೋಗುತ್ತಿರುವ ಮಾನವ ಧರ್ಮದ ಪುನರುತ್ಥಾನಕ್ಕಾಗಿ, ಮಾನವ ಧರ್ಮ ಪ್ರತಿಷ್ಠಾನದ ಸ್ಥಾಪನೆಯಲ್ಲಿ ಶಂಬಾ ಅವರೊಂದಿಗೆ ಕೈ ಜೋಡಿಸುವ ಸದವಕಾಶ ಪಡೆದ ನಾನು ಧನ್ಯ.



## (2) ಡಾ. ಶಂಬಾ ಜೋಶಿ ಅವರ ಜೀವನ ನಿಷ್ಠೆ

ಕನ್ನಡ ಸಾಹಿತ್ಯ, ಸಂಸ್ಕೃತಿ, ಸಂಶೋಧನೆಗಳಲ್ಲಿ ಕೆಲಸಮಾಡಿ ಮಾನವತಾವಾದಿ ವಿಚಾರಗಳನ್ನು ತಮ್ಮ ಕೃತಿಗಳಲ್ಲಿ ಹಾಗೂ ತಮ್ಮ ಬದುಕಿನಲ್ಲಿ ತೋರಿಸಿಕೊಟ್ಟ ಸರಳ ವ್ಯಕ್ತಿ ಡಾ. ಶಂಕರಬಾಳ ದೀಕ್ಷಿತ್ ಜೋಶಿ.

೧೮೯೬ರ ಜನವರಿ ೪ ರಂದು ಜನಸಿದ ಇವರು ಪ್ರಾಥಮಿಕ ಏಳನೆಯ ತರಗತಿಯವರೆಗೆ ಓದಿದರು. ಶಿಕ್ಷಕ ತರಬೇತಿ ಮುಗಿಸಿ ಪ್ರಾಥಮಿಕ ಶಿಕ್ಷಕರಾದರು. ಶ್ರದ್ಧೆಯಿಂದ ಜೀವನ ಸಾಗಿಸುತ್ತ, ನಾನು ಯಾರು? ನನ್ನ ಕೆಲಸಗಳೇನು? ಎಂಬ ಅರ್ಥಗ್ರಹಣವನ್ನು ತಾವೇ ಶ್ರದ್ಧಾಪೂರ್ವಕವಾಗಿ ವಿಚಾರಿಸಿ, ಬದುಕಿನುದ್ದಕ್ಕೂ ತೋರಿಸಿಕೊಟ್ಟ ಕನ್ನಡ ಸಾಹಿತ್ಯದ ಅಪೂರ್ವ ವ್ಯಕ್ತಿ ಡಾ. ಶಂಬಾ ಜೋಶಿ.

ಸಂಸ್ಕೃತ ಇಂಗ್ಲೀಷ್ ಭಾಷೆಗಳನ್ನು ಸ್ವಯಂ ಕಲಿತವರು. ಸಂಸ್ಕೃತ ಸಾಹಿತ್ಯಕ್ಕೆ ಮೂಲ ಆಕರವಾದ ಋಗ್ವೇದವನ್ನು ಆಳವಾಗಿ ತಿಳಿದವರು. ಅಲ್ಲಿಯ ನಿನ್ನೆ-ಇಂದು-ನಾಳೆಗಳ (ತ್ರಿಕಾಲ) ಸತ್ಯದ ಬಗೆಗೆ ತಿಳಿದು ಚಿಂತನ-ಮಂಥನಕ್ಕೆ ಇಳಿದವರು. ಸತ್ಯವಾದುದನ್ನು ತಮ್ಮ ಜೀವನದಲ್ಲಿ ಆಚರಣೆಗಳಿಂದ ತೋರುತ್ತಾ ಕಠೋರ ಟೀಕೆಗಳನ್ನು ಎದುರಿಸುತ್ತ ಸಾಗಿದರು. ಕನ್ನಡ ಸಾಹಿತ್ಯಕ್ಕೆ ಹೊಸ ಹೊಸ ಆಯಾಮಗಳನ್ನು ನೀಡಿದರು. ತಮ್ಮ ಅನ್ವೇಷಣೆಯಲ್ಲಿ ಕನ್ನಡ ನಾಡು, ನುಡಿ, ಸಂಸ್ಕೃತಿಗಳ ಹರವು ತೋರಿದರು. ಭಾರತೀಯ ಸಂಸತಿ, ಇತಿಹಾಸದ ಸಂಶೋಧನೆ, ವರ್ತಮಾನ ಸಮಾಜದ ನಡತೆ, ಮಾನವೀಯತೆ, ಧಾರ್ಮಿಕ ಚಿಂತನೆಗಳ ವೈಚಾರಿಕ ಆ ಕೃತಿಗಳನ್ನು ಭಾರತೀಯ ವಿದ್ವತ್ ಜಗತ್ತಿಗೆ ತೋರಿಸಿಕೊಟ್ಟರು ಶಂಬಾ.

ಡಾ. ಶಂಬಾ ಅವರು ವಿನಯಶೀಲರಾಗಿದ್ದರು. ಸತ್ಯದ ಆಚರಣೆಗೆ ಮನಸ್ಸು ಹಿಗ್ಗಿಸುತ್ತಿದ್ದರು. ಆದರೆ ಸತ್ಯದ ಆಚರಣೆಯಂತೆ-ನಟಿಸುತ್ತಿರುವವರನ್ನು ಸೇರುತ್ತಿರಲಿಲ್ಲ. ನಯವಿನಯಗಳು ಮನುಷ್ಯರ ಬಾಳಿಗೆ ಅವಶ್ಯಬೇಕಾದ-ಬೇಕಾಗಿರುವ ಸಂಸ್ಕೃತಿಯ ಎಳೆಗಳು. ಅವು ಮಾನವನನ್ನು ಮುಂದಕ್ಕೆ ಒಯ್ಯುವವು. ಹಲವರ ಪ್ರೀತಿಗೆ ಪಾತ್ರರನ್ನಾಗಿ ಮಾಡುವವು. ನಯ-ವಿನಯ ಇಲ್ಲದವರು ಸುಸಂಸ್ಕೃತರೇ ಅಲ್ಲ. ಸಂಸ್ಕೃತಿಯನ್ನು ಆಚರಿಸಲು ನಯ ಶ್ರದ್ಧಾಪೂರ್ವಕವಾಗಿ ಇರಬೇಕಾದುದು. ಇದರಿಂದ ಹಾನಿ ಕಡಿಮೆ, ಲಾಭವೇ ಹೆಚ್ಚು. ಮಾನ ಕೊಡುವವರೇ ಮಾನ ಪಡೆಯುತ್ತಾರೆ-ಎಂಬುದು ಜಗವ ನೀತಿ. ಈ ಜಗತ್ ನೀತಿಯನ್ನು ಗಂಭೀರವಾಗಿ 'ತಿಳಿಯಬೇಕು'-ಎಂಬುದು ಜಗತ್ ನೀತಿ. ಅನೇಕ ಘಟನೆಗಳ ಮೂಲಕ, ಕಥೆಗಳ ಮೂಲಕ, ನಡಾವಳಿ-ನುಡಾವಳಿ ಮೂಲಕ ಶಂಬಾ ಸಿದ್ಧಪಡಿಸುತ್ತಿದ್ದರು.

---

* 22-4-2000 ರಂದು ಮಾಡಿದ ಶಂಬಾಪತ್ತಿ ಉಪನ್ಯಾಸ.

ಒಬ್ಬ ಕನ್ನಡ ಶಾಲೆಯ ಶಿಕ್ಷಕ ಕನ್ನಡ ಸಾರಸ್ವತ ಲೋಕದಲ್ಲಿ ಸೈ ಎನಿಸಿಕೊಳ್ಳುವ ಕಾರ್ಯವನ್ನು ಮಾಡಿ, ಜೀವನದುದ್ದಕ್ಕೂ ಸತ್ಯಶ್ರದ್ಧೆಯನ್ನು ಆಚರಿಸುತ್ತಾ ಬಂದುದು ಸಮಾನ್ಯ ಸಂಗತಿಯಲ್ಲ. ಆತ್ಮ ಪ್ರಜ್ಞೆಯನ್ನು ಹೊಂದಿದ ಶಂಬಾ ಅವರು ತಮ್ಮ ಕೆಲಸಗಳಿಗಾಗಿ ಯಾರಿಗೂ 'ಜೀಯಾ....ಹೌದಪ' ಎನ್ನಲಿಲ್ಲ. ಸತ್ಯದ ಆಚರಣೆ ಇದೇ ಎಂದು ತಿಳಿದಾಗ ಸಹಜವಾಗಿ ಅವರ ಎರಡು ಕೈಗಳು ಹೃದಯದ ಮೇಲೆ ಕಾಣಿಸಿಕೊಂಡು ಹಾಗೇ ಕ್ಷಣಹೊತ್ತು ನಿಲ್ಲುತ್ತಿದ್ದವು.

ಶಂಬಾ ಪ್ರಾಥಮಿಕ ಶಿಕ್ಷಕ ವೃತ್ತಿಯನ್ನು ಬೆಳಗಾವಿ ಜಿಲ್ಲೆಯ ಚಿಕ್ಕೋಡಿಯಲ್ಲಿ, ಸವದತ್ತಿ ತಾಲ್ಲೂಕಿನ (ಪರಸಗಡ ತಾ.) ಉಗರಗೊಳ್ಳ (ಉಗ್ರಗೊಳ್ಳ)ದಲ್ಲಿ ಮುಗಿಸಿ ಬಳಿಕ ಧಾರವಾಡದಲ್ಲಿ ಬಂದು ನೆಲೆನಿಲ್ಲುವ ಮನಸ್ಸು ಮಾಡಿದರು. ತಾವು ಕಾರ್ಯ ಮಾಡುವ ಎಡೆ ಧಾರವಾಡ ಎಂದು ಖಚಿತ ಮಾಡಿಕೊಂಡರು. ಸಾಹಿತ್ಯ ಕೃಷಿ ಸುರುಮಾಡಿ ಮೊದಲು 'ಕರ್ನಾಟಕ ಮಿತ್ರ' ಪತ್ರಿಕೆಯಲ್ಲಿ ದುಡಿದರು. ಬಳಿಕ ಜೈ ಕರ್ನಾಟಕದಲ್ಲಿ ಲೇಖನಗಳನ್ನು ಪ್ರಸಿದ್ಧಿ ಪಡೆಯಿಸಿದರು. ಸೌಂದರ್ಯ ವಿಚಾರ ಹೊಳೆದುದ್ದು ಆಗಲೇ ಏನೋ ಎಂಬುದನ್ನು ಒಮ್ಮೆ ತಿಳಿಸಿದರು. ಸೌಂದರ್ಯ ವಿಚಾರಕ್ಕೆ ಆಲೂರು ವೆಂಕಟರಾಯರನ್ನು ನೆನೆದುದುಂಟು. ಧಾರವಾಡದಲ್ಲಿ ಗೆಳೆಯರ ಗುಂಪು ಆಗಲೇ ಪ್ರಾರಂಭವಾಗಿತ್ತು. ಆ ಗುಂಪಿಗೆ ವರಕವಿ ದ.ರಾ. ಬೇಂದ್ರೆಯವರೇ ಕೇಂದ್ರ ಬಿಂದುವಾಗಿದ್ದರು. ಗೆಳೆಯರ ಗುಂಪು ಕಂಡ ಕನಸು ಒಳ್ಳೆಯದು. ಕರ್ನಾಟಕ ಪುನರುಜ್ಜೀವನ ಆ ಕನಸಿನಲ್ಲಿತ್ತು. ಅದು ನನಸಗಾಬೇಕು, ಎಂಬ ಶ್ರದ್ಧೆಯ ದುಡಿಮೆಯ ಬಗೆಗೆ ಶಂಬಾ ಸದಾ ತಿಳಿವಳಿಕೆ ನೀಡುತ್ತಿದ್ದರು.

## ಮಾನವತಾವಾದಿ

ಶಂಬಾ ಅವರು ಜಾತಿಯ ವಿಚಾರದಲ್ಲಿ ಮಾನವತಾವಾದಿಯಾಗಿದ್ದರು. ಮಾನವರೆಲ್ಲ ಒಂದೇ ಎಂದು ಬಾಲ್ಯದಲ್ಲಿಯೇ ಮಾತನಾಡತೊಡಗಿದರು. ಅದನ್ನೇ ಜೀವನದಲ್ಲಿ-ಸಾಹಿತ್ಯದಲ್ಲಿ ಆಚರಿಸಿ ತೋರಿದರು. ಕೆಲವು ಬ್ರಾಹ್ಮಣರು ಶಂಬಾ ಅವರನ್ನು ಇವನೊಬ್ಬ ವಿಚಿತ್ರ ಬ್ರಾಹ್ಮಣನೆಂದು ಕರೆದರು. ಅನ್ಯ ಮಹಿಳೆಯೊಬ್ಬಳ ಹೆರಿಗೆ ಅವರ ಮನೆಯಲ್ಲಾಯಿತು. ಈ ಬ್ರಾಹ್ಮಣನಿಗೆ ಮಡಿ ಮೈಲಿಗೆಗಳಿಲ್ಲವೆ? ಎಂದು ಟೀಕಿಸುವ ಜನರಿಗೆ, ತಾವು ತಮ್ಮ ಪತ್ನಿ ಪಾರ್ವತಿಬಾಯಿ ಎಷ್ಟು ಕರುಣಾಮಯಿ ಎಂಬುದನ್ನು ಅವರು ಆಚರಣೆಯಲ್ಲಿ ತೋರಿದರು.

ಶಂಬಾ ದೇವರ ಗುಡಿಗೆ ಹೋಗುವುದಿಲ್ಲ. ಕೈ ಮುಗಿಯುವುದಿಲ್ಲ ಎಂಬ ಟೀಕೆಗಳು ಮೇಲಿಂದ ಮೇಲೆ, ಅವರನ್ನು ಪೀಡಿಸಲಾರಂಭಿಸಿದವು. ಅವರು ಅಂತಹ ಜನರಿಗೆ 'ಮೂರ್ತಿಯಲ್ಲಿ ದೇವರಿದ್ದಾನೇನು? ಎಂದು ಕೇಳಿ ನನಗೆ ದಯಮಾಡಿ ತೋರಿಸುವಿರಾ? ಇಲ್ಲದಿದ್ದರೆ ನನ್ನನ್ನೇಕೆ ಪೀಡಿಸುವಿರಿ? ಎಂದು ಕಠೋರವಾಗಿ ನುಡಿದ ಪ್ರಸಂಗಗಳು ಹಲವಾರು. ಒಮ್ಮೆ ಅವರ ಆತ್ಮೀಯ ಮಿತ್ರ ಎನ್ನುವವರು 'ಎಲ್ಲೋ ಶಂಬಾ ನೀನು ಒಂದು ಕಡೆ ಗುಡಿಗೆ ಹೋದ ಸುಳಿವು ಸಿಕ್ಕಿದೆ, ಇದಕ್ಕೇನು ಹೇಳುವೆ? ಎಂದು ಪ್ರಶ್ನಿಸಿದರು.

ಹೌದು, ನಾನು ಒಂದಲ್ಲ ಅನೇಕ ಗುಡಿಗಳನ್ನು ನೋಡಿದ್ದೇನೆ. ಗುಡಿಯ ಒಳಗೂ-ಹೊರಗೂ ಯಾಕೆ ಗೊತ್ತೆ? ನಮ್ಮ ನಾಡಿನ ಜನರ ಇತಿಹಾಸ, ಸಂಸ್ಕೃತಿಗಳು ಇಲ್ಲಿ ಹೇಗೆ ಮೂಡಿವೆ ಎಂಬ ಸಾಕ್ಷಿಗಳನ್ನು ಅರಿಯಲು ಮಾತ್ರ' ಎಂದರಂತೆ. ಕೇಳಿದ ಮಹಾಶಯ ಅವರಿಗೆ ಕೈಮುಗಿದು ಕ್ಷಮೆಯಾಚಿಸಿದನಂತೆ. ಇದನ್ನು ಎಂ. ಜೀವನಾ ಅವರು ಪ್ರಪಂಚ ಪತ್ರಿಕೆಗೆ ಶಂಬಾ ಅವರನ್ನು ಕುರಿತು ಬರೆಯಲು ಭೆಟ್ಟಿಗೆ ಬಂದಾಗ ಸ್ಪಷ್ಟಪಡಿಸಿದರು.

ಮಡಿಕೇರಿಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ ಡಾ. ಶಂಬಾ ಅವರ ಪಾಲಿಗೆ ಬಂದಿತ್ತು. ಶಂಬಾ ಜೋಶಿ ಅವರು ಸಂಸ್ಕೃತಿಯ ಆಳ ತಿಳಿಯಲು ಗುಡಿಯ ಸಂಸ್ಕೃತಿ, ದೇವತಾ ಹೆಸರುಗಳು, ಮೂರ್ತಿಗಳು, ವ್ಯಂಗ್ಯ ಚಿತ್ರಗಳು, ಜಾನಪದ ಹಾಡುಗಳು, ಗಾದೆಯ ಮಾತುಗಳು, ನಡೆ-ನುಡಿಗಳು, ಇತ್ಯಾದಿ ಇತ್ಯಾದಿಯಾಗಿ ಬಳಸುತ್ತಿದ್ದರು. ಈ ತರಹದ ಬರಹಗಳು 'ಹಾಲುಮತ ದರ್ಶನ'ದ ಗ್ರಂಥದಿಂದ ಅವರ ಮುಂದಿನ ಸಂಶೋಧನಾ ಕೃತಿಗಳಲ್ಲಿ ಹಾಸು-ಹೊಕ್ಕಾಗಿರುವುದನ್ನು ಕಾಣಬಹುದು.

ಶಂಬಾ ಅವರ ದೃಷ್ಟಿಯಲ್ಲಿ ಭಕ್ತಿ, ಶ್ರದ್ಧೆ, ನಿಷ್ಠೆ ಈ ಶಬ್ದಗಳ ಅರ್ಥ ಒಂದೇ ಎಂದು ಮೇಲಿನ ನೋಟಕ್ಕೆ ಕಾಣುತ್ತದೆ. ಗುರುಗಳಲ್ಲಿರಬೇಕಾದದ್ದು, ಹಿರಿಯರಲ್ಲಿರಬೇಕಾದದ್ದು, ರಾಷ್ಟ್ರಕ್ಕೆ ಇರಬೇಕಾದದ್ದು ಭಕ್ತಿಯೇನೋ ನಿಜ. ಆದರೆ ಶ್ರದ್ಧೆ ನಿಷ್ಠೆಗಳು ಭಕ್ತಿಗಿಂತ ಹೆಚ್ಚಿನ ಹಿರಿಮೆಯನ್ನು ಆಚರಣೆಯಲ್ಲಿ ಪಡೆದುಕೊಂಡಿವೆ ಎಂದು ಹೇಳುತ್ತಿದ್ದರು. ತಾವು ಸತ್ಯದ ಆಚರಣೆಯಲ್ಲಿ ಒಮ್ಮೆ ಶ್ರದ್ಧೆ ಎಂಬುದಾಗಿ, ಇನ್ನೊಮ್ಮೆ ನಿಷ್ಠೆ ಎಂಬುದಾಗಿ ಬರೆಯುತ್ತಿದ್ದುದನ್ನು ನೆನಪಿಸಿ ಹೇಳುತ್ತಿದ್ದರು. ನೀನು ಅಪ್ಪನ ಮಗನೊ? ಅವ್ವನ ಮಗನೊ? ಎಂದು ಪ್ರಶ್ನಿಸಿ ಕೇಳಿದಂತೆ-ಈ ಶಬ್ದಗಳ ಸೃಷ್ಟಿಯಾದಂತಿದೆಯೆಂಬ ಮನೋಭಾವ ತೋರುತ್ತಿದ್ದರು.

ದೇಶದ ರಾಜಕೀಯ ರಂಗದಲ್ಲಿ ನಡೆದ ಅಹಿತಕರ ಘಟನೆಗಳ ಬಗೆಗೆ ನೊಂದುಕೊಳ್ಳುತ್ತಿದ್ದರು. ಪ್ರಜಾಪ್ರಭುತ್ವ ಒಳ್ಳೆಯದ್ದಾಗಿದೆ. ವಿಶ್ವದ ಆಡಳಿತ ಪದ್ಧತಿಗಳಲ್ಲಿ ಇದು ಆದರ್ಶಪ್ರಾಯ. ಆದರೆ ಇದರಲ್ಲಿ ಆಡಳಿತಗಾರರು ಸತ್ಯನಿಷ್ಠುರರಾಗಿರಬೇಕು. ತಮ್ಮಿಂದ ತಪ್ಪಾಗಬಾರದೆಂಬ ಎಚ್ಚರಿಕೆ ಇರಬೇಕು. ತಮ್ಮ ಆಡಳಿತದಲ್ಲಿ ಸತ್ಯದ ಶ್ರದ್ಧೆ ಇರಬೇಕು. ಅಲ್ಲದೆ ಅದೇ ಮುಖ್ಯವಾಗಿಯೂ ಇರಬೇಕು. ಯಾವುದೇ ಪಕ್ಷವಾಗಲಿ ಅವಗುಣದ ಹಾದಿ ಹಿಡಿಯಬಾರದು. ಜನಕಲ್ಯಾಣ ಸಾಧ್ಯವಾಗುವುದು, ಆಡಳಿತದಲ್ಲಿ ನಿಷ್ಠೆ ತೋರಿದಾಗ ವಿವೇಕ ಇರಲೇಬೇಕು ಎಂಬ ವಿಚಾರಗಳ ರಾಜಕೀಯ ಜನರಿಗೆ ಮಾರ್ಗದರ್ಶನವಾಗಿರುತ್ತಿದ್ದವು.

ಶಂಬಾರವರ ಇನ್ನೊಂದು ಹೇಳಿಕೆಯನ್ನು ಇಲ್ಲಿ ನೋಡೋಣ. 'ಪೂರ್ಣತೆಯ ಆದರ್ಶದಲ್ಲಿ ಶ್ರದ್ಧೆಯಿಂದ ದೃಷ್ಟಿಯನ್ನು ಸ್ಥಿರಗೊಳಿಸಿ, ತನ್ನ ಅನುದಿನದ ನಡವಳಿಕೆಯಲ್ಲಿ

ಅಪೂರ್ಣತೆಯ ಅರಿವು ಇರುವಲ್ಲಿಯೇ ಮಾನವರ ಕ್ಷೇಮವಿದೆ. ಅಪೂರ್ಣತೆಯ ಮೂಲಕವಾಗಿಯೇ ಈ ಲೋಕದ ಎಲ್ಲ ವಸ್ತುಗಳು ಒಂದಕ್ಕೊಂದು ಪೂರಕವಾಗಿ ಪೋಷಕವಾಗಿ ಇರಬಲ್ಲವು. (ಸಮಾಜ ದರ್ಶನ) ಹಾಗೇ ಮಾನವ ವಿಕಾಸದ ಬಗೆಗೆ ತನ್ನ ಅರಿವನ್ನೇ ಗುರುವಾಗಿ ಇಟ್ಟುಕೊಂಡು ಲೋಕಕಲ್ಯಾಣದ ದಾರಿಯಲ್ಲಿ, ಅಂದರೆ ಸತ್ ಮಾರ್ಗದಲ್ಲಿ ಬೆಳಕಿನಿಂದ ಬೆಳಕಿಗೆ ಸಾಗುತ್ತ ಮುನ್ನಡೆವಲ್ಲಿಯೆ ಮಾನವ ಸಮಾಜದ ವಿಕಾಸವಿದೆ ಎಂಬ ವಿವರ ನೀಡಿದ್ದಾರೆ.

ಶಂಬಾ ಜೋಶಿ ಅವರು ಮಾನವ ಭೂಮಿಯ ಮೇಲೆ ಮಾನವನಾಗಿ ಬದುಕಬೇಕೆಂಬ ಸುಮಾರ್ಗದ ನಡಾವಳಿ-ನಡಾವಳಿಗಳನ್ನು ಆಳವಾಗಿ ವಿಚಾರಿಸುತ್ತ ಎಲ್ಲಿ ತಪ್ಪುತ್ತಿದೆ ಎಂಬುದನ್ನು ಸುಮಾರು ನಲ್ವತ್ತು ಸಾಹಿತ್ಯ-ಸಂಶೋಧನಾ ಕೃತಿಗಳನ್ನು (ಅನುವಾದ ಹಾಗೂ ಒಂದು ಮರಾಠಿ ಕೃತಿ ಸೇರಿ) ರಚಿಸಿದ್ದಾರೆ. 'ಸನಾತನ ಧರ್ಮ' ಎಂಬ ಕೃತಿಯ ಪ್ರತಿಯು ದೊರಕಬೇಕಾಗಿದೆ. ಅವರು ಕೆಲವು ಕವಿತೆಗಳನ್ನು ಬರೆದ ಸೂಚನೆಗಳಿವೆ. (ಎಲ್.ಎಸ್. ಶಾಸ್ತ್ರೀಜಿ, ಬೆಳಗಾವಿ ಇವರ ಹೇಳಿಕೆ.) ಅವು ದೊರಕಿಲ್ಲ.

'ಸೌಂದರ್ಯ ವಿಚಾರ' ಕೃತಿ ಸರ್ವರಿಗೂ ವಿಚಾರ ಮಾಡಲು ಹಚ್ಚಿದ ಕೃತಿ. ಹಾಗೆ 'ಅಸಂತೋಷವೇ ಏಳ್ಗೆಯ ಮೂಲ' ಎಂಬ ಕೃತಿ ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ ಭಾಗ-1 ಮತ್ತು ಭಾಗ-2 (ಈ ಕೃತಿಗೆ ಕೇಂದ್ರ ಸಾಹಿತ್ಯ ಪುರಸ್ಕಾರ ದೊರಕಿದೆ) ಋಗ್ವೇದ ಸಾರ; ನಾಗಪ್ರತಿಮಾ ವಿಚಾರ ಅವರಿಗೆ ಮೈಸೂರು ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ (ಡಿ.ಲಿಟ್.) ದೊರಕಿದ ಕೃತಿ. 'ಪ್ರವಾಹ ಪತಿತರ ಕರ್ಮ, ಹಿಂದೂ ಎಂಬ ಧರ್ಮ', 'ವೈವಸ್ವತ ಮನುಪ್ರಣೀತ ಮಾನವ ಧರ್ಮದ ಆಕೃತಿ' ಮತ್ತು 'ಬಿತ್ತಿದ್ದನ್ನು ಬೆಳೆದುಕೋ' ಡಾ ಶಂಬಾ ಜೋಶಿ ಪಾಂಡಿತ್ಯವನ್ನು ತೆರೆದು ತೋರಿಸುವ, ಸೂಚಿಸುವ ಕೃತಿಗಳಾಗಿವೆ. ಮಾನವ ಧರ್ಮ ಬೆಳೆದರೆ ಮಾತ್ರ ಜನ ಒಬ್ಬರನ್ನು ಇನ್ನೊಬ್ಬರು ಅರ್ಥ ಮಾಡಿಕೊಳ್ಳಲು ಅರಿತುಕೊಳ್ಳಲು ಸಾಧ್ಯ. ಇದರಿಂದಾಗಿಯೇ ಜಗತ್ತು ಶಾಂತಿ ಮತ್ತು ನೆಮ್ಮದಿಯಿಂದ ಮುಂದುವರೆಯಬಹುದಾಗಿದೆ. ನನ್ನ ಕಾರ್ಯದಲ್ಲಿ ತಪ್ಪಿದ್ದರೆ, ತಿಳಿಸಿ ಹೇಳಿ ಎಂದು ಶಂಬಾ ಅವರು ವಿನಂತಿಸಿಕೊಳ್ಳುತ್ತಿದ್ದರು. ಅವರ ಈ ವಿನಯದ ಮಾತು ಪದೇ ಪದೇ ನೆನಪಿಗೆ ಬರುತ್ತಿದೆ. ಅವರ ಪ್ರಜ್ಞಾಯುಕ್ತವಾದ ಹೇಳಿಕೆಗಳು ಸಾಲುಗಟ್ಟಿ ಕಣ್ಮುಂದೆ ನಿಲ್ಲುತ್ತದೆ.

ನಮ್ಮ ಒಂದು ಕವಿತೆಯಲ್ಲಿ ಬಂದಿರುವ 'ನೀನಾರಿಗಾದೆಯೋ ಎಲೆ ಮಾನವ' ಎಂಬ ಪಲ್ಲವಿಯು ಅತ್ಯಂತ ಅರ್ಥಗರ್ಭಿತವಾದದ್ದು. ಇದರಲ್ಲಿ ನನ್ನನ್ನು ಅಂತರ್ಮುಖಿಯಾಗಿಸುವ ಸಾಮರ್ಥ್ಯವಿದೆ. ಮಾನವನು ಮರಳಿ ನರನಾಗಿದ್ದಾನೆ ಎಂಬ ನಿಷ್ಕರ್ಷವನ್ನು ಗೋಮುಖದಿಂದ ಬಂದ ಈ ಉಕ್ತಿ ಬೆಂಬಲಿಸುತ್ತದೆ. ಇಂದು ಬೆಳ್ಳಿ, ಬಂಗಾರ, ವಜ್ರ ಮೊದಲಾದ ಉತ್ಸವಗಳನ್ನು ಏರ್ಪಡಿಸುವ ಈ ಪ್ರಸಂಗಗಳಲ್ಲಿ ನಮ್ಮ ಸಾಧನೆಗಳ ಸಿಂಹಾವಲೋಕನವೂ ಅನಿವಾರ್ಯ, ನಮ್ಮ ಪ್ರಗತಿಯಾಗಿದೆ ಎಂಬ ಭ್ರಮೆ

ಹುಟ್ಟಿಸುವ ಮಾತುಗಳು ಕೇಳಿಬರುತ್ತಿವೆ. ಆದರೆ ವಸ್ತುಸ್ಥಿತಿಯು ಇಂತಹ ಮಾತಿಗೆ ಹೊಂದಾಣಿಕೆಯಾಗದು' (ಬಿತ್ತಿದ್ದನ್ನು ಬೆಳೆದುಕೋ).

·ಶಂಬಾ ಗಂಭೀರ ಮನಸ್ಸಿನವರು. ಸೂರ್ಯನ ಸತ್ಯವನ್ನು ಒಪ್ಪಿದವರು. ಮಾನವನ ಬಾಳಿಗೆ ಪ್ರಕಾಶ ಅಗತ್ಯ ಎಂಬುದನ್ನು ತೋರಿದವರು. ಪರಮಗುರಿ ಸಾಧನೆಯೇ ಹೋರಾಟ ಎಂಬುದನ್ನು ತಿಳಿದವರು. ಪ್ರಸಿದ್ಧ ಚಿಂತಕ, ಸಂಶೋಧಕ, ಮಾನವತಾವಾದಿ ಇತ್ಯಾದಿ ಹೆಸರು ಗಳಿಸಿದ ಶಂಬಾ ಬರೆದಂತೆ ಬದುಕಿದರು.

ಈ ಅಪ್ರತಿಮ ವಿದ್ವಾಂಸ ೧೯೯೧ರ ಸೆ. ೨೮ ರಂದು ಧಾರವಾಡದ ಸಾಧನ ಕೇರಿಯಲ್ಲಿ ಇಹಲೋಕವನ್ನು ತ್ಯಜಿಸಿದರು. ಅಚ್ಚರಿಯ ಸಂಗತಿಯೆಂದರೆ ಅವರ ಪತ್ನಿ ಪಾರ್ವತಿಬಾಯಿಯವರು ಇವರಿಗಿಂತ ಐದಾರು ತಾಸು ಮೊದಲು ತೀರಿಕೊಂಡದ್ದು. ಇಬ್ಬರ ಅಂತ್ಯಕ್ರಿಯೆಯೂ ಏಕಕಾಲಕ್ಕೆ ಆಯಿತು.

ಶಂಬಾ ಸಮೂಹ ಸೃಷ್ಟಿಗೆ ಅದರಲ್ಲೂ ಪ್ರಜಾವಂತ ಸಮೂಹಕ್ಕೆ ತಲೆ ಬಾಗುತ್ತೇನೆಂದು ಹೇಳುತ್ತಿದ್ದರು.

ಕೆಲವೊಂದು ವೇಳೆ ಸಮೂಹ ಅರೆಪ್ರಜ್ಞೆಯವರಾದರೆ, 'ಜನಮರುಳೋ ಜಾತ್ರೆ ಮರುಳೋ....ಶಂಭುಲಿಂಗ' ಎಂಬ ಹಾದಿಯನ್ನು ಹಿಡಿಯುತ್ತದೆ ಎಂದವರು ಎಚ್ಚರಿಸುತ್ತಿದ್ದರು.

ಇಡಿಯಾಗಿ ಶಂಬಾ ಅವರ ಸಾಹಿತ್ಯ ಕೃತಿಗಳು ಮೂರು ಬಗೆಯ ಸಂಸ್ಕೃತಿಯನ್ನು ವಿವರಿಸಿವೆ ಎಂಬ ವಿಮರ್ಶೆ ಮೇಲಿಂದ ಮೇಲೆ ಪ್ರಕಟವಾಗುತ್ತಿತ್ತು. ಒಂದು ಕರ್ನಾಟಕ ಸಂಸ್ಕೃತಿ, ಎರಡು ಭಾರತೀಯ ಸಂಸ್ಕೃತಿ ಮತ್ತು ಮೂರನೆಯದಾಗಿ ಮಾನವ ಸಂಸ್ಕೃತಿ ಎಂಬುದಾಗಿ ವಿವರಗಳು ಕೇಳಿಬಂದಿವೆ.

ಶಂಬಾ ಅವರು ಈ ಸಂಸ್ಕೃತಿಯ ಹೊಳವಿನಲ್ಲಿ ನಾಡು, ನುಡಿ, ರಾಜ್ಯ, ದೇಶ, ಜಗತ್ತು ಜೀವನ-ಬಾಳು-ಬದುಕು, ಮನವತಾವಾದ, ಬೆಳಕೇ ದೇವರು, (ದೇವರ ಬಗೆಗೆ), ಸಮಾಜ ದರ್ಶನ, ಅರ್ಥಗ್ರಹಣ ಪದ್ಧತಿ ಇತ್ಯಾದಿ ಇತ್ಯಾದಿ ಸಹಸ್ರಾರು ಪ್ರಕಾಶ ಕಿರಣಗಳನ್ನು ಕನ್ನಡ- ಮರಾಠಿ ಸಾಹಿತ್ಯದಲ್ಲಿ ಮೂಡಿಸಿದ್ದಾರೆ. ಬರಬರುತ್ತಾ ಸಂಶೋಧಕರಿಗೆ-ನಿಜಮಾನವರಿಗೆ ಅವರ ಕೃತಿಗಳು ಮಾರ್ಗದರ್ಶಿಯಾಗಿ ನಿಲ್ಲುತ್ತವೆ. ಅವರ ನಿಷ್ಠುರ ಸಾಹಿತ್ಯ ಬೆಳೆಯುತ್ತದೆ. ಸಾಹಿತ್ಯ ಅಮರ ಎಂಬುದೂ ನಿಷ್ಠೆಯಾಗಿ ನಿಂತು ಮಾರ್ಗದರ್ಶಿಯಾಗುತ್ತದೆ.



# ಕೃಷ್ಣನ ಸಾರಥ್ಯ

ಅನು : **ಕೌಲಗಿ ಶೇಷಾಚಾರ್**

ಕೃಷ್ಣನ ಅಲೌಕಿಕ ಜೀವನದಲ್ಲಿ ಆತ ಅರ್ಜುನನಿಗೆ ಮಾಡಿದ ಸಾರಥ್ಯ ಒಂದು ದಿವ್ಯಪರ್ವವಾಗಿದೆ. ಕೌರವ-ಪಾಂಡವರ ಕಲಹವನ್ನು ಅಳಿಸುವ ಸಲುವಾಗಿ ಕೃಷ್ಣ ಪರಾಕಾಷ್ಠೆಯ ಪ್ರಯತ್ನವನ್ನು ಮಾಡಿದ. ಆದರೆ ದುರ್ಯೋಧನನ ಹಠಮಾರಿತನದಿಂದ ಆ ಎಲ್ಲ ಪ್ರಯತ್ನಗಳು ವಿಫಲವಾದವು. ಕೌರವರಿಗೆ ಕೌರವರ ಭಾಷೆಯಲ್ಲೇ ಉತ್ತರವನ್ನು ಕೊಟ್ಟ ಹೊರತು ಈ ಕಲಹಾಗ್ನಿ ಇಂಗುವುದಿಲ್ಲವೆಂದು ಖಾತರಿಯಾದಾಗ, ಈಗ ಯುದ್ಧ ಆಗಲೇಬೇಕು ಎಂಬೀ ಘೋಷಣೆಯನ್ನು ಕೃಷ್ಣ ಮಾಡಿದ. ಪಾಂಡವರ ವಿಜಯ ನಿಶ್ಚಯವೆಂಬುದನ್ನು ಮಾಡಲು ಆತ ಅರ್ಜುನನ ಸಾರಥ್ಯವನ್ನು ಸ್ವೀಕರಿಸಿದ. ಇದರ ಅರ್ಥ ಪಾಂಡವರ ವಿಜಯವಾಗಲು ಸ್ವತಃ ಕೈಯಲ್ಲಿ ಶಸ್ತ್ರವನ್ನು ಹಿಡಿಯುವುದಕ್ಕಿಂತ ಅರ್ಜುನನ ಸಾರಥ್ಯವನ್ನು ಮಾಡುವುದು ಹೆಚ್ಚಿನ ಮಹತ್ವದ್ದಾಗಿದೆ ಎಂದು ಕೃಷ್ಣನಿಗೆ ಅನಿಸಿದ್ದು ಸ್ಪಷ್ಟವಾಗಿದೆ. ಕೃಷ್ಣ ಈ ನಿರ್ಣಯವನ್ನು ಏಕೆ ತೆಗೆದುಕೊಂಡ? ಸ್ವತಃ ಕೈಯಲ್ಲಿ ಶಸ್ತ್ರವನ್ನು ಹಿಡಿದು ಹೋರಾಡುವುದಕ್ಕೆ ಬದಲು ಅರ್ಜುನನ ಸಾರಥ್ಯವನ್ನು ಸ್ವೀಕರಿಸುವಲ್ಲಿ ಕೃಷ್ಣ ಕಂಡುಕೊಂಡ ಮಹತ್ವವೇನು?

ಕೃಷ್ಣ ಮತ್ತು ಅರ್ಜುನ ಜೀವಕ್ಕೆ ಅಂಟಿಕೊಂಡ ಮಿತ್ರರಾಗಿದ್ದರು. ಆದರೆ ಈ ವ್ಯಕ್ತಿಗತ ಕಾರಣದಿಂದ ಕೃಷ್ಣ ಮೇಲೆ ತಿಳಿಸಿದ ನಿರ್ಣಯವನ್ನು ತೆಗೆದುಕೊಂಡ ಎಂದು ಹೇಳಲಾಗುವುದಿಲ್ಲ. ಕುಶಲ ಬಿಲ್ಲುಗಾರನಿಗೆ ಸಾರಥಿಯೂ ನುರಿತವನಾಗಿರಬೇಕಾದುದು ಅಗತ್ಯವಾಗಿತ್ತು. ಆದ್ದರಿಂದ ಕೃಷ್ಣ ಅರ್ಜುನನ ಸಾರಥ್ಯವನ್ನು ಸ್ವೀಕರಿಸಿದ ಎಂಬೀಯುಕ್ತವಾದವೂ ಒಪ್ಪುವಂತಿಲ್ಲ. ಆ ಕಾಲದಲ್ಲಿ ಎಷ್ಟೋ ಕುಶಲ ಸಾರಥಿಗಳು ಅರ್ಜುನನಿಗೆ ಸಹಜವಾಗಿ ಸಿಗುತ್ತಿದ್ದರು. ಅರ್ಜುನನಿಗೆ ಬರೀ ಕುಶಲ ಸಾರಥಿಬೇಕಿತ್ತು ಎಂದು ತಾನು ಯುದ್ಧದಲ್ಲಿ ಭಾಗವಹಿಸುವ ಬದಲು ಅರ್ಜುನನ ಸಾರಥ್ಯವನ್ನು ಸ್ವೀಕರಿಸುವ ಈ ಕಲ್ಪನೆ ಕೃಷ್ಣನಿಗೆ ಎಂದಿಗೂ ಗ್ರಾಹ್ಯವಾಗಿರಲಿಲ್ಲ.

ಕೃಷ್ಣ ಸಾರಥಿಯಾಗಿದ್ದುದರಿಂದಲೇ ಅರ್ಜುನ ಅಜೇಯನಾದ ಎಂಬೀ ಅಭಿಪ್ರಾಯ ಅನೇಕರಲ್ಲಿ ಇದೆ. ಆದರೆ ಇದು ತೀರ ನಿರಾಧಾರವಾದುದು. ಅರ್ಜುನನ ಸ್ವಯಂಸಿದ್ಧ, ಅನನ್ಯ, ಅಸಾಧಾರಣ ಯುದ್ಧ ಕೌಶಲ್ಯಕ್ಕೆ ಯಾರೊಬ್ಬರ ಸಹಾಯದ - ಕೃಷ್ಣನ ಸಾರಥ್ಯವೂ ಸೇರಿದಂತೆ - ಅವಶ್ಯಕತೆ ಇರಲಿಲ್ಲ. ಭಾರತ ಯುದ್ಧಪೂರ್ವದಲ್ಲೇ ಇದರ ಅನುಭವ ಎಲ್ಲರಿಗೂ ಆಗಿತ್ತು. ದ್ರೌಪದಿಯ ಸ್ವಯಂವರದ ಸಮಯದಲ್ಲಿ ಕರ್ಣ, ದುರ್ಯೋಧನ ಮುಂತಾದವರನ್ನು ಲೀಲಾಜಾಲವಾಗಿ ಸೋಲಿಸಿದ್ದ. ಕರ್ಣನನ್ನು ಓಡುವಂತೆ ಮಾಡಿದ್ದ. ದುರ್ಯೋಧನನನ್ನು ಸೆರೆಹಿಡಿದ. ಚಿತ್ರಸೇನ ಗಂಧರ್ವನನ್ನು ಸೋಲಿಸಿದ್ದು ಈತನೇ. ಗೋಗ್ರಹಣದ ಪ್ರಸಂಗದಲ್ಲಿ ನಡೆದ ಯುದ್ಧದಲ್ಲಿ ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ ಮತ್ತು ಕರ್ಣ ಮುಂತಾದವರ ಶರೀರದಲ್ಲಿ ಮಾಡಿದ ಬಾಣದ ಹೊಡೆತ

ಸಾಯುವವರೆಗೂ ಅವರ ನೆನಪಿನಲ್ಲಿ ಉಳಿಯುವಂತೆ ಇತ್ತು. ಈ ಪರಾಕ್ರಮವನ್ನು ಬೆಳಗಿಸಿದಾಗ ಕೃಷ್ಣ ಅವನ ಸಾರಥಿಯಾಗಿರಲಿಲ್ಲ. ಭೀಷ್ಮ, ದ್ರೋಣ, ಕರ್ಣ, ಸಾತ್ಯಕಿ, ಭೀಮ ಮುಂತಾದ ಯೋಧರು ಎಷ್ಟೇ ಶೂರರಾಗಿದ್ದರೂ ಅರ್ಜುನನ ಪರಾಕ್ರಮದ ಮುಂದೆ ಅವರ ಪರಾಕ್ರಮ ಸಾಮಾನ್ಯವೇ. ಯುದ್ಧದಲ್ಲಿ ಅರ್ಜುನನಿಗೆ ಸೋಲೆಂಬುದು ಗೊತ್ತೇ ಇರಲಿಲ್ಲ.

*ಅನ್ಯೇಽಪ್ಯಸ್ತ್ರಾಣಿ ಜಾನಂತಿ ಜೀಯಂತೇ ಚ ಜಯಂತಿ ಚ ।*
*ಏಕಾಂತ ವಿಜಯಸ್ತ್ವೇವ ಶ್ರೂಯತೇ ಫಾಲ್ಗುನಸ್ಯ ಚ ॥*

ಉ. ಪ.

(ಇತರರೂ ಅಸ್ತ್ರ ವಿದ್ಯೆಯನ್ನು ತಿಳಿದಿದ್ದಾರೆ. (ಕೆಲವು ಸಲ) ಸೋಲುತ್ತಾರೆ ಮತ್ತು ಗೆಲ್ಲುತ್ತಾರೆ. (ಆದರೆ) ನಿಯತವಾದ ಗೆಲುವಾದರೋ ಅರ್ಜುನನ ಬಗ್ಗೆ ಮಾತ್ರ ಕೇಳಿ ಬರುತ್ತದೆ.) ಈ ಸ್ವಲ್ಪ ಮತ್ತು ಮಾರ್ಮಿಕ ಪದಗಳಲ್ಲಿ ಧೃತರಾಷ್ಟ್ರ ಅರ್ಜುನನ ಅಸಾಧಾರಣ ಯುದ್ಧ ಕೌಶಲ್ಯದ ಕಡೆಗೆ ತಪ್ಪಿಲ್ಲದೆ ಬೆರಳನ್ನಿಟ್ಟಿದ್ದಾನೆ. ಅರ್ಜುನನ ಯುದ್ಧ ಕೌಶಲ್ಯದಲ್ಲಿ ಯಾವುದೇ ಕೊರತೆ ಇರಲಿಲ್ಲ. ಕೊರತೆಯನ್ನು ಮುಚ್ಚುವ ಸಲುವಾಗಿ ಕೃಷ್ಣನ ಸಾರಥ್ಯವಾಗಲಿ ಅಥವಾ ಅದರ ಅವಶ್ಯಕತೆಯಾಗಲಿ ಬೇಕಾಗಿರಲಿಲ್ಲ. ಹೀಗಿದ್ದರೂ ಪಾಂಡವರನ್ನು ಜಯಶಾಲಿಗಳನ್ನಾಗಿ ಮಾಡಲು ಅರ್ಜುನನಿಗೆ ಸಾರಥಿಯಾಗುವ ಅವಶ್ಯಕತೆ ಕೃಷ್ಣನಿಗೆ ಏಕೆ ತೋರಿಬಂತು? ಇದನ್ನು ಅರಿಯಲು ಅರ್ಜುನನ ವಿಶಿಷ್ಟ ಸ್ವಭಾವ ರಚನೆಯ ಪರೀಕ್ಷೆ ಅಗತ್ಯವಾಗಿದೆ.

ಕರ್ಣ, ಯುಧಿಷ್ಠಿರ, ಭೀಮ ಮತ್ತು ಅರ್ಜುನ ಈ ನಾಲ್ಕು ಸಹೋದರರಲ್ಲಿ ಸ್ವಭಾವ ರಚನೆಯ ದೃಷ್ಟಿಯಿಂದ ಒಂದು ಮತ್ತು ಮೂರನೆಯವರಲ್ಲಿ ಹೇಗೆ ಸಾಮ್ಯವಿದೆಯೋ ಹಾಗೇ ಎರಡು ಮತ್ತು ನಾಲ್ಕನೆಯವರಲ್ಲಿ ವಿಲಕ್ಷಣ ಸಾಮ್ಯವಿದೆ. ಉಗ್ರತೆ, ಔದ್ಧತ್ಯ, ಎದೆ ನಡುಗಿಸುವ ಪರಾಕ್ರಮ, ಈ ಪರಾಕ್ರಮವನ್ನು ಪ್ರದರ್ಶಿಸುವ ತಡೆಯಿಲ್ಲದ ಇಚ್ಛೆ, ಅಹಂಕಾರದ ರೂಪವನ್ನು ತಾಳುವ ಬಲವಾದ ಆತ್ಮವಿಶ್ವಾಸ ಮತ್ತು ಎಂದಿಗೂ ಆರದ ಹಗೆತನದ ಭಾವನೆ ಇವು ಕರ್ಣ ಮತ್ತು ಭೀಮ ಇವರ ಪ್ರಖರವಾದ ಸ್ವಭಾವ ವಿಶೇಷಗಳಾಗಿವೆ. ಅರ್ಜುನನ ಅನನ್ಯ ಯುದ್ಧಕೌಶಲ್ಯವನ್ನು ಬಿಟ್ಟರೆ, ಯುಧಿಷ್ಠಿರ ಮತ್ತು ಅರ್ಜುನ ಇವರ ಸ್ವಭಾವದ ರಚನೆಯಲ್ಲಿರುವ ಸಾಧರ್ಮ್ಯ ಕ್ಷಣಾರ್ಧದಲ್ಲಿ ಗಮನಕ್ಕೆ ಬರುವಂಥಾದ್ದು. ಇಬ್ಬರಿಗೂ ಸ್ವಜನ ಕಲಹ ಬೇಡವೆಂದು ತೋರುತ್ತದೆ. ಇದನ್ನು ತಪ್ಪಿಸಲು ಸಂದರ್ಭ ಒದಗಿದಾಗ ತಮ್ಮಲ್ಲಿ ಕೀಳುತನವನ್ನು ಹೊತ್ತುಕೊಳ್ಳಲು ಹಿಂದುಮುಂದು ನೋಡಲಿಲ್ಲ. ವಿಚಾರ ದೃಷ್ಟಿಯಿಂದ ಯುಧಿಷ್ಠಿರನೊಡನೆ ಅರ್ಜುನ ಎಷ್ಟರ ಮಟ್ಟಿಗೆ ಏಕರೂಪನಿದ್ದನೆಂದರೆ, ಯುಧಿಷ್ಠಿರನ ಪ್ರತಿಯೊಂದು ಕಾರ್ಯವನ್ನು ಸಮರ್ಥಿಸಲು ತತ್ಪರತೆಯಿಂದ ಮುಂದೆ ಬರುತ್ತಿದ್ದ. ಪಾಂಡವರು ವನವಾಸದಲ್ಲಿ ಇದ್ದಾಗ ಜಯದ್ರಥ ದ್ರೌಪದಿಯನ್ನು ಅಪಹರಿಸಿಕೊಂಡು ಹೋದ ಸಂದರ್ಭದಲ್ಲಿ ಆತ ಆಕೆಯ ಗಂಡಂದಿರ ಬಗ್ಗೆ ಪ್ರಶ್ನಿಸಿದಾಗ ತನ್ನ ಐದು

ಗಂಡಂದಿರ ಸ್ವಭಾವ ವಿಶೇಷಗಳನ್ನು ಆಕೆ ತಿಳಿಸುತ್ತಾಳೆ. "ಈ ನನ್ನ ಪತಿ ಅರ್ಜುನ ಯುಧಿಷ್ಠಿರನ ಸಹೋದರ ಮತ್ತು ಶಿಷ್ಯ" ಎಂಬ ಮಾರ್ಮಿಕವಾದ ಮಾತನ್ನಾಡಿದ್ದಾಳೆ. ಭೀಮ, ನಕುಲ ಮತ್ತು ಸಹದೇವ ಇವರೂ ಯುಧಿಷ್ಠಿರನ ಸಹೋದರರು. ಆದರೆ ಅರ್ಜುನ ಯುಧಿಷ್ಠಿರನ ಸಹೋದರನೂ ಶಿಷ್ಯನೂ ಆಗಿದ್ದ. ಯುಧಿಷ್ಠಿರ ತಪ್ಪುತ್ತಿದ್ದಾನೆ ಅಥವಾ ತಪ್ಪಲೂಬಹುದು ಎಂಬೀ ಕಲ್ಪನೆಗಳು ಅರ್ಜುನನ ಮನಸ್ಸನ್ನು ಎಂದೂ ಮುಟ್ಟುತ್ತಿರಲಿಲ್ಲ. ಯುಧಿಷ್ಠಿರ ಏಕೆ ಜೂಜಾಡಿದ. ಇದರ ಸಮರ್ಥನೆ ಮತ್ತು ಸ್ಪಷ್ಟೀಕರಣವನ್ನು ಅರ್ಜುನನೇ ಮಾಡಿದ. ಅರಗಿನ ಮನೆಯ ಆಪತ್ತಿನಿಂದ ಹೊರಬಂದ ಪಾಂಡವರು ಕಾಡುಮೇಡುಗಳಲ್ಲಿ ಅಲೆಯುತ್ತಾ ರಾತ್ರಿಯಾದ ಕಾರಣದಿಂದ ಭಾಗೀರಥಿ ನದಿಯ ತೀರಕ್ಕೆ ಬಂದರು ಎಂಬೀ ಕಾರಣಕ್ಕಾಗಿ ಗಂಧರ್ವರಾಜ ಅಂಗಾರಪರ್ಣ ಪಾಂಡವರ ಮೇಲೆ ಹಲ್ಲೆ ನಡೆಸಿದ. ಆಗ ಅವನನ್ನು ಲೀಲಾಜಾಲವಾಗಿ ಸೋಲಿಸಿ, "ಇಂದು ಈ ಕುರುರಾಜ ಯುಧಿಷ್ಠಿರ ನಿನಗೆ ಅಭಯವನ್ನು ಕೊಡುತ್ತಿದಾನೆ" ಎಂದು ಹೇಳಿ, ಅವನಿಗೆ ಅರ್ಜುನ ಜೀವದಾನ ಮಾಡಿದ. ಅರ್ಜುನನ ಪರಾಕ್ರಮವೆಲ್ಲವೂ ಯುಧಿಷ್ಠಿರನಿಗಾಗಿಯೇ ಇತ್ತು. "ನಿನ್ನ ಕಲ್ಯಾಣಕ್ಕಾಗಿಯೇ ನನ್ನ ಜೀವನವಿದೆ" ಎಂದು ಯುಧಿಷ್ಠಿರನಿಗೆ ಹೇಳುತ್ತಾನೆ. ಅಲ್ಲದೆ ಅವನ ಭಾವನೆ ಹೀಗೆಯೇ ಇತ್ತು. ಅವನು ಅತಿಶಯ ಶೂರನಾಗಿದ್ದರೂ ತನ್ನ ಶೌರ್ಯ ಸ್ವಜನರ ನಾಶಕ್ಕಾಗಿ ವಿನಿಯೋಗವಾಗಬಾರದೆಂದೇ ಅವನಿಗೆ ಅನಿಸುತ್ತಿತ್ತು. ಈ ವಿಷಯದಲ್ಲಿ ಅವನ ಮತ್ತು ಯುಧಿಷ್ಠಿರನ ವಿಚಾರದೃಷ್ಟಿ ಸಮಾನವಾಗಿತ್ತು. ವ್ಯತ್ಯಾಸವಿಷ್ಟೇ; ಯುಧಿಷ್ಠಿರನ ರೀತಿ ವಿಚಾರಶೀಲತೆಯನ್ನು ದೃಢವಿಶ್ವಾಸವನ್ನು ಆಧಾರಿಸಿದ್ದು, ಆದರೆ ಅರ್ಜುನನದು ಭಾವನೆಯ ಆಧಾರದ ಮೇಲಿನದು. ತುಂಬಿದ ಸಭೆಯಲ್ಲಿ ದ್ರೌಪದಿಯ ವಿಡಂಬನೆಯಾದ ಮೇಲೆ ಭೀಮನು ದುರ್ಯೋಧನ ದುಃಶಾಸನರ ವಧೆಯ, ಅರ್ಜುನನು ಕರ್ಣನ ವಧೆಯ ಪ್ರತಿಜ್ಞೆಯನ್ನು ಮಾಡಿದರು. ಈ ಪ್ರತಿಜ್ಞೆಗಳಲ್ಲಿರುವ ವ್ಯತ್ಯಾಸವನ್ನು ನೋಡುವುದು ಸ್ವಾರಸ್ಯಕರವಾದೀತು. ಭೀಮಸೇನನ ಮೊದಲನೆಯ ಪ್ರತಿಜ್ಞೆ.

*ಪಿತಾಮಹಾನಾಂ ಪೂರ್ವೇಷಾಂ ನಾಹಂ ಗತಮವಾಪ್ನುಯಾಮ್ ।।*

*ಅಸ್ಯ ಪಾಪಸ್ಯದುರ್ಬುದ್ಧೇರ್ಭಾರತಾಪಸದಸ್ಯ ಚ ।*

*ನಪಿಬೇಯಂ ಬಲಾದ್ವಕ್ಷೋ ಭಿತ್ವಾಚೇದ್ ರುಧಿರಂ ಯುಧಿ ।।*

*ಸಭಾ. ಪ. 68-53*

(ಯುದ್ಧದಲ್ಲಿ ಈ ಪಾಪಿ, ದುರ್ಬುದ್ಧಿ, ಭರತ ಕುಲಕಲಂಕ ದುಃಶಾಸನನ ಎದೆಯನ್ನು ಪರಾಕ್ರಮದಿಂದ ಸೀಳಿ ಅವನ ರಕ್ತವನ್ನು ನಾನು ಕುಡಿಯದಿದ್ದರೆ ನನಗೆ ನನ್ನ ಪೂರ್ಜಜರ ಗತಿ ದೊರಕಲಾರದು.)

ಎರಡನೆಯ ಪ್ರತಿಜ್ಞೆ

*ಪಿತೃಭಿಃ ಸಹ ಸಾಲೋಕ್ಯಂ ಮಾಸ್ಮ ಗಚ್ಛೇದ್ ವೃಕೋದರಃ ।*

*ಯದ್ಯೇತಮೂರಂಗದಯಾನ ಭಿಂದ್ಯಾಂತೇ ಮಹಾಹವೇ ।।*

ಮಹಾಯುದ್ಧದಲ್ಲಿ ಈ ನಿನ್ನ ತೊಡೆಯನ್ನು ಗದೆಯಿಂದ ಮುರಿಯದಿದ್ದರೆ ವೃಕೋದರನು (ಭೀಮನು) ತನ್ನ ಪಿತೃಗಳೊಡನೆ ಪಿತೃಲೋಕಕ್ಕೆ ಹೋಗಲಾರ).

*ಸ.ಭಾ.ಪ. 71-14*

ಅರ್ಜುನ ಮೊದಲಿಗೆ ಪ್ರತಿಜ್ಞೆ ಮಾಡುವುದಕ್ಕೇ ಕಾಲ ತಳ್ಳುತ್ತಿದ್ದ. ಕೊನೆಗೆ ಈ ಪ್ರತಿಜ್ಞೆ ಮಾಡಿದ:

*ಅರ್ಜುನಃ ಪ್ರತಿಜಾನೀತೇ ಭೀಮಸ್ಯ ಪ್ರಿಯಕಾಮ್ಯಯಾ ।*

*ಕರ್ಣಂ ಕರ್ಣಾನುಗಾಂಶ್ಚೈವ ರಣೇ ಹಂತಾಸ್ಮಿ ಪತ್ರಿಭಿಃ ॥*

*ಯೇ ಚಾನ್ಯೇ ಪ್ರತಿಯೋತ್ಸ್ಯಂತಿ ಬುದ್ಧಿಮೋಹೇನ ಮಾಂ ನೃಪಾಃ ।*

*ನ ಪ್ರದಾಸ್ಯತಿ ಚೇದ್ ರಾಜ್ಯ ಮಿತೋ ವರ್ಷೇ ಚತುರ್ದಶೇ ।*

*ದುರ್ಯೋಧನೋಽಭಿಸತ್ಕೃತ್ಯ ಸತ್ಯಮೇತದ್ ಭವಿಷ್ಯತಿ ॥*

*ತಾಂಶ್ಚ ಸರ್ವಾನಹಂ ಬಾಣೈರ್ನೇ ತಾಸ್ಮಿ ಯಮಸಾದನಮ್ ॥*

*ಸಭಾ. ಪ. 77-33, 34, 36.*

(ಅರ್ಜುನ ಪ್ರತಿಜ್ಞೆ ಮಾಡುತ್ತಾನೆ. (ಏನೆಂದರೆ) ಭೀಮನಿಗೆ ಪ್ರಿಯವಾದುದನ್ನು ಮಾಡಲು ಕರ್ಣ ಮತ್ತು ಕರ್ಣನ ಹಿಂಬಾಲಕರನ್ನು ಯುದ್ಧದಲ್ಲಿ ಬಾಣಗಳಿಂದ ಕೊಲ್ಲುವೆ. ಮತ್ತು ಇತರ ಯಾವ ರಾಜರು ಬುದ್ಧಿಮೋಹದಿಂದ (ಶತ್ರುಗಳಾಗಿ) ನನ್ನೊಡನೆ ಯುದ್ಧ ಮಾಡುತ್ತಾರೋ ಅವರೆಲ್ಲರನ್ನೂ ನಾನು ಬಾಣಗಳಿಂದ ಯಮಲೋಕಕ್ಕೆ ಕಳುಹಿಸುವೆ. ಇಂದಿನಿಂದ 14 ವರ್ಷಗಳ ಒಳಗೆ ದುರ್ಯೋಧನನು ಸತ್ಕಾರಪೂರ್ವಕವಾಗಿ ರಾಜ್ಯವನ್ನು ಕೊಡದಿದ್ದರೆ, ಈ ನನ್ನ ಮಾತು ಸತ್ಯವಾಗುವುದು.) ಭೀಮನ ಪ್ರತಿಜ್ಞೆಗಳೆಂದರೆ, ಗರ್ಜನೆಯಿಂದ ಇಡೀ ಆಕಾಶವನ್ನು ಸದ್ದು ಮಾಡಿ ಬಡಿಯುವ ಸಿಡಿಲಿನಂತೆ, ಆ ಪ್ರತಿಜ್ಞೆಗಳ ಘೋಷಣೆ ಸಭೆಯಲ್ಲಿ ಎಲ್ಲರಿಗೂ ನಡುಕ ಹುಟ್ಟಿಸದೇ ಇರಲಿಲ್ಲ. ದುರ್ಯೋಧನ ದುಃಶಾಸನರೂ ಸ್ವಲ್ಪ ಕಾಲ ಕಂಗೆಟ್ಟು ಹೋಗುವಷ್ಟುಮಟ್ಟಿಗೆ ತೀಕ್ಷ್ಣತೆ ಮತ್ತು ತೀವ್ರತೆ ಆ ಪ್ರತಿಜ್ಞೆಗಳಲ್ಲಿ ಅಡಗಿದ್ದವು. ಅರ್ಜುನನ ಪ್ರತಿಜ್ಞೆ ಎಷ್ಟು ಸೌಮ್ಯವಾಗಿತ್ತೆಂದರೆ, ಅದನ್ನು ನಿಜವಾದ ಅರ್ಥದಲ್ಲಿ ಪ್ರತಿಜ್ಞೆಯೆಂದು ಹೇಳುವುದೇ ಕಠಿಣವಾಗಿದೆ. ಕರ್ಣನನ್ನು ಕೊಲ್ಲುವೆನೆಂದು ಹೇಳುವುದಕ್ಕಿಂತ, ವನವಾಸ ಕಾಲ ಮುಗಿದ ಮೇಲಾದರೂ ಈ ಅಂತಃಕಲಹವನ್ನು ಶಾಂತಗೊಳಿಸಿ ಎಂಬುದನ್ನು ಹೇಳುವುದಕ್ಕಾಗಿಯೇ ಈ ಪ್ರತಿಜ್ಞೆ ಜನ್ಮ ತಾಳಿದೆಯೆಂದು ಹೇಳಬೇಕು.

ಆದರೆ ಇಷ್ಟು ದೀರ್ಘಕಾಲಾನಂತರವೂ ದುರ್ಯೋಧನನ ಹೃದಯ ಪರಿವರ್ತನೆಯಾಗಲಿಲ್ಲ. ಕೊನೆಯ ಪ್ರಯತ್ನವೆಂದು ಸ್ವತಃ ಕೃಷ್ಣ ಸದ್ಭಾವನೆಯನ್ನು ಮೂಡಿಸಲು ಕೌರವರಲ್ಲಿಗೆ ಹೊರಟ. ಆ ಹೊತ್ತಿನಲ್ಲಿ ಒಪ್ಪಿಗೆ ನೀಡುವಾಗ, ಅರ್ಜುನನು ಹೇಳಿದ ಎಂಬುದರಲ್ಲಿ ಅವನ ತಪ್ಪಿಲ್ಲದ ಮನಃಸ್ಥಿತಿಯ ವಿಶದವಾದ ನೋಟವು

ಕಂಡುಬರುತ್ತದೆ. "ಕೌರವರಲ್ಲಿ ಸದ್ಭಾವನೆಯನ್ನು ಮೂಡಿಸುವುದು ನಿನಗೆ ಅಸಾಧ್ಯವಲ್ಲ" ಎಂದು ಮೊದಲು ಆಶಯವನ್ನು ವ್ಯಕ್ತಪಡಿಸಿದ. ಕೂಡಲೇ "ಕೌರವರನ್ನು ಕೇವಲ ಯುದ್ಧದಿಂದಲೇ ಗೆಲ್ಲುವುದು ಶಕ್ಯವಾಗಿದೆ" ಎಂದು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ. ಮತ್ತೆ "ಯಾವುದರಿಂದ ಶತ್ರುಗಳಿಗೆ ಸದ್ಭಾವನೆಯು ಉಂಟಾಗುವುದೋ ಆ ರೀತಿ ನೀನು ವರ್ತಿಸು" ಎಂದು ಕೃಷ್ಣನಿಗೆ ಸೂಚಿಸುತ್ತಾನೆ. ಕೊನೆಯಲ್ಲಿ "ಕೌರವರಲ್ಲಿ ಸದ್ಭಾವನೆಯನ್ನು ಮೂಡಿಸು ಅಥವಾ ನಿನ್ನ ಇಚ್ಛೆಯಂತೆ ಮಾಡು" ಎಂದು ಹೇಳಿ ಸುಮ್ಮನಾಗುತ್ತಾನೆ. ಸ್ವಜನರೊಡನೆ ಕಲಹ ಮುಂದಾಯಿತೆಂದರೆ, ವಿಷಯ ಪರಿಸ್ಥಿತಿ ಅಪರಿಹಾರ್ಯವಾಗುತ್ತದೆ. ಆದರೆ ಅರ್ಜುನ ಬರಿಯ ದೊಡ್ಡ ಮನಸ್ಸಿನವನಾಗಿರಲಿಲ್ಲ. ಅತಿಶಯಭಾವನಾ ಪ್ರಧಾನನಾಗಿಯೂ ಇದ್ದ. ಇದರಿಂದ ವಿಷಾದದ ಮೋಡ ಹಾ ಹಾ ಎಂದು ಹೇಳುವಷ್ಟರಲ್ಲೇ ಅವನ ಮನಸ್ಸನ್ನು ಆವರಿಸಿಕೊಳ್ಳುತ್ತಿತ್ತು.

ಕೃಷ್ಣ ಸಂಧಾನ ವಿಫಲವಾಯಿತು. ಕೌರವ-ಪಾಂಡವರ ಯುದ್ಧ ಅಪರಿಹಾರ್ಯವಾಯಿತು. ಅರ್ಜುನನನ್ನು ಬಿಟ್ಟು ಕೌರವ ಪಾಂಡವರ ಬಲಾಬಲವನ್ನು ವಿಚಾರ ಮಾಡಿದರೆ ಏನು ಕಂಡು ಬರುತ್ತದೆ? ಪಾಂಡವರ ಸೇನಾಪತಿಯಾಗಿ ಧೃಷ್ಟದ್ಯುಮ್ನನಿದ್ದ. ದ್ರೌಪದಿಯ ಸಹೋದರನಾದುದರಿಂದ ಅವನಿಗೆ ಈ ಗೌರವ ದೊರತಿರಬಹುದು. ಅವನು ಗಳಿಸಿದ ಗೆಲವಿಗಿಂತ ಸೋಲೇ ನಮ್ಮ ಗಮನವನ್ನು ಸೆಳೆಯುತ್ತದೆ. ಪಾಂಡವರ ನಿಜವಾದ ಅವಲಂಬನೆ ಸಾತ್ಯಕಿ, ಭೀಮ, ಘಟೋತ್ಕಚ ಮತ್ತು ಅಭಿಮನ್ಯು ಇವರು. ಅರ್ಜುನ ಮತ್ತು ಕರ್ಣ ಇವರನ್ನು ಬಿಟ್ಟರೆ, ಸಾತ್ಯಕಿಗೆ ಸಮನಾದ ಬೇರೊಬ್ಬ ಬಿಲ್ಲುಗಾರ ಇರಲಿಲ್ಲ. ಗದಾಯುದ್ಧ ಮತ್ತು ಬಾಹುಯುದ್ಧಗಳಲ್ಲಿ ಭೀಮನ ಕೈ ಹಿಡಿಯುವ ವೀರರು ಸ್ವಲ್ಪವೇ ಇದ್ದರು. ಭೀಮನಂತೆ ಅವನ ಮಗ ಘಟೋತ್ಕಚನೂ ಪರಾಕ್ರಮಿಯಾಗಿದ್ದ. ಅಭಿಮನ್ಯು ಪರಾಕ್ರಮಿಯಾಗಿದ್ದರೂ ಅವನಿಗೆ ಯುದ್ಧದ ಅನುಭವ ಹೆಚ್ಚು ಇರಲಿಲ್ಲ. ಕೌರವ ಪಕ್ಷದಲ್ಲಿ ಭೀಷ್ಮ, ದ್ರೋಣಾಚಾರ್ಯರು ಭಾರಿ ಕೀರ್ತಿಯುಳ್ಳ ಯೋಧರಾಗಿದ್ದರು ಅವರ ಹೆಸರಿನ ಘನತೆ ದೊಡ್ಡದಾಗಿದ್ದರೂ ಇಳಿವಯಸ್ಸಾದ್ದರಿಂದ ಅವರ ಪರಾಕ್ರಮಕ್ಕೆ ತನ್ನಷ್ಟಕ್ಕೆ ತಾನೇ ಒಂದು ಮಿತಿ ಒದಗಿತ್ತು. ಕರ್ಣ, ಅಶ್ವತ್ಥಾಮ, ಜಯದ್ರಥ, ಕೃಪಾಚಾರ್ಯ, ಕೃತವರ್ಮ, ಭಗದತ್ತ, ಬಕಾಸುರನ ತಮ್ಮನಾದ ಅಲಾಯುಧ ಮತ್ತು ದುಃಶಾಸನ ಇವರು ಕೌರವನ ನಿಜವಾದ ಆಧಾರಸ್ತಂಭಗಳಾಗಿದ್ದರು. ಅರ್ಜುನನನ್ನು ಬಿಟ್ಟು ವಿಚಾರ ಮಾಡಿದಾಗ ಕೌರವರ ಬಲ ಪಾಂಡವರ ಬಲಕ್ಕಿಂತ ನಿಃಸಂಶಯವಾಗಿ ಶ್ರೇಷ್ಠವಾಗಿತ್ತು. ಹೆಚ್ಚೇನು, ಅರ್ಜುನ ಇಲ್ಲದಿದ್ದಾಗ ಕೌರವರ ಮುಂದೆ ಪಾಂಡವರ ಬಲ ಹೇಗೆ ಕೊರತೆಯುಳ್ಳದ್ದು ಎಂಬೀ ಖೇದಜನಕ ಅನುಭವ ಪಾಂಡವರಿಗೆ ಬೇಗನೆ ಆಗುವುದಿತ್ತು. ಅರ್ಜುನನ ಯುದ್ಧಕೌಶಲ್ಯ ಎಷ್ಟರ ಮಟ್ಟಿಗೆ ಅಸಾಧಾರಣವಾಗಿತ್ತೆಂದರೆ, ಕೇವಲ ಅವನಿಂದಲೇ ಪಾಂಡವರ ವಿಜಯ ಎಂಬುದು ವಿಚಾರವಂತರಲ್ಲಿ ನಿಶ್ಚಿತವಾಗಿತ್ತು. ಕೌರವ ಪಕ್ಷದ ಯಾವ ಯೋಧನೂ ಅರ್ಜುನನ ಮುಂದೆ ನಿಲ್ಲಲಾರನೆಂಬುದು ಎಲ್ಲರಿಗೂ ಅನುಭವದಿಂದ ಖಾತರಿಯಾಗಿತ್ತು. ಆದರೆ ಈಗ ನಿರ್ಣಾಯಕವಾಗಿ "ಸಾಯಿ ಇಲ್ಲವೆ

ಸಾಯಿಸು" ಎಂಬೀ ಜಿದ್ದಿನ ಯುದ್ಧ ಆಗಬೇಕಾಗಿದೆ. ಅರ್ಜುನನಲ್ಲಿ ಯುದ್ಧ ಕೌಶಲ್ಯ ಹೇಗೆ ಅದ್ವಿತೀಯವಾಗಿತ್ತೋ ಹಾಗೆಯೇ ಭಾವನಾವಶನಾಗುವ ಪ್ರವೃತ್ತಿಯೂ ಪ್ರಬಲವಾಗಿತ್ತು. ಯಾವ ಯುದ್ಧ ಕೌಶಲ್ಯ ಪರಕೀಯ ಶತ್ರುವಿನ ಮುಂದೆ ಧಗಧಗಿಸುವ ಸೂರ್ಯನಂತೆ ಅಪಾರ ತೇಜಸ್ಸಿನಿಂದ ಮಿರುಗುವುದೋ ಅದು ಸ್ವಕೀಯ ಬಂಧುತ್ವದ ಶತ್ರುವಿನ ಮುಂದೆ ಭಾವನಾವಶತೆಯಿಂದ ಮಂಕಾಗುವ ಹೆದರಿಕೆ ಇತ್ತು. ಈ ಭಾವನಾವಶತೆಯಿಂದಲೇ ಪಾಂಡವರಿಗೆ ನಿಜವಾದ ಅಪಾಯ ಆಗುವುದಿತ್ತು. ಯುದ್ಧಶೀಲ ಅರ್ಜುನನ ಭಾವನೆಗಳಿಗೆ ಹೊದಿಕೆ ಹಾಕಿ ಅವನನ್ನು ನಿಯಂತ್ರಿಸಬೇಕಾದುದು ಈಗ ಅಗತ್ಯವಾಗಿತ್ತು. ಈ ಕಾರ್ಯ ಸಾಮಾನ್ಯ ಮನುಷ್ಯನಿಂದ ಆಗುವಂಥದಾಗಿರಲಿಲ್ಲ. ಕಾರಣ ಅರ್ಜುನನ ಯುದ್ಧಕೌಶಲ್ಯದಂತೆ ಅವನ ಭಾವನಾವಶತೆಯೂ ಎಲ್ಲೆ ಮೀರಿದ್ದಾಗಿತ್ತು. ಶಸ್ತ್ರವನ್ನು ಹಿಡಿದು ಹೋರಾಡುವ ಬದಲು ಕೃಷ್ಣ ಅರ್ಜುನನ ಸಾರಥ್ಯವನ್ನು ವಹಿಸಿಕೊಂಡದ್ದು ಈ ಕಾರಣಕ್ಕಾಗಿಯೇ. ಅರ್ಜುನನ ರಥದ ಕುದುರೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕಿಂತ ಅವನ ಭಾವನಾ ಪ್ರಧಾನವಾದ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಅವನಿಗೆ ಹೆಚ್ಚಿನ ಮಹತ್ವದಾಗಿತ್ತು. ಸಾರಥಿಯಾಗಿ ಕೃಷ್ಣ ಅರ್ಜುನನಿಗೆ ತನ್ನ ಸಂಜೀವಕ ಸಾನ್ನಿಧ್ಯವನ್ನು ಕೊಟ್ಟ. ಕೃಷ್ಣನ ಈ ನಿರ್ಣಯ ಎಷ್ಟು ಯೋಗ್ಯವಾಗಿತ್ತೆಂಬುದರ ಅನುಭವ ಭಾರತ ಯುದ್ಧದಲ್ಲಿ ಪದೇಪದೇ ಬರುತ್ತಿತ್ತು. ಶತ್ರುಗಳೆಂದು ತನ್ನ ಮುಂದೆ ತನ್ನದೇ ಜನನಿಂತುದನ್ನು ನೋಡಿ ಯುದ್ಧಕ್ಕೆ ಮೊದಲು ಅರ್ಜುನನ ಮನಸ್ಸು ವಿಷಾದದಿಂದ ಹೇಗೆ ಮಬ್ಬಾಯಿತು ಮತ್ತು ಕೃಷ್ಣ ಅವನಿಗೆ ಹೇಗೆ ತಿಳಿವಳಿಕೆಯನ್ನು ನೀಡಿದ ಎಂಬುದು ಎಲ್ಲರಿಗೂ ತಿಳಿದದ್ದೇ. ಅರ್ಜುನನ ವಿಷಾದದಿಂದ ಗೀತೆ ಜನ್ಮ ತಾಳಿತು. ಗೀತಾಶ್ರವಣದಿಂದ, "ನನ್ನ ಮೋಹ ಈಗ ನಷ್ಟವಾಯಿತು" ಎಂದು ಕೃಷ್ಣನಿಗೆ ಪುರಾವೆಯನ್ನು ನೀಡಿ, ಅರ್ಜುನ ಯುದ್ಧಕ್ಕೆ ಸಿದ್ಧನಾದ. ಆದರೆ ಅರ್ಜುನನ ಮೋಹ ನಿಜವಾಗಿ ಸಂಪೂರ್ಣವಾಗಿ ನಷ್ಟವಾಗಿತ್ತೇ?

ಭೀಷ್ಮ ಕೌರವರ ಸೇನಾಪತಿಯಾದ. ಕೌರವ-ಪಾಂಡವರ ಯುದ್ಧ ಆರಂಭವಾಯಿತು. ಮೊದಲನೆಯ ದಿನ ಅರ್ಜುನನ ಮನಸ್ಸು ಯುದ್ಧದಲ್ಲಿ ಇರಲೇ ಇಲ್ಲ. ರಾತ್ರಿ ಶಿಬಿರಕ್ಕೆ ಬಂದ ಮೇಲೆ ಯುಧಿಷ್ಠಿರನು ಕೃಷ್ಣನ ಬಳಿ, ಅರ್ಜುನ ರಣರಂಗದಲ್ಲಿ ಒಬ್ಬ ತಟಸ್ಥ ಮನುಷ್ಯನಂತೆ ನಡೆದುಕೊಳ್ಳುತ್ತಿದ್ದಾನೆಂದು, ಭೀಮನೇ ನಿಜವಾಗಿ ಯುದ್ಧ ಮಾಡುತ್ತಿದ್ದಾನೆಂದೂ ದೂರಿದ. ವಿಷಾದದ ವರ್ತುಲದಿಂದ ಅರ್ಜುನ ಯುದ್ಧದಲ್ಲಿ ಮೊದಲನೆಯ ದಿನ ಹೊರಬರಲಿಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಎರಡನೆಯ ದಿನ ಮಾತ್ರ ಅರ್ಜುನ ಬಾರಿ ಪರಾಕ್ರಮವನ್ನು ಸಾಧಿಸಿದ. "ಅರ್ಜುನನನ್ನು ಯುದ್ಧದಲ್ಲಿ ಗೆಲ್ಲಲು ಯಾರಿಗೂ ಶಕ್ಯವಿಲ್ಲ" ಎಂದು ಭೀಷ್ಮನೇ ಹೇಳುವಂತಾಯಿತು. ಭೀಷ್ಮ ಸೇನಾಪತಿಯಾಗಿದ್ದಾಗ ನಡೆದ ಹತ್ತು ದಿನಗಳ ಯುದ್ಧದಲ್ಲಿ ದುರ್ಯೋಧನನಿಗೆ ಭ್ರಮನಿರಸನವಾಗುವ ಘಟನೆಗಳು ಜರುಗಿದವು. ಅರ್ಜುನ, ಭೀಮ, ಘಟೋತ್ಕಚ ಮತ್ತು ಅಭಿಮನ್ಯು ಇವರ ಪರಾಕ್ರಮದಿಂದ ಕೌರವರ ಸೈನ್ಯ ಧ್ವಂಸವಾಯಿತು.

ರಣಾಂಗಣದಲ್ಲಿ ಕರ್ಣ ಇಲ್ಲದಿದ್ದುದರಿಂದ ಕೌರವರ ಶಕ್ತಿ ಕುಂದುವಂತಾಯಿತು. ಭಗದತ್ತ ಮತ್ತು ಭೂರಿಶ್ರವ ಇವರೇ ಕೌರವ ಕಡೆ ಗಮನ ಸೆಳೆಯುವ ಪರಾಕ್ರಮವನ್ನು ಸಾಧಿಸಿದರು. ಅರ್ಜುನನ ನಾಲ್ಕು ಕಡೆಗಳ ಹೊಡೆತದಿಂದ ಕೌರವರಿಗೆ ಅಪಾರ ಹಾನಿಯಾಯಿತು. ಆದರೆ ಈ ಯುದ್ಧದ ಗದ್ದಲದಲ್ಲಿ ಅರ್ಜುನನ ಮಗ ಇರಾವಂತನೂ ಸಾವನ್ನಪ್ಪಿದ. ಅರ್ಜುನನ ಭಾವನಾ ಪ್ರಧಾನವಾದ ಮನಸ್ಸು ವಿಷಾದದಿಂದ ತುಂಬಿ ಹೋಯಿತು.

*ಇದಾನೀಂ ಚ ವಿಜಾನಾಮಿ ಸುಕೃತಂ ಮಧುಸೂದನ ।*
*ಕೃತಂ ರಾಜಾ ಮಹಾಬಾಹೋ ಯಾಚತಾ ಚ ಸುಯೋಧನಮ್ ॥*
*ರಾಜ್ಯಾರ್ಧಂ ಪಂಚ ವಾ ಗ್ರಾಮಾನ್ ನಾ ಕಾರ್ಷೀತ್ ಸಚದುರ್ಮತಿಃ ।*
*ದೃಷ್ಟ್ವಾಹಿ ಕ್ಷತ್ರಿಯಾನ್ ಶೂರಾನ್ ಶಯಾನಾನ್ ಧರಣೀತಲೇ ॥*
*ನಿಂದಾಮಿ ಭೃಶಮಾತ್ಮಾನಂ ಧಿಗಸ್ತು ಕ್ಷತ್ರ ಜೀವಿಕಾಮ್ ।*
*ಅಶಕ್ತಮಿತಿ ಮಾಮೇತೀ ಜ್ಞಾಸ್ಯಂತೇ ಕ್ಷತ್ರಿಯಾ ರಣೇ ॥*
*ಯುದ್ಧಂತು ಮೇ ನ ರುಚಿರಂ ಜ್ಞಾತಿಭಿರ್ಮಧುಸೂದನ ।*

*ಭೀ. ಪ. 88- 8, 9, 10.*

(“ಮಹಾಬಾಹು ಮಧುಸೂದನ, ರಾಜ ಯುಧಿಷ್ಠಿರನು ಮೊದಲು ದುರ್ಯೋಧನನ ಬಳಿ ಏನು ಬೇಡಿದ, ಅದು ಒಳ್ಳೆಯ ಕಾರ್ಯವಾಗಿತ್ತೆಂದು ಈಗ ನನಗೆ ಅರಿವಾಗುತ್ತಿದೆ. ಆ ಕೆಟ್ಟ ಬುದ್ಧಿಯ ದುರ್ಯೋಧನ ರಾಜ್ಯಾರ್ಧವನ್ನಾಗಲಿ, ಐದು ಗ್ರಾಮಗಳನ್ನಾಗಲಿ ಕೊಡಲಿಲ್ಲ. ನೆಲದ ಮೇಲೆ ಮಲಗಿರುವ ಶೂರರಾದ ಕ್ಷತ್ರಿಯರನ್ನು ನೋಡಿ, ನನ್ನನ್ನು ನಾನು ತೀರ ನಿಂದಿಸುತ್ತೇನೆ. ಕ್ಷತ್ರಿಯ ಜೀವನಕ್ಕೆ ಧಿಕ್ಕಾರವಿರಲಿ. ಮಧುಸೂದನಾ, ಕ್ಷತ್ರಿಯರು ನನ್ನನ್ನು ಯುದ್ಧದಲ್ಲಿ ಹೇಡಿಯೆಂದು ತಿಳಿದಾರು. ಜ್ಞಾತಿಗಳೊಡನೆ ಯುದ್ಧವಂತೂ ನನಗೆ ರುಚಿಸುವುದಿಲ್ಲ.) ಹೀಗೆ ಶೋಕಿಸುತ್ತಿದ್ದರೂ, “ಧೃತರಾಷ್ಟ್ರರ ಸೈನ್ಯದ ಕಡೆಗೆ ಬೇಗನೆ ಕುದುರೆಗಳನ್ನು ಓಡಿಸು, ನನ್ನ ಎರಡು ಭುಜಗಳಿಂದ ಈ ಅಪಾರ ಸೈನ್ಯ ಸಾಗರವನ್ನು ದಾಟುವೆನು’ ಎಂದು ಹೇಳಿದನು. ಭೀಷ್ಮ ಮತ್ತು ಅರ್ಜುನ ಇವರು ಎದುರೆದುರಾಗಿ ಗಂಟುಬಿದ್ದಾಗ ಅರ್ಜುನನು ವಿಮನಸ್ಕನಾದ ಮನಃಸ್ಥಿತಿ ಎಲ್ಲರ ಗಮನಕ್ಕೂ ಬಂತು. ಯಾವಾಗ ಭೀಮ, ನಕುಲ, ಸಹದೇವ, ಅಭಿಮನ್ಯು ಮುಂತಾದ ಪಾಂಡವರ ಮೇಲೆ ಭೀಷ್ಮನ ಬಾಣಗಳ ಸುರಿಮಳೆಯಾಗಿ ಅವರು ಜರ್ಜರಿತರಾದರೋ ಆಗ ಒಬ್ಬ ಅರ್ಜುನನೇ ಆ ಎಲ್ಲರನ್ನೂ ಸಂಕಟದಿಂದ ಬಿಡುಗಡೆ ಮಾಡಿದ. ಭೀಷ್ಮನಿಗಿಂತಲೂ ಸತತವಾಗಿ ಮೇಲುಗೈ ಪಡೆದ. ಆದರೆ ಭೀಷ್ಮನೊಡನೆ ಖಂಡಿತವಾಗಿ ಯುದ್ಧ ಮಾಡಲು ಅವನ ಮನಸ್ಸು ತಯಾರಾಗುತ್ತಿರಲಿಲ್ಲ. ಕೇವಲ ಉಪದೇಶದಿಂದ ಈ ಕಾರ್ಯವಾಗಲಾರದು ಎಂದು ತಿಳಿದು ಕೃಷ್ಣ ಭೀಷ್ಮನ ಮೇಲೆ ಎರಗಲು ಅವನಿಗೆ ಎರಡು ಸಲ ಸೂಚಿಸಿದ. ನಿನ್ನ ತಡಮಾಡುವ ನಡತೆಯಿಂದ ನಾನು ನನ್ನ ಪ್ರತಿಜ್ಞೆಯನ್ನು ಭಂಗ ಮಾಡಬೇಕಾಗಿ ಬಂದಿದೆ’

ಎಂದು ಕೃಷ್ಣನ ಈ ಕೃತಿಯ ಅರ್ಥವನ್ನು ಅರ್ಜುನನು ತಿಳಿಯಲಾರದವನಷ್ಟು ದಡ್ಡನಾಗಿರಲಿಲ್ಲ. ಅರ್ಜುನ ಕೃಷ್ಣನನ್ನು ಎರಡು ಸಲ ಹಿಂದೆ ಎಳೆದು, ಖಚಿತವಾಗಿ ಯುದ್ಧ ಮಾಡುವುದಾಗಿ ಆಶ್ವಾಸನೆ ನೀಡಿದ. ಮುಪ್ಪಿನ ಕಾರಣದಿಂದ ಭೀಷ್ಮನಿಂದಲೂ ವಿಶೇಷವಾದ್ದು ಏನೂ ಆಗುತ್ತಿರಲಿಲ್ಲ. ಇದರಿಂದ ಕೌರವರ ಕಲ್ಯಾಣಕ್ಕಾಗಿ ಭೀಷ್ಮ ಶಸ್ತ್ರತ್ಯಾಗವನ್ನು ಮಾಡಬೇಕೆಂಬ ಸೂಚನೆಯನ್ನು ಕೊಡಲೂ ಕರ್ಣ ಹಿಂದು ಮುಂದು ನೋಡಲಿಲ್ಲ. ಈ ಸೂಚನೆಯನ್ನು ದುರ್ಯೋಧನ ಭೀಷ್ಮನ ಮುಂದೆ ಇಟ್ಟಾಗ "ಗಂಧರ್ವರು ನಿನ್ನನ್ನು ಸೋಲಿಸಿ ಸೆರೆ ಹಿಡಿದು ಒಯ್ದಾಗ ನಿನ್ನ ಎಲ್ಲ ಸಹೋದರರೂ ಕರ್ಣನೂ ಓಡಿಹೋದರು. ಅರ್ಜುನನೇ ನಿನ್ನನ್ನು ಅವರಿಂದ ಬಿಡಿಸಿದ. ಗೋಗ್ರಹಣ ಪ್ರಸಂಗದಲ್ಲಿ ಒಬ್ಬನೇ ಅರ್ಜುನ ನಮ್ಮೆಲ್ಲರ ಮೇಲೆ ಎರಗಿದ. ನನ್ನನ್ನೂ ದ್ರೋಣಾಚಾರ್ಯ, ಕೃಪಾಚಾರ್ಯ, ಕರ್ಣ, ಅಶ್ವತ್ಥಾಮ ಇವರೆಲ್ಲರನ್ನೂ ಸೋಲಿಸಿದ. ಯುದ್ಧದಲ್ಲಿ ಅರ್ಜುನನನ್ನು ಗೆಲ್ಲುವ ಸಮರ್ಥನು ಯಾರೊಬ್ಬನೂ ಇಲ್ಲ" ಎಂಬ ಸ್ಪಷ್ಟೋಕ್ತಿಯಿಂದ ಭೀಷ್ಮ ದುರ್ಯೋಧನನಿಗೆ ತಿಳಿಸಿದ. ಭೀಷ್ಮನ ಈ ಹೇಳಿಕೆ ನಿಜವಾಗಿತ್ತು. ಆದರೆ ಭೀಷ್ಮನೊಡನೆ ಖಚಿತವಾಗಿ ಯುದ್ಧ ಮಾಡಲು ಅರ್ಜುನ ಮುಂದೂಡುತ್ತಿದ್ದನೆಂಬುದೂ ನಿಜವಾಗಿತ್ತು. ಇದರಿಂದ ಯುದ್ಧ ತೆವಳಿಕೊಂಡು ಸಾಗುತ್ತಿತ್ತು. ಮಾತು ನಿರ್ಣಯಕ್ಕೆ ಬಂದು ಎಲ್ಲರೂ ಅರ್ಜುನನಿಗೆ ಅವನ ಕರ್ತವ್ಯದ ಬಗ್ಗೆ ತಿಳಿವಳಿಕೆಯನ್ನು ಕೊಟ್ಟರು. ಅರ್ಜುನ ಶಿಖಂಡಿಯನ್ನು ಮುಂದಿಟ್ಟುಕೊಂಡು, ಭೀಷ್ಮನನ್ನು ವಧಿಸಬೇಕೆಂಬ ಸೂಚನೆ ಬಂತು. ಈವರೆಗೆ ಬಂಧನದಲ್ಲಿದ್ದ ಅರ್ಜುನನ ಭಾವನೆ ಕುದಿದು ಉಕ್ಕಿ ಅದಕ್ಕೆ ವಶನಾಗಿ ತನ್ನ ಮೂಲಸ್ಥಿತಿಗೆ ಬಂದ. ಕೃಷ್ಣನಿಗೆ ಅರ್ಜುನ ಹೇಳಿದ :

*ಗುರುಣಾಕುರುವೃದ್ಧೇನ, ಕೃತಪ್ರಜ್ಞೇನ ಧೀಮತಾ ।*
*ಪಿತಾಮಹೇ ನ ಸಂಗ್ರಾಮೇ ಕಥಂ ಯೋದ್ಧಾಸ್ಮಿ ಮಾಧವ ॥*
*ಕ್ರೀಡತಾಹಿಮಯಾ ಬಾಲ್ಯೇ ವಾಸುದೇವ ಮಹಾಮನಾಃ ।*
*ಪಾಂಸುರೂಷಿತಗಾತ್ರೇಣ ಮಹಾತ್ಮಾಪರುಷೀಕೃತಃ ॥*
*ಯಸ್ಯಾಹಮಧಿರುಹ್ಯಾಂಕಂ ಬಾಲಃಕಿಲ ಗದಾಗ್ರಜ ।*
*ತಾತೇತ್ಯವೋಚಂಪಿತರಂ ಪಿತುಃ ಪಾಂಡೋರ್ಮಹಾತ್ಮನಃ ॥*
*ನಾಹಂ ತಾತಸ್ತವ ಪಿತುಃ ತಾತೋಽಸ್ಮಿತವಭಾರತ ।*
*ಇತಿ ಮಾಮಬ್ರವೀತ್‌ಬಾಲ್ಯೇಯಃಸವಧ್ಯಃ ಕಥಂಮಯಾ ॥*
*ಕಾಮಂವಧ್ಯತುಸೈನ್ಯಂ ಮೇ ನಾಹಂಯೋ ಮಹಾತ್ಮನಾ*
*ಜ್ಯೇ ಜಯೋಽವಾಸ್ತು ವಧೋ ವಾ ಮೇಕಥಂ ವಾ ಕೃಷ್ಣ ಮನ್ಯಸೇ ॥*

*ಭೀ. ಪ. 107-91-95*

(ಸಂಸ್ಕೃತದಲ್ಲಿ ತಾತ ಶಬ್ದಕ್ಕೆ ತಂದೆ ಎಂಬ ಅರ್ಥವಿದೆ)

'ಮಧುಸೂದನಾ, ಗುರುವೂ, ಕುರುಗಳಲ್ಲಿ ಹಿರಿಯನೂ, ಪಕ್ವಬುದ್ಧಿಯುಳ್ಳವನೂ, ವಿದ್ವಾಂಸನೂ, ಆದ ಪಿತಾಮಹನಾದ ಭೀಷ್ಮನೊಡನೆ ಯುದ್ಧದಲ್ಲಿ ಹೇಗೆ ಯೋಧನಾಗಬಲ್ಲೆ? ವಾಸುದೇವಾ, ಬಾಲ್ಯದಲ್ಲಿ ಆಟವಾಡುವಾಗ ಧೂಳು ಮೆತ್ತಿದ ನನ್ನ ದೇಹದಿಂದ ಆ ಮಹಾತ್ಮನ ಮತ್ತು ದೊಡ್ಡ ಮನಸ್ಸಿನ ದೇಹವು ಕೊಳಕಾಯಿತು. ನಾನು ಬಾಲಕನಷ್ಟೇ. ಮಹಾತ್ಮನಾದ ಪಾಂಡುವಿಗೂ ತಂದೆಗೆ ಸಮಾನನಾದ ನನ್ನ ಬಾಲ್ಯದಲ್ಲಿ ಭೀಷ್ಮನ ತೊಡೆಯನ್ನು ಏರಿ 'ತಾತ' ಎನ್ನುತ್ತಿದ್ದೆ. "ನಾನು ನಿನ್ನ ತಾತನಲ್ಲ, ನಿನ್ನ ತಂದೆಯ ತಾತ" ಎಂದು ಆತ ಹೇಳುತ್ತಿದ್ದ. ಅಂಥವನನ್ನು ನಾನು ಹೇಗೆ ಕೊಲ್ಲಲಿ? ನಿಜವಾಗಿಯೂ ನನ್ನ ಸೈನ್ಯ ನಾಶವಾಗಲಿ. ಆ ಮಹಾತ್ಮನೊಡನೆ ಯುದ್ಧ ಮಾಡಲಾರೆ. ಗೆಲುವಾಗಲಿ, ಸಾವಾಗಲಿ, ಕೃಷ್ಣಾ ನಿನಗೆ ಹೇಗೆ ಅನ್ನಿಸುತ್ತದೆ?) ಗೀತಾಶ್ರವಣದ ಪೂರ್ವದಲ್ಲಿ ಅರ್ಜುನನಿಗೆ ಉಂಟಾದ ವಿಷಾದ ಮತ್ತು ಈ ಅನಂತರದ ವಿಷಾದ ಇವೆರಡರಲ್ಲಿ ಎಳ್ಳಷ್ಟೂ ವ್ಯತ್ಯಾಸವಿಲ್ಲ. ಸ್ವಜನರೊಡನೆ ಯುದ್ಧ ಮಾಡುವ ಪ್ರಸಂಗ ನಿರ್ಮಾಣವಾದುದರಿಂದ ಅರ್ಜುನನಂಥ ಭಾವನಾ ಪ್ರಧಾನ ಮನುಷ್ಯನ ವಿಷಾದವನ್ನು ಯಾವುದೇ ಉಪಾಯದಿಂದ ಸಂಪೂರ್ಣವಾಗಿ ತೊಡೆದು ಹಾಕುವ ಹಾಗಿರಲಿಲ್ಲ. ಆ ಹೊತ್ತು ತುಂಬಿದ ಯುದ್ಧದ ಪ್ರವಾಹವು ಪ್ರತ್ಯಕ್ಷವಾಗಿದ್ದಾಗ ತರ್ಕವಾದದಿಂದ ಅರ್ಜುನನ ವಿಷಾದವನ್ನು ತೊಡೆದು ಹಾಕಲು ಕೃಷ್ಣ ಪ್ರಯತ್ನವನ್ನು ಮಾಡಲಿಲ್ಲ. ಭೀಷ್ಮವಧೆ ಆಗಲೇಬೇಕೆಂಬುದನ್ನು ಅರ್ಜುನನಿಗೆ ಖಡಾಖಂಡಿತವಾಗಿ ಹೇಳಿದ. ಅರ್ಜುನ ಕೊನೆಗೆ ದೃಢಮನಸ್ಸಿನಿಂದ ಯುದ್ಧ ಮಾಡಿದ. ಆದರೆ ಭೀಷ್ಮ ವಧೆಯ ಜವಾಬ್ದಾರಿಯನ್ನು ತನ್ನ ತಲೆಯ ಮೇಲೆ ಹೊತ್ತುಕೊಳ್ಳಬಾರದೆಂಬುದು ಕೊನೆಯತನಕ ಆತನ ಉತ್ಕಟ ಇಚ್ಛೆಯಾಗಿತ್ತು. ಶಿಖಂಡಿಯನ್ನು ಮುಂದಿಟ್ಟುಕೊಂಡು ಭೀಷ್ಮನ ಮೇಲೆ ಬಾಣಗಳ ಮಳೆ ಸುರಿಸಬೇಕೆಂಬ ವಿಚಾರವನ್ನು ಇದಕ್ಕಾಗಿ ಅರ್ಜುನ ಒಪ್ಪಿಕೊಂಡಂತೆ ಕಾಣುತ್ತದೆ. ಹೀಗೆ ಮಾಡುವುದರಿಂದ ಭೀಷ್ಮವಧೆಯನ್ನು ಶಿಖಂಡಿ ಮಾಡಿದ ಹಾಗೆ ಆದೀತೆಂದು ಅವನಿಗೆ ಅನ್ನಿಸಿರಬೇಕು. ಆದರೆ ಭೀಷ್ಮನು ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಸುರಿಸುವುದು ನಿಲ್ಲಿಸಲಿಲ್ಲ. ಅಥವಾ ಶಿಖಂಡಿಯ ಶರಸಂಧಾನದಿಂದ ಭೀಷ್ಮನಿಗೆ ಹೆಚ್ಚಿನ ಕಿರಿಕಿರಿಯೂ ಆಗಲಿಲ್ಲ. ಅರ್ಜುನನ ಹರಿತ ಬಾಣಗಳಿಂದಲೇ ಕೊನೆಗೆ ಭೀಷ್ಮ ಪತನವಾದುದು ಸ್ಪಷ್ಟವಾಗಿದೆ.

ಭೀಷ್ಮ ಪತನವಾದ ಮೇಲೆ ದ್ರೋಣಾಚಾರ್ಯ ಕೌರವರ ಸೈನ್ಯಾಧಿಪತಿಯಾದ. ಹತ್ತು ದಿವಸಗಳವರೆಗೆ ಯುದ್ಧದಲ್ಲಿ ಭಾಗಿಯಾಗದಿದ್ದ ಕರ್ಣನೂ ಈಗ ಯುದ್ಧಕ್ಕೆ ಸಜ್ಜಾದ. ಇದರಿಂದ ಕೌರವರ ಪಕ್ಷದಲ್ಲಿ ಉತ್ಸಾಹದ ಹೊಸಗಾಳಿ ಬೀಸಲಾರಂಭಿಸಿತು. ದ್ರೋಣಾಚಾರ್ಯ ಐದು ದಿನಗಳ ಸೇನಾಪತಿಯಾಗಿದ್ದ. ಈ ಐದು ದಿನಗಳಲ್ಲೇ ಕೌರವ-ಪಾಂಡವರ ನಿರ್ಣಾಯಕ ಯುದ್ಧವಾಯಿತೆಂದು ಹೇಳಬಹುದು. ಇಷ್ಟು ವ್ಯಾಪಕ ಮತ್ತು ಘನಘೋರ ಯುದ್ಧ ಈ ಮೊದಲು ಮತ್ತೆ ಆಮೇಲೆ ಸಹ ಆಗಲಿಲ್ಲ. ದ್ರೋಣವಧೆಯಾದ ಮೇಲೆಯೇ ಕರ್ಣ, ದುರ್ಯೋಧನ, ದುಃಶಾಸನ ಮುಂತಾದವರ

ವಧೆಯಾದುದು ನಿಜವಾದರೂ, ಕೌರವ-ಪಾಂಡವರ ನಿಜವಾದ ಹೋರಾಟ ಈ ಐದು ದಿನಗಳಲ್ಲೇ ಆಯಿತು.' ಈ ಕಾಲದಲ್ಲಿ ಅರ್ಜುನ ಮತ್ತು ಸಾತ್ಯಕಿ ಗಳಿಸಿದ ಪರಾಕ್ರಮ ವರ್ಣನೆಗೆ ಮೀರಿದ್ದಾಗಿತ್ತು. ಈ ಐದು ದಿವಸಗಳಲ್ಲೇ ಅತುಲ ಪರಾಕ್ರಮವನ್ನು ಗಳಿಸಿ, ಭಗದತ್ತ, ಅಭಿಮನ್ಯು, ಜಯದ್ರಥ, ಘಟೋತ್ಕಚ ಮತ್ತು ಅಲಾಯುಧ ಸಾವನ್ನಪ್ಪಿದರು. ಈ ಐದು ದಿನಗಳಲ್ಲೇ ಕರ್ಣ ಮತ್ತು ಭೀಮ ಇವರ ರೋಮಾಂಚಕಾರಿ ಯುದ್ಧ ನಡೆಯಿತು. ಸಾಕ್ಷಾತ್ತಾಗಿ ದ್ರೋಣಾಚಾರ್ಯನ ಕರ್ತೃತ್ವ ಈ ಅವಧಿಯಲ್ಲಿ ನೋಟಕ್ಕೆ ಹೆಚ್ಚು ಕಂಡು ಬರುತ್ತಿರಲಿಲ್ಲವಾದರೂ, ಕೌರವ ಪಕ್ಷದ ಕ್ಷಾತ್ರ ತೇಜಸ್ಸು ಈ ಐದು ದಿನಗಳಲ್ಲಿ ಪ್ರಕರ್ಷವಾಗಿ ಪ್ರಕಟವಾಯಿತು. ಮುಖ್ಯವಾಗಿ ಅರ್ಜುನನ ಗೈರು ಹಾಜರಿಯಲ್ಲಿ ತಮ್ಮ ಬಲ ಕೌರವರ ಮುಂದೆ ಹೇಗೆ ಬಲಹೀನವಾಗುತ್ತಿತ್ತು ಎಂಬುದರ ಖೇದಜನಕ ಅನುಭವ ಈ ಕಾಲದಲ್ಲೆ ಪಾಂಡವರಿಗೆ ಉಂಟಾಯಿತು. ಅರ್ಜುನನ ವಿಷಾದ ಈ ಐದು ದಿವಸಗಳಲ್ಲೂ ಆತನಿಗೆ ಸಂಗವನ್ನು ನೀಡಿತು.

ದ್ರೋಣಾಚಾರ್ಯ ಸೇನಾಪತಿಯಾದರೂ ಪಾಂಡವರ ಮುಂದೆ ಕೌರವರ ಪ್ರತಾಪ ಕೈ ಬೀಳುತ್ತಿಲ್ಲವೆಂದು ಕಂಡು, ದುರ್ಯೋಧನ ಖಿನ್ನನಾದ. ಭೀಮನಂಥ ಪರಾಕ್ರಮಿ ವೀರನನ್ನು ಜರ್ಜರಿತನನ್ನಾಗಿ ಮಾಡಿದ ಭಗದತ್ತನನ್ನು ಅರ್ಜುನ ಕೊಂದ ಮೇಲಂತೂ ಆತ ತೀರ ನಿರಾಶನಾದ. ತನ್ನ ನಿರಾಶೆಯನ್ನು ಆಚಾರ್ಯರಲ್ಲಿ ವ್ಯಕ್ತ ಪಡಿಸಿದ. ಎಲ್ಲಿಯವರೆಗೆ ಅರ್ಜುನ ಪಾಂಡವರ ಪಕ್ಷವನ್ನು ರಕ್ಷಣೆ ಮಾಡುತ್ತಾನೋ ಅಲ್ಲಿಯವರೆಗೆ ತನ್ನಿಂದ ಏನೂ ಮಾಡಲಾಗುವುದಿಲ್ಲ. ಆದರೆ ಮುಖ್ಯ ಸೈನ್ಯದಿಂದ ಅರ್ಜುನನನ್ನು ಕೆಲವು ಕಾಲ ಬೇರ್ಪಡಿಸುವುದು ಶಕ್ಯವಾದರೆ ಪಾಂಡವರಿಗೆ ತಾನು ಆಘಾತವನ್ನು ಉಂಟು ಮಾಡುವೆನೆಂಬ ವಿಶ್ವಾಸವನ್ನು ಆಚಾರ್ಯನು ಮುಂದಿಟ್ಟನು. ಈ ಸೂಚನೆಯನ್ನು ಮಾರನೆಯ ದಿವಸ ದುರ್ಯೋಧನ ಜಾರಿಗೆ ತಂದ. ಭಾರತ ಯುದ್ಧ ಒಂದು ಘನಘೋರ ಸಂಗ್ರಾಮ ಪ್ರಾರಂಭವಾಯಿತು. ಮೊದಲಿಗೆ ಸಂಶಪ್ತಕರು ದಕ್ಷಿಣದ ಕಡೆ ಯುದ್ಧಕ್ಕೆ ಅರ್ಜುನನಿಗೆ ಆಹ್ವಾನವನ್ನು ನೀಡಿದರು. ಅದರಿಂದ ಅರ್ಜುನನಿಗೂ ಮುಖ್ಯ ಸೈನ್ಯಕ್ಕೂ ಇದ್ದ ಸಂಬಂಧ ಪೂರ್ಣವಾಗಿ ಕಡಿದುಹೋಯಿತು. ಆ ಕಾಲದಲ್ಲಿ ದ್ರೋಣಾಚಾರ್ಯ ಸೈನ್ಯದ ಚಕ್ರವ್ಯೂಹಾಕಾರದ ರಚನೆಯನ್ನು ಮಾಡಿದ. ಕಪ್ಪು ಮೋಡಗಳ ಗುಂಪು ಆಕಾಶವಲ್ಲಿ ಹೇಗೆ ಮುನ್ನುಗ್ಗುವುದೋ ಹಾಗೆ ಆ ಪ್ರಚಂಡ ಚಕ್ರವ್ಯೂಹ ಪಾಂಡವರ ಸೈನ್ಯವನ್ನು ತೆರವು ಮಾಡುತ್ತಾ ಮುನ್ನುಗ್ಗುತ್ತಿತ್ತು. ಚಕ್ರವ್ಯೂಹದಲ್ಲಿ ನುಗ್ಗಿ ಸೈನ್ಯವನ್ನು ದಿಕ್ಕು ಕೆಡಿಸಿ ಓಡಿಸುವುದು ಈಗ ಒಂದೇ ಮಾರ್ಗವಾಗಿತ್ತು. ಇಂಥ ದುಷ್ಕರವಾದ ಕೆಲಸವನ್ನು ನೆರವೇರಿಸಬಲ್ಲ ಅರ್ಜುನ ಈಗ ಮುಖ್ಯ ರಣರಂಗದಲ್ಲಿ ಹಾಜರಿರಲಿಲ್ಲ. ಹೆಚ್ಚೇನು? ಆತ ಇಲ್ಲದಿದ್ದುದರಿಂದಲೇ ಈ ವ್ಯೂಹವನ್ನು ರಚಿಸಲಾಗಿತ್ತು. ಹೇಗಾದರೂ ಮಾಡಿ ಚಕ್ರವ್ಯೂಹದಲ್ಲಿ ನುಸುಳಿ ಸೈನ್ಯ ದಿಕ್ಕುಗೆಟ್ಟು ಓಡುವಂತೆ ಪ್ರಯತ್ನಿಸುವುದು ಅಥವಾ ತಾವೇ ಸರ್ವನಾಶವನ್ನು ಸೆಳೆದುಕೊಳ್ಳುವುದು ಈ ಎರಡೇ ಪರ್ಯಾಯಗಳು ಉಳಿದಿದ್ದರಿಂದ, ಮೊದಲನೆಯ ಪರ್ಯಾಯವನ್ನೇ ಅವಲಂಬಿಸದೆ ಬೇರೆ ಮಾರ್ಗ ಪಾಂಡವರಿಗೆ

ಇರಲಿಲ್ಲ. ಚಕ್ರವ್ಯೂಹವನ್ನು ಹೇಗೆ ಭೇದಿಸಬೇಕೆಂಬುದು ಅಭಿಮನ್ಯುವಿಗೂ ಗೊತ್ತಿದ್ದುದರಿಂದ, ಸಹಜವಾಗಿ ಎಲ್ಲರ ನೋಟ ಅವನ ಕಡೆಗೆ ಬಾಗಿತು. ಈ ಗಂಡಾಂತರವನ್ನು ಹೊತ್ತುಕೊಳ್ಳಲು ಅಭಿಮನ್ಯು ಮೊದಲಿಗೆ ಹೆಚ್ಚು ಉತ್ಸುಕನಾಗಿರಲಿಲ್ಲ. "ನಾನು ವ್ಯೂಹದಲ್ಲಿ ಪ್ರವೇಶಿಸಬಲ್ಲೆ, ಆದರೆ ಪ್ರವೇಶಿಸಿದ ಮೇಲೆ ಏನಾದರೂ ಸಂಕಟ ಒದಗಿಬಂದರೆ ಹೊರಗೆ ಬರುವುದಕ್ಕೆ ಆಗುತ್ತದೆಯೋ ಇಲ್ಲವೆ ಎಂಬದರ ಬಗ್ಗೆ ಸಂಶಯವಿದೆ" ಎಂದು ತನ್ನ ಅಡಚಣೆಯನ್ನು ಕೈಮುಗಿದು ಎಲ್ಲರ ಮುಂದೆಯೂ ಮಂಡಿಸಿದ. ಅಭಿಮನ್ಯು ಮಂಡಿಸಿದ ವಿಚಾರದ ಅರ್ಥವೇನು? ಚಕ್ರವ್ಯೂಹದಲ್ಲಿ ಒಬ್ಬಂಟಿಗನಾಗಿ ಸಿಲುಕಿದರೆ ಹೇಗೆ ಎಂದು ತಾನೇ. ಆದರೆ ಅಂಥ ಸಂಕಟ ಒದಗಲಾರದು. ಅದರ ಬಗ್ಗೆ ಯೋಗ್ಯವಾದ ಎಚ್ಚರಿಕೆ ವಹಿಸಿಕೊಳ್ಳುವುದಾಗುತ್ತದೆ ಎಂದು ಯುಧಿಷ್ಠಿರ ಮತ್ತು ಭೀಮ ಮುಂತಾದವರು ಆಶ್ವಾಸನೆಯನ್ನು ಕೊಟ್ಟರು. ಈ ಸಾಹಸವನ್ನು ಮಾಡದಂತೆ ಅಭಿಮನ್ಯುವಿನ ಸಾರಥಿ ಆತನ ಮನಸ್ಸನ್ನು ಒಪ್ಪಿಸಲು ಪ್ರಯತ್ನಪಟ್ಟ. ಆದರೆ ದೊಡ್ಡಪ್ಪನ ಈ ಆಜ್ಞೆಯನ್ನು ಶಿರಸಾವಂದ್ಯವೆಂದು ಮನ್ನಿಸಿ, ಈ ಸಾಹಸ ಕಾರ್ಯವನ್ನು ಮಾಡಲು ಅಭಿಮನ್ಯು ಉತ್ಸುಕತೆಯಿಂದ ಸಿದ್ಧನಾದ.

ಅಭಿಮನ್ಯು ಚಕ್ರವ್ಯೂಹವನ್ನು ಭೇದಿಸಬೇಕು ಮತ್ತು ಅವನ ಹಿಂದೆ ಯುಧಿಷ್ಠಿರ, ಭೀಮ, ಸಾತ್ಯಕಿ, ಧೃಷ್ಟದ್ಯುಮ್ನ ಮುಂತಾದವರೂ ಒಳಗೆ ನುಸುಳಬೇಕೆಂಬುದು ಪೂರ್ವ ಯೋಜನೆಯಾಗಿತ್ತು. ಚಕ್ರವ್ಯೂಹವನ್ನು ಭೇದಿಸಿ ಎಲ್ಲ ತೊಡಕುಗಳನ್ನೂ ತೊಡೆದು ಹಾಕಿ ಅಭಿಮನ್ಯು ವಿಜಯದ ಹುರುಪಿನಿಂದ ಒಳಗೆ ನುಸುಳಿದ. ತನ್ನ ಮೇಲೆ ಹೊರಿಸಿದ ಕಾರ್ಯವನ್ನು ಆತನು ದೊಡ್ಡ ಭರಾಟೆಯಿಂದ ಪೂರ್ಣಗೊಳಿಸಿದ. ಯೋಜನೆಯ ಪೂರ್ವಭಾಗ ಪೂರ್ತಿ ಆಯಿತು. ಆದರೆ ಉತ್ತರಭಾಗ? ಯುಧಿಷ್ಠಿರ, ಭೀಮ, ಸಾತ್ಯಕಿ ಮುಂತಾದ ಯೋಧರು ಅಭಿಮನ್ಯುವಿನ ಹಿಂದೆಯೇ ಹೋಗಲು ಪ್ರಯತ್ನಿಸಿದರಾದರೂ ಒಬ್ಬನೇ ಜಯದ್ರಥ ಅವರೆಲ್ಲರನ್ನೂ ಹಿಮ್ಮೆಟ್ಟುವಂತೆ ಮಾಡಿದ. ಪ್ರಚಂಡ ಅಲೆಗಳ ಗರ್ವ ಉಕ್ಕಿನ ಬಂಡೆಯ ಮುಂದೆ ಲುಪ್ತವಾದಂತೆ ಯುಧಿಷ್ಠಿರ, ಭೀಮ, ಸಾತ್ಯಕಿ, ಧೃಷ್ಟದ್ಯುಮ್ನ ಮುಂತಾದ ವೀರರ ಶೌರ್ಯ ಜಯದ್ರಥನ ಮುಂದೆ ನಿಷ್ಫಲವಾಯಿತು. ಜಯದ್ರಥನ ಅಸ್ತ್ರ ನೈಪುಣ್ಯದಿಂದ ಪಾಂಡವರು ಒಂದು ಹೆಜ್ಜೆಯನ್ನು ಸಹ ಮುಂದಿಡಲು ಅಶಕ್ಯರಾದರು. ಪರಿಣಾಮವಾಗಿ ಈಗ ಚಕ್ರವ್ಯೂಹದಲ್ಲಿ ನುಸುಳಿದ ಅಭಿಮನ್ಯು ಒಬ್ಬಂಟಿಗನಾದ. ಹಿಂದೆ ಯಾವ ಸಂಕಟವನ್ನು ನಿರೀಕ್ಷಿಸಿದ್ದನೋ ಅದು ಪ್ರತ್ಯಕ್ಷವಾಗಿ ಅನುಭವಕ್ಕೆ ಬಂತು. ದ್ರೋಣಾಚಾರ್ಯ, ಕರ್ಣ, ಕೃಪಾಚಾರ್ಯ, ಅಶ್ವತ್ಥಾಮ, ಶಲ್ಯ, ದುರ್ಯೋಧನ ಮತ್ತು ದುಃಶಾಸನ ಮುಂತಾದವರು ಅವನನ್ನು ಗೋಡೆಯಂತೆ ಸುತ್ತುವರಿದರು. ಕೋಪಗೊಂಡ ಹುಲಿಗಳ ಹಿಡಿತದಲ್ಲಿ ಸಿಕ್ಕಿಬಿದ್ದ ಸಿಂಹದಮರಿಯಂತೆ ಅಭಿಮನ್ಯುವಿನ ಸ್ಥಿತಿಯಾಗಿತ್ತು. ಅಭಿಮನ್ಯು ಅಪೂರ್ವ ಶೌರ್ಯದಿಂದ ಹೋರಾಡಿದ. ಕೌರವರು ತಲೆಯೆತ್ತದಂತೆ ಮಾಡಿದ: ಮೊದಲಿಗೆ ದುರ್ಯೋಧನನ ಮೇಲೆ ಹಲ್ಲೆ ನಡೆಸಿ, ಅವನನ್ನು [illegible]: ಶಲ್ಯ ಮೂರ್ಛೆ ಹೋಗುವಂತೆ ಮಾಡಿದ; ಶಲ್ಯನ

ಸಹೋದರನನ್ನೂ ಕೊಂದ. ತನ್ನ ಕಡೆ ಓಡಿ ಬಂದ ದುಃಶಾಸನನ್ನೂ ಭಯದಿಂದ ಕಳವಳಗೊಂಡವನನ್ನಾಗಿ ಮಾಡಿದ. ಎದೆಗುಂದಿದ ದುಃಶಾಸನನ ಅವಸ್ಥೆಯನ್ನು ಕಂಡು ಕರ್ಣ ಅಭಿಮನ್ಯುವಿನ ಮೇಲೆ ಹಲ್ಲೆ ನಡೆಸಿದ.

ಅಭಿಮನ್ಯು ಕರ್ಣನನ್ನು ಯಾವ ಶೋಚನೀಯ ಸ್ಥಿತಿಗೆ ತಂದನೆಂದರೆ, ಕರ್ಣನ ತಮ್ಮ ಅವನ ಸಹಾಯಕ್ಕೆ ಓಡಿ ಬರಬೇಕಾಯಿತು. ಅನವಧಾನ ಸ್ಥಿತಿಯಲ್ಲಿ ಅಭಿಮನ್ಯು ಕರ್ಣನ ತಮ್ಮನ ರುಂಡವನ್ನು ಕ್ಷಣದಲ್ಲಿ ಮುಂಡದಿಂದ ಬೇರ್ಪಡಿಸಿದ. ತನ್ನ ಪ್ರಾಣವನ್ನುಳಿಸಲು ಬಂದ ತನ್ನ ತಮ್ಮ ಪ್ರಾಣವನ್ನು ಕಳೆದುಕೊಂಡದ್ದನ್ನು ನೋಡಿದ ಮೇಲಾದರೂ ಕರ್ಣ ನಿರ್ಧಾರದಿಂದ ಯುದ್ಧ ಮಾಡಬೇಕಿತ್ತು. ಆದರೆ ಅದು ಬಿಟ್ಟು ಅಲ್ಲಿಂದ ಓಡಿಹೋದ. ಶಲ್ಯನ ಮಗ ರುಕ್ಮ ಮತ್ತು ದುರ್ಯೋಧನನ ಮಗ ಲಕ್ಷ್ಮಣ ಇವರನ್ನೂ ಈಗ ಅಭಿಮನ್ಯು ಕೊಂದ. ಎಲ್ಲರೂ ಒಟ್ಟಾಗಿ ಸೇರಿ ಪ್ರಯತ್ನವನ್ನು ಮಾಡದ ಹೊರತು ಅಭಿಮನ್ಯುವೆಂಬ ಮುಳ್ಳನ್ನು ತೆಗೆಯಲು ಸಾಧ್ಯವಿಲ್ಲವೆಂದು ಅರಿತು, ದ್ರೋಣ, ಕೃಪ, ಕರ್ಣ, ಅಶ್ವತ್ಥಾಮ, ಶಲ್ಯ ಮತ್ತು ಕೃತವರ್ಮಾ ಈ ಆರು ಜನರೂ ಕೂಡಲೇ ಅಭಿಮನ್ಯುವಿನ ಮೇಲೆ ಹಲ್ಲೆ ನಡೆಸಿದರು. ಕರ್ಣ ಅಭಿಮನ್ಯುವಿನ ಬಿಲ್ಲನ್ನು ಮುರಿದ; ಕೃತವರ್ಮಾ ಕುದುರೆಗಳನ್ನು ಕೊಂದ, ಕೃಪಾಚಾರ್ಯ ಸಾರಥಿಯನ್ನು ಕೊಂದ, ಕೆಲವರು ಮುಂದಿನಿಂದ, ಕೆಲವರು ಹಿಂದಿನಿಂದ ಅಭಿಮನ್ಯುವಿನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು. ಕೊನೆಗೆ ಅಭಿಮನ್ಯು ಗದೆಯನ್ನು ಕೈಗೆತ್ತಿಕೊಂಡು, ಗದಾಯುದ್ಧದಲ್ಲೂ ವಿಕ್ರಮವನ್ನು ಪ್ರದರ್ಶಿಸಿ, ಅಂತಿಮವಾಗಿ ದುಃಶಾಸನನ ಮಗನಿಂದ ಸಾವನ್ನಪ್ಪಿದ.

ಅರ್ಜುನನ ಗೈರು ಹಾಜರಿಯಲ್ಲಿ ಜಯದ್ರಥ ಮತ್ತು ಅಭಿಮನ್ಯು ಯಾವ ಪರಾಕ್ರಮವನ್ನು ಪ್ರದರ್ಶಿಸಿದರೋ ಅದು ಭಾರತ ಯುದ್ಧದಲ್ಲಿ ಸ್ಪಷ್ಟವಾಗಿ ಎದ್ದು ಕಾಣುವಷ್ಟು ತೇಜಸ್ವಿಯಾಗಿತ್ತು. ಅಭಿಮನ್ಯುವಿನ ಪರಾಕ್ರಮ ದೊಡ್ಡದಾಗಿತ್ತು. ಆದರೆ ಜಯದ್ರಥನದೂ ಏನೂ ಕಡಿಮೆ ಇರಲಿಲ್ಲವೆಂಬುದನ್ನು ಗಮನದಲ್ಲಿಡುವುದು ಅಗತ್ಯವಾಗಿದೆ. ಅಭಿಮನ್ಯು ಕೌರವ ವೀರರಿಗೆ ಯಾವ ಅವಸ್ಥೆಯನ್ನುಂಟು ಮಾಡಿದನೋ ಅದೇ ಅವಸ್ಥೆಯನ್ನು ಜಯದ್ರಥ ಪಾಂಡವರಿಗೆ ಉಂಟು ಮಾಡಿದ. ಸಾತ್ಯಕಿಯಂಥ ಬಿಲ್ಲುಗಾರನೂ ಜಯದ್ರಥನ ಮುಂದೆ ಶೌರ್ಯವನ್ನು ಪ್ರದರ್ಶಿಸಿದನೆಂಬುದು ತಿಳಿದುಬರುತ್ತದೆ. ಅರ್ಜುನನ ಗೈರು ಹಾಜರಿಯಲ್ಲಿ ಪಾಂಡವರ ಶೌರ್ಯ ಎಷ್ಟರಮಟ್ಟಿಗೆ ಪ್ರಭಾವಯುತವಾಗಿತ್ತೆಂಬುದಕ್ಕೆ ಇದು ಒಂದು ರೀತಿಯ ಪರೀಕ್ಷೆಯ ಒರೆಗಲ್ಲೇ ಆಗಿತ್ತು. ಆ ಪರೀಕ್ಷೆಯಲ್ಲಿ ಪಾಂಡವರು ಉತ್ತೀರ್ಣರಾಗಲಿಲ್ಲವೆಂಬುದನ್ನು ಒಪ್ಪಿಕೊಳ್ಳದೇ ಇರುವುದರಲ್ಲಿ ಅರ್ಥವಿಲ್ಲ.

ಅರ್ಜುನನ ಪರಾಕ್ರಮವೇ ಪಾಂಡವರಿಗೆ ನಿಜವಾದ ಆಧಾರವಾಗಿತ್ತು. ಈ ಆಧಾರ, ಭಾವನಾವಶತೆಯಿಂದ ಹುಟ್ಟುವ ವಿಷಾದವೇನುಂಟೋ ಅದರಿಂದ ತತ್ತರಿಸದಂತೆ ಮಾಡುವುದು ಪಾಂಡವರ ವಿಜಯದ ದೃಷ್ಟಿಯಿಂದ ಎಲ್ಲಕ್ಕಿಂತಲೂ ದೊಡ್ಡ ಜವಾಬ್ದಾರಿಯಾಗಿತ್ತು. ಅರ್ಜುನನ ಸಾರಥ್ಯವನ್ನು ಸ್ವೀಕರಿಸಿ, ಯಾವಾಗಲೂ ಅವನೊಡನೆ

ಉಳಿದು, ಕೃಷ್ಣ ಈ ಕಾರ್ಯವನ್ನು ಹೊತ್ತು ಕೊಂಡುದಲ್ಲದೆ, ಅದನ್ನು ದೊಡ್ಡ ಕೌಶಲ್ಯದಿಂದ ಸಾಧಿಸಿದ. ಪಾಂಡವರ ನಿಶ್ಚಿತ ವಿಜಯವಾದುದು ಇದರಿಂದಲೇ.

ಅಭಿಮನ್ಯುವಿನ ವಧೆಯಿಂದ ಅರ್ಜುನನ ಮೇಲೆ ದುಃಖದ ಬೆಟ್ಟ ಕುಸಿದಂತಾಯಿತು. ಮರುದಿನ ಸೂರ್ಯ ಮುಳುಗುವ ಮೊದಲೇ ಜಯದ್ರಥನ ವಧೆ ಮಾಡುವುದಾಗಿ ಅರ್ಜುನ ಪ್ರತಿಜ್ಞೆ ಮಾಡಿದ. ಆದರೂ ಈ ಪ್ರತಿಜ್ಞೆಯ ಸ್ವರೂಪವೂ ಅರ್ಜುನನ ಸ್ವಭಾವ ರಚನೆಯ ಮೇಲೆ ಥಳಥಳಿಸುವ ಬೆಳಕನ್ನು ಬೀರುತ್ತದೆ. ಈ ಪ್ರತಿಜ್ಞೆಯನ್ನು ಮಾಡುವಾಗ ಅರ್ಜುನ ಹೀಗೂ ಒಂದು ಉಕ್ತಿಯನ್ನು ಜೋಡಿಸಿದ್ದ.

*ಸತ್ಯಂವಃ ಪ್ರತಿಜಾನಾಮಿ ಶ್ವೋಽಸ್ಮಿ ಹಂತಾ ಜಯದ್ರಥಮ್ ।*
*ನಚೇದ್ ವಧಭಯಾದ್‌ಭೀತೋ ಧಾರ್ತರಾಷ್ಟ್ರಾನ್ ಪ್ರಹಾಸ್ಯತಿ ॥*
*ನಚಾಸ್ಮಾನ್ ರಣಂಗಚ್ಛೇದ್ ಕೃಷ್ಣಂವಾ ಪುರುಷೋತ್ತಮಮ್ ।*
*ಭವಂತಂವಾ ಮಹಾರಾಜಶ್ವೋಽಸ್ಮಿಹಂತಾ ಜಯದ್ರಥಮ್ ॥*

*ದ್ರೋ. ಪ. 73- 20-21.*

(ಸತ್ಯವಾಗಿ ನಿಮ್ಮ ಮುಂದೆ ಪ್ರತಿಜ್ಞೆ ಮಾಡುತ್ತಿದ್ದೇನೆ. ತನ್ನ ವಧೆಯ ಹೆದರಿಕೆಯಿಂದ ಜಯದ್ರಥ ಕೌರವರನ್ನು ತೊರೆದು ಹೋಗದಿದ್ದರೆ, ನಾಳೆ ಅವನನ್ನು ಕೊಲ್ಲುವೆನು. ನಮಗಾಗಲಿ, ಪುರುಷೋತ್ತಮನಾದ ಕೃಷ್ಣನಿಗಾಗಲಿ ಅಥವಾ ಮಹಾರಾಜ ಯುಧಿಷ್ಠಿರನಿಗಾಗಲಿ ಶರಣನಾಗದಿದ್ದರೆ ನಾಳೆ ಅವನನ್ನು ಕೊಲ್ಲುವೆನು).

ಹೊಟ್ಟೆ ಸಂಕಟದಿಂದ ಮಾಡಿದ ಈ ಪ್ರತಿಜ್ಞೆಯಲ್ಲೂ ಬಹುಮಟ್ಟಿಗೆ ಜಯದ್ರಥನಿಗೆ ಓಡಿಹೋಗುವ ಮಾರ್ಗವನ್ನುಳಿಸಿದ್ದ. ಅರ್ಜುನನ ಒಳಗಿನ ಸೌಜನ್ಯ ಎಷ್ಟು ದೊಡ್ಡದಿತ್ತೆಂದರೆ, ಸ್ವಜನರೊಡನೆ ನಡೆದ ಯುದ್ಧದಲ್ಲಿ ನಿಶ್ಚಿತವಾದ ಮಾತನ್ನಾಡಲು ಅವನು ಶಕ್ಯನಾಗಿರಲಿಲ್ಲ. ಮಹಾಪರಾಕ್ರಮವನ್ನು ಪ್ರದರ್ಶಿಸಿದ ಜಯದ್ರಥ ಈಗ ಅರ್ಜುನನ ಪ್ರತಿಜ್ಞೆಯಿಂದ ಕುಸಿದವನಾಗಿ ತನ್ನ ಮನೆಗೆ ಹೋಗುವ ಮಾತನ್ನಾಡಲು ಆರಂಭಿಸಿದ. ಇದರಿಂದ ಅರ್ಜುನನ ಪರಾಕ್ರಮದ ಭೀಕರತೆ ಎಷ್ಟು ವಿಲಕ್ಷಣ ದಾಕ್ಷಿಣ್ಯಪೂರ್ಣವಾಗಿತ್ತೆಂಬುದು ಸ್ಪಷ್ಟವಾಗಿತ್ತು. ಆದರೂ "ಅರ್ಜುನನದು ಏನೂ ನಡೆಯಲಾರದಂಥ ವ್ಯೂಹವನ್ನು ನಾನು ರಚಿಸುವೆ" ಎಂದು ದ್ರೋಣಾಚಾರ್ಯ ಅಭಿವಚನವನ್ನು ಕೊಟ್ಟ ಮೇಲೆ, ಜಯದ್ರಥ ತನ್ನ ಮನೆಯಲ್ಲಿಯೇ ತಾನು ಇರುವುದಾಗಿ ಹೇಳಿದ್ದ ಯೋಜನೆಯನ್ನು ಬದಲಿಸಿದ. ಹೀಗೆ ಆಶ್ವಾಸನೆಯನ್ನು ಕೊಡುವ ಮೊದಲು ದ್ರೋಣಾಚಾರ್ಯ ತನ್ನದೇ ಸಾಮರ್ಥ್ಯವನ್ನು ವಿಚಾರ ಮಾಡಿದ್ದನೇ ಎಂಬುದು ಗೊತ್ತಾಗುವುದಿಲ್ಲ. ಒಂದು ವೇಳೆ ಆಶ್ವಾಸನೆಯನ್ನು ಕೊಟ್ಟ ಮೇಲೆ ಅದನ್ನು ಕಾಪಾಡುವಂಥ ಪ್ರಯತ್ನವನ್ನೂ ಮಾಡಲಿಲ್ಲ. ಪ್ರತ್ಯಕ್ಷವಾಗಿ ದ್ರೋಣನನ್ನು ಪಕ್ಕಕ್ಕೆ ತಳ್ಳಿ ಯಾವಾಗ ಜಯದ್ರಥನ ಮುಂದೆ ಸಲೀಸಾಗಿ ಅರ್ಜುನ ಸಾಗಿದನೋ, ಆಗ "ಮುಪ್ಪಿನಿಂದ ನನ್ನಿಂದ ವೇಗವಾಗಿ ಹೋಗಲಾಗುವುದಿಲ್ಲ. ನೀನೇ ಅರ್ಜುನನೊಡನೆ ಯುದ್ಧ ಮಾಡು" ಎಂದು

ದುರ್ಯೋಧನನಿಗೆ ಹೇಳಿ ಆಚಾರ್ಯ ಸುಮ್ಮನೆ ಕಾಲವನ್ನು ಕಳೆಯುತ್ತಿದ್ದ. ಇದರ ಅರ್ಥ ದ್ರೋಣಾಚಾರ್ಯ ತಿಳಿದೂ ತಿಳಿದೂ ಸೋಮಾರಿತನವನ್ನು ತೋರಿಸುತ್ತಿದ್ದಾನೆಂದಲ್ಲ! ದ್ರೋಣಾಚಾರ್ಯ ಈಗ ವೃದ್ಧನಾಗಿದ್ದಾನೆ. ಚಟುವಟಿಕೆಯಿಂದ ಆತನು ಯುದ್ಧ ಮಾಡಲು ಅಸಮರ್ಥನಾಗಿದ್ದಾನೆ. ಆದ್ದರಿಂದ ಅರ್ಜುನ ಆತನನ್ನು ದಾಟಿಹೋದ. ಇವರಲ್ಲಿ ದ್ರೋಣನ ಯಾವ ದೋಷವೂ ನನಗೆ ಕಾಣುತ್ತಿಲ್ಲ" ಎಂದು ಕರ್ಣ ಮಾಡಿದ ಈ ವಿಶ್ಲೇಷಣೆ ಸರಿಯಾಗಿಯೇ ಇದೆ. ಆದರೂ ಕೊಟ್ಟ ಆಶ್ವಾಸನೆಯನ್ನು ಪಾಲಿಸಲು ಆಚಾರ್ಯ ಹೆಚ್ಚಿನ ಸ್ಪಷ್ಟವಾದ ಪ್ರಯತ್ನವನ್ನು ಮಾಡಬೇಕಿತ್ತೆಂದು ಅನ್ನಿಸದೆ ಇರಲಿಲ್ಲ. ಅರ್ಜುನನಿಂದ ಜಯದ್ರಥನನ್ನು ರಕ್ಷಿಸಲು ದ್ರೋಣಾಚಾರ್ಯ ಪ್ರಚಂಡ ವ್ಯೂಹವನ್ನು ರಚಿಸಿದ. ಆ ವ್ಯೂಹದ ಹಿಂಬದಿಯಲ್ಲಿ ಮತ್ತೊಂದು ವ್ಯೂಹವನ್ನು ರಚಿಸಿ, ಮುಂಭಾಗದಲ್ಲಿ ತಾನೇ ನಿಂತ. ದ್ರೋಣಾಚಾರ್ಯನ ಹಿಂದೆ ಬಹುದೂರದಲ್ಲಿ ಜಯದ್ರಥನ ಬಿಡಾರವಿತ್ತು. ಅವನನ್ನು ರಕ್ಷಿಸುವ ಕಾರ್ಯವನ್ನು ಕರ್ಣ, ಅಶ್ವತ್ಥಾಮ, ಕೃಪಾಚಾರ್ಯ, ಶಲ್ಯ ಮುಂತಾದವರಿಗೆ ವಹಿಸಲಾಗಿತ್ತು. ವ್ಯೂಹದ ಮುಂಭಾಗದಲ್ಲಿ ದುಃಶಾಸನ, ದುರ್ಮರ್ಷಣ ಮುಂತಾದ ಕೌರವ ವೀರರು ನಿಂತಿದ್ದರು. ಸೂರ್ಯ ಮುಳುಗುವ ತನಕ ಜಯದ್ರಥನ ಬಳಿಗೆ ಅರ್ಜುನ ಬಾರದಂತೆ ಮಾಡುವ ಸಂಕಲ್ಪ ಕೌರವರದಾಗಿತ್ತು. ಆದರೆ ಸೂರ್ಯ ಮುಳುಗುವ ಮೊದಲೇ ಜಯದ್ರಥನ ವಧೆ ಮಾಡುವ ನಿರ್ಧಾರ ಪಾಂಡವರದಾಗಿತ್ತು. ಅರ್ಜುನ ವ್ಯೂಹವನ್ನು ಒಡೆದು, ಸೇನಾಮುಖದಲ್ಲಿದ್ದ ಕೌರವರನ್ನು ಓಡಿಸಿ, ದ್ರೋಣಾಚಾರ್ಯನ ಬಳಿಗೆ ಬಂದ. ದ್ರೋಣಾಚಾರ್ಯನನ್ನು ಪಕ್ಕಕ್ಕೆ ತಳ್ಳಿ, ಅರ್ಜುನ ಮುನ್ನುಗ್ಗಿದ.

ಹಿಂದೆ ಹೇಳಿದಂತೆ ಮುಪ್ಪಿನ ಕಾರಣದಿಂದ ಅರ್ಜುನನ ಓಟವನ್ನು ನಿಲ್ಲಿಸಲು ದ್ರೋಣಾಚಾರ್ಯ ಏನನ್ನೂ ಮಾಡಲಾಗಲಿಲ್ಲ. ದಾರಿಯಲ್ಲಿ ಎಲ್ಲ ವಿರೋಧಿಗಳನ್ನೂ ಸದೆಬಡಿದು ಅರ್ಜುನ ಸಾಯಂಕಾಲದ ಸುಮಾರಿಗೆ ಜಯದ್ರಥನ ಬಳಿ ಬಂದ. ಆ ಸಮಯದಲ್ಲಿ ಕರ್ಣ, ಅಶ್ವತ್ಥಾಮ, ಕೃಪಾಚಾರ್ಯ, ಶಲ್ಯ ಮುಂತಾದವರು ಜಯದ್ರಥನ ರಕ್ಷಣೆಗಾಗಿ ತಮ್ಮ ಬಲವಿದ್ದಷ್ಟು ಪ್ರಯತ್ನ ಮಾಡಿದರು. ಆದರೆ ಅವರೆಲ್ಲರನ್ನೂ ಸೋಲಿಸಿ, ಕೊನೆಯಲ್ಲಿ ಸೂರ್ಯ ಮುಳುಗುವ ಮೊದಲೇ ಅರ್ಜುನ ಜಯದ್ರಥನ ತಲೆಯನ್ನು ಹಾರಿಸಿದ.

"ಕೃಷ್ಣ ಸುದರ್ಶನ ಚಕ್ರದಿಂದ ಸೂರ್ಯನನ್ನು ಮುಚ್ಚಿ ಸೂರ್ಯ ಮುಳುಗಿದನೆಂಬ ತೋರಿಕೆಯನ್ನುಂಟು ಮಾಡಿದ. ಅದರಿಂದ ಅಡಗಿ ಕೂತಿದ್ದ ಜಯದ್ರಥ ಹೊರಗೆ ಬಂದ. ಅವನು ಬಂದದ್ದನ್ನು ನೋಡಿ, "ಇತ್ತ ಸೂರ್ಯ ಅತ್ತ ಜಯದ್ರಥ" ಎಂದು ಕೃಷ್ಣ ಹೇಳಿದ ಕೂಡಲೇ ಅರ್ಜುನ ಜಯದ್ರಥನ ರುಂಡವನ್ನು ಹಾರಿಸಿದ" ಎಂಬ ಈ ಕಲ್ಪನಾರಮ್ಯ ಕಥೆಗೆ ಮಹಾಭಾರತದ ಮೂಲದಲ್ಲಿ ಸ್ಥಾನವಿಲ್ಲ. ಆದರೂ ಮಹಾಭಾರತದ ಸರಳ ವೃತ್ತಾಂತ ಕಲ್ಪನಾ ರಮ್ಯತೆಗೆ ಅವಕಾಶ ಮಾಡಿದೆ. ಈ ಕಲ್ಪನಾರಮ್ಯತೆ ಜಯದ್ರಥನ ವಧೆಯ ವೃತ್ತಾಂತಕ್ಕೆ ಎಷ್ಟರಮಟ್ಟಿಗೆ ಹೊಂದಿಕೊಳ್ಳುತ್ತದೆ ಎಂಬುದನ್ನು ನೋಡಬೇಕಾಗಿದೆ.

ಮೂಲ ಮಹಾಭಾರತದಲ್ಲಿ ಈ ಕಥಾಭಾಗ ಹೀಗಿದೆ :

ಯೋಗಮತ್ರ ವಿಧಾಸ್ಯಾಮಿ ಸೂರ್ಯಸ್ಯಾವರಣಂ ಪ್ರತಿ ?
ಅಸ್ತಂಗತ ಇತಿ ವ್ಯಕ್ತಂ ದ್ರಕ್ಷ್ಯತ್ಯೇಕಃ ಸ ಸಿಂಧುರಾಟ್ ॥
ಹರ್ಷೇಣ ಜೀವಿತಾಕಾಂಕ್ಷೀ ವಿನಾಶಾರ್ಥಂ ತವಪ್ರಭೋ ।
ನಗೋಪ್ಸ್ಯಸಿ ದುರಾಚಾರಃ ಸ ಆತ್ಮಾನಂ ಕಥಂಚನ ।
ತತ್ರ ಛಿದ್ರೇಪ್ರಹರ್ತವ್ಯಂ ತ್ವಯಾಅಸ್ಯ ಕುರುಸತ್ತಮ
ವ್ಯಪೇಕ್ಷಾನೈವ ಕರ್ತವ್ಯಾ ಗತೋಽಸ್ತಮಿತಿ ಭಾಸ್ಕರಃ ॥
ತತೋಽಸೃಜತ್ತಮಃ ಕೃಷ್ಣಃ ಸೂರ್ಯಸ್ಯಾವರಣಂ ಪ್ರತಿ ॥
ಯೋಗೀಯೋಗೇನ ಸಂಯುಕ್ತೋ ಯೋಗಿನಾಮೀಶ್ವರೋ ಹರಿಃ ।
ವೀಕ್ಷ್ಯಮಾಣೇ ತತಸ್ತಸ್ಮಿನ್ ಸಿಂಧುರಾಜೇ ದಿವಾಕರಮ್ ।
ಪುನರೇವಾಬ್ರವೀತ್ ಕೃಷ್ಣೋ ಧನಂಜಯಮಿದಂ ವಚಃ ॥
ಪಶ್ಯ ಸಿಂಧುಪತಿಂವೀರಂ ಪ್ರೇಕ್ಷಮಾಣಂ ದಿವಾಕರಮ್ ।
ಭಯಂ ಹಿ ವಿಪ್ರಮುಚ್ಛೈತತ್ ತ್ವತ್ತೋ ಭರತಸತ್ತಮ ॥
ಅಯಂಕಾಲೋ ಮಹಾಬಾಹೋ ವಧಾಯಾಸ್ಯ ದುರಾತ್ಮನಃ ।
ಛಿಂಧಿ ಮೂರ್ಧಾನಮಸ್ಯಾಶು ಕುರುಸಾಫಲ್ಯಮಾತ್ಮನಃ ॥

*ದ್ರೋ. ಪ. 146 - 64, 65, 66, 67, 70, 71, 72.*

(ಸೂರ್ಯನಿಗೆ ಹೊದಿಕೆ ಹಾಕುವ ಬಗ್ಗೆ ಯೋಜನೆಯನ್ನು ಹೂಡುವೆನು. (ಇದರಿಂದ) ಒಬ್ಬಂಟಿಗ ಸಿಂಧುರಾಜ ಸೂರ್ಯ ಮುಳುಗಿದನೆಂದು ಸ್ಪಷ್ಟವಾಗಿ ನೋಡುವನು. ಪ್ರಭೋ ಆ ದುರಾಚಾರಿ ಸಂತೋಷದಿಂದ ತನ್ನ ಬದುಕಿಗಾಗಿ ಮತ್ತು ನಿನ್ನ ನಾಶಕ್ಕಾಗಿ ತನ್ನನ್ನು ಮುಚ್ಚಿಟ್ಟುಕೊಳ್ಳುವುದಿಲ್ಲ. ಕುರುಸತ್ತಮಾ ದೌರ್ಬಲ್ಯವಿರುವಾಗ ನೀನು ಆತನನ್ನು ಹೊಡೆಯಲೇಬೇಕು. ಸೂರ್ಯ ಮುಳುಗಿದನೆಂದು ಭರವಸೆಯಿಂದ ಕೂಡಿರಬಾರದು. ಅನಂತರ ಸೂರ್ಯನ ಹೊದಿಕೆ ಬಗ್ಗೆ ಯೋಗಿಯೂ ಯೋಗದಿಂದ ಕೂಡಿದವನೂ, ಯೋಗಿಗಳಿಗೆ ಈಶ್ವರನೂ, ಹರಿಯೂ ಆದ ಕೃಷ್ಣ ಕತ್ತಲೆಯನ್ನು ಹುಟ್ಟಿಸಿದ. (ಅರ್ಜುನಾ, ಭಯವನ್ನು ತೊರೆದು, ಸೂರ್ಯನನ್ನು ನೋಡುತ್ತಿರುವ ವೀರನಾದ ಸಿಂಧುರಾಜನನ್ನು ನೋಡು. ಮಹಾಬಾಹೋ, ಈ ದುರಾತ್ಮನ ವಧೆಗೆ ಇದೇ (ಸರಿಯಾದ) ಕಾಲ. ಬೇಗನೆ ಈತನ ತಲೆಯನ್ನು ಕತ್ತರಿಸು. ನಿನ್ನ ಪ್ರತಿಜ್ಞೆಯನ್ನು ಸಫಲಗೊಳಿಸು.)

ಮೇಲಿನ ಸಂಗತಿಯಿಂದ ಯೋಗ ಮಾಯೆಯಿಂದ ಸೂರ್ಯ ಮುಳುಗಿದಂತೆ ಭಾಸವನ್ನು ನಿರ್ಮಿಸಲಾಯಿತೆಂದು ಹೇಳಲಾಗಿದೆ. ಆದರೂ ಯುದ್ಧ ನಡೆಯುತ್ತಿರುವಾಗ, ಸೂರ್ಯ ಮುಳುಗಿದ್ದು ಕೌರವರಿಗಾಗಲಿ ಅಥವಾ ಜಯದ್ರಥನಿಗಾಗಲಿ ತಿಳಿದಿತ್ತು

ಎಂಬುದನ್ನು ತೋರಿಸಲು ಮಹಾಭಾರತದಲ್ಲಿ ಯಾವುದೇ ಪುರಾವೆ ಕಂಡು ಬರುವುದಿಲ್ಲ. ಹಾಗೆ ಆಗಿದ್ದಿದ್ದರೆ ಕೌರವರು ಕೋಲಾಹಲವನ್ನುಂಟು ಮಾಡುತ್ತಿದ್ದರು. ಆದರೆ ಹಾಗೆ ಮಾಡದೆ ಅವರು ಕೊನೆಯ ತನಕ ಹೋರಾಡುತ್ತಲೇ ಇದ್ದರು. ಇದರಿಂದ ಅವರಿಗೆ ತಪ್ಪು ತಿಳುವಳಿಕೆಯಾಗಿರಲಿಲ್ಲವೆಂಬುದು ಸ್ಪಷ್ಟ. ಜಯದ್ರಥ ವಧೆಯ ಪೂರ್ವದಲ್ಲಿ 'ಸೂರ್ಯ ಮುಳುಗುತ್ತಿದ್ದಾನೆ ನೋಡು" ಎಂದು ಹೇಳಲಾಗಿದೆ. ಇದರ ಅರ್ಥ ಜಯದ್ರಥ ವಧೆಯ ಪೂರ್ವದಲ್ಲಿ ಆಕಾಶದಲ್ಲಿ ಸೂರ್ಯ ಪ್ರಕಾಶಿಸುತ್ತಿದ್ದ. ಇದು ನಿಜವಾಗಿದ್ದರೆ ಜಯದ್ರಥನ ವಧೆಯಾದ ಮೇಲೆ ಕೃಷ್ಣ ಕತ್ತಲೆಯನ್ನು ನಾಶ ಮಾಡಿದ ಎಂದು ಹೇಳುವುದರಲ್ಲಿ ಮುಚ್ಚು ಮರೆಯಿಲ್ಲದ ವಿಸಂಗತಿಯಾಗಿದೆ. ಜಯದ್ರಥನ ವಧೆಯಾದ ನಂತರ ಆ ಬಗ್ಗೆ ಕೌರವರ ಶಿಬಿರದಲ್ಲಿ ಯಾವ ಬಿಸಿ ಚರ್ಚೆ ನಡೆಯಿತೋ ಅದರಲ್ಲಿ ಕತ್ತಲೆಯುಂಟಾದುದರಿಂದ ಮೋಸವಾಯಿತೆಂಬ ಮಾತನ್ನು ಅಸ್ಪಷ್ಟವಾಗಿಯಾದರೂ ಯಾರೂ ಆಡಲಿಲ್ಲ. ದ್ರೋಣಾಚಾರ್ಯನ ಅರೆಮನಸ್ಸಿನಿಂದ ಜಯದ್ರಥ ಸಾವಿಗೀಡಾದನೆಂದು ದುರ್ಯೋಧನ ಹೇಳಿದ. ಆದರೆ ಕರ್ಣ ಕೌರವರು ಪರಾಕಾಷ್ಠೆಯ ಪ್ರಯತ್ನವನ್ನು ಮಾಡಿಯೂ ಜಯದ್ರಥನ ವಧೆ ಆಯಿತು. ಆದ್ದರಿಂದ "ದೈವ ಎಲ್ಲಕ್ಕಿಂತ ಬಲವಾದುದೆಂದು ಹೇಳಬೇಕು" ಎಂಬೀ ಭೂಮಿಕೆಯನ್ನು ಮಂಡಿಸಿದ. ಎಲ್ಲ ಕೌರವರ ಒಟ್ಟುಗೂಡಿದ ಪರಾಕ್ರಮವೂ ಅರ್ಜುನನ ಯುದ್ಧಕೌಶಲ್ಯದ ಮುಂದೆ ಕಡಿಮೆಯಾದುದರಿಂದ ಜಯದ್ರಥನ ವಧೆಯಾಯಿತೆಂಬ ಕಾರಣವನ್ನು ದ್ರೋಣಾಚಾರ್ಯ ಕೊಟ್ಟ. ಸಾರಾಂಶವೆಂದರೆ, ಸೂರ್ಯ ಮುಳುಗಿದ ಭಾಸದಿಂದ ಕೌರವರಿಗೆ ಮೋಸವಾಯಿತೆಂಬ ತಕರಾರನ್ನು ಯಾರೂ ಮಾಡಲಿಲ್ಲವೆಂಬುದೇ. ಇದರಿಂದ ಕೃಷ್ಣ ಹಗಲಿನಲ್ಲಿ ಕತ್ತಲೆಯನ್ನುಂಟು ಮಾಡಿದ ಎಂಬೀ ಕಥೆಯನ್ನು ಮಹಾಭಾರತ ರಚನೆಯಾದ ಮೇಲೆ ಸೇರಿಸಿರಬೇಕೆಂಬುದು ಸ್ಪಷ್ಟವಾಗಿ ಕಾಣುತ್ತದೆ. ವ್ಯೂಹದಲ್ಲಿ ನುಸುಳಿದ ಮೊದಲುಗೊಂಡು ಜಯದ್ರಥನ ವಧೆಯಾಗುವವರೆಗೆ ಅರ್ಜುನ ಮತ್ತು ಅವನ ಸಹಾಯಕ್ಕಾಗಿ ದಾರಿಯುದ್ದಕ್ಕೂ ಇದ್ದ ಸಾತ್ಯಕಿ ಇವರಿಬ್ಬರು ಯಾವ ಪರಾಕ್ರಮವನ್ನು ಪ್ರದರ್ಶಿಸಿದರೋ ಅದಕ್ಕೆ ಭಾರತ ಯುದ್ಧದಲ್ಲೂ ಸಾಟಿ ಸಿಗಲಾರದು. "ಏಳು ಅಕ್ಷಾಹಿಣೀ ಸೈನ್ಯ ಸಹಿತವಾಗಿ ಜಯದ್ರಥನನ್ನು ಅರ್ಜುನ ನಾಶ ಮಾಡಿದ" ಎಂಬ ದುರ್ಯೋಧನನ ದುಃಖದ ಮಾತು ಇದನ್ನೇ ತೋರಿಸುತ್ತದೆ.

ಜಯದ್ರಥನ ವಧೆಯಾದುದರಿಂದ ದುಃಖಿಗೊಂಡ ಕೃಪಾಚಾರ್ಯ ಅರ್ಜುನನ ಮೇಲೆ ಹಲ್ಲೆ ನಡೆಸಿದ. ಆದರೆ ಅರ್ಜುನ ಸ್ವಲ್ಪಮಟ್ಟಿಗೆ ಪ್ರತೀಕಾರ ಮಾಡಿದ ಕೂಡಲೇ ಕೃಪಾಚಾರ್ಯ ರಥದಲ್ಲೇ ಮೂರ್ಛೆಗೊಂಡು ಬಿದ್ದ. ಇದರಲ್ಲಿ ಅರ್ಜುನನ ದೋಷವೇನೂ ಇರಲಿಲ್ಲ. ಕೃಪಾಚಾರ್ಯ ಹಲ್ಲೆ ನಡೆಸಿದ್ದ. ಅದಕ್ಕೆ ಅರ್ಜುನ ಪ್ರತೀಕಾರ ಮಾಡಿದ. ಇದರಲ್ಲಿ ಅನುಚಿತವಾದುದು ಏನೂ ಇರಲಿಲ್ಲ. ಪ್ರತೀಕಾರ ವಾಡಿಕೆಯಾಗಿತ್ತು. ಕೃಪಾಚಾರ್ಯ ಮೂರ್ಛಿತನಾದುದರಲ್ಲಿ ಶೋಕಪಡುವಂಥಾದ್ದು ಏನೂ ಇರಲಿಲ್ಲ. ಆದರೆ ತನ್ನ ಬಾಣದಿಂದ ತನ್ನ ಆಚಾರ್ಯ ಪೀಡಿತನಾದುದನ್ನು ನೋಡಿ ಅರ್ಜುನನ ಮನಸ್ಸು ಕಳವಳಗೊಂಡಿತು.

ಧಿಗಸ್ತು ಕ್ಷಾತ್ರಮಾಚಾರಂ ಧಿಗಸ್ತು ಬಲಪೌರುಷಮ್ ।
ಕೋಽಪಿ ಬ್ರಾಹ್ಮಣಮಾಚಾರ್ಯಮಭಿದ್ರುಹ್ಯೇತ ಮಾದೃಶಃ ।
ಶೋಕಯತ್ಯೇಷ ನಿಯತಂ ಭೂಯಃ ಪುತ್ರವಧಾದ್ಧಿ ಮಾಮ್ ।
ತದಿದಂ ನರಕಾಯಾದ್ಯ ಕೃತಂಕರ್ಮಮಯಾ ಧ್ರುವಮ್ ।
ಆಚಾರ್ಯಂ ಶರವರ್ಷೇಣ...
ನಮಸ್ತಸ್ಮೈ ಸುಪೂಜ್ಯಾಯ ಗೌತಮಾಯಾಪಲಾಯಿನೇ ।
ಧಿಗಸ್ತು ಮಮ ವಾರ್ಷ್ಣೇಯ ಯದಸ್ಮೈ ಪ್ರಹರಾಮ್ಯಹಮ್ ॥

*ದ್ರೋ. ಪ. 147-16, 17, 20, 23, 26.*

ಕ್ಷತ್ರಿಯ ಧರ್ಮದ ಆಚರಣೆಗೆ, ಬಲಕ್ಕೆ, ಪೌರುಷಕ್ಕೆ ಧಿಕ್ಕಾರವಿರಲಿ. ಬ್ರಾಹ್ಮಣನಾದ ಆಚಾರ್ಯನಿಗೆ ದ್ರೋಹ ಬಗೆಯುವ ನನಗೆ ಸಮಾನನಾದ ಮತ್ತೊಬ್ಬನಿದ್ದಾನೆಯೇ? ಮೂರ್ಛೆಗೊಂಡಿರುವ ಈ ಆಚಾರ್ಯನು ನನ್ನ ಪುತ್ರ ವಧೆಯ ಶೋಕಕ್ಕಿಂತ ನಿಯತವಾಗಿ ಮತ್ತೆ ಮತ್ತೆ ನನಗೆ ದುಃಖವನ್ನುಂಟುಮಾಡುತ್ತಿದ್ದಾನೆ. ಇಂದು ಆಚಾರ್ಯನನ್ನು ಶರವರ್ಷದಿಂದ ಮೂರ್ಛಿತನನ್ನಾಗಿ ಮಾಡಿ, ನಾನು ನರಕಕ್ಕೆ ದಾರಿ ಮಾಡಿ ಕೊಂಡಂತಾಯಿತು. ಯುದ್ಧದಲ್ಲಿ ಬೆನ್ನು ತೋರಿಸದ ಪೂಜ್ಯನಾದ ಗೌತಮನಿಗೆ (ಕೃಪಾಚಾರ್ಯನಿಗೆ) ನಮಸ್ಕಾರವಿರಲಿ. ಕೃಷ್ಣಾ ಇಂಥವನನ್ನು ಘಾತಿಸುವ ನನಗೆ ಧಿಕ್ಕಾರವಿರಲಿ). ಹೀಗೆ ಅವನು ಶೋಕಪಟ್ಟ. ಗೀತೋಪದೇಶದಿಂದ ಅರ್ಜುನನ ಮೋಹ ಸಂಪೂರ್ಣವಾಗಿ ನಷ್ಟವಾಗಿರಲಿಲ್ಲ. ಅದು ನಷ್ಟವಾಗುವ ಸಾಧ್ಯತೆಯೂ ಇರಲಿಲ್ಲ. ಇದು ಮತ್ತೊಮ್ಮೆ ಅನುಭವಕ್ಕೆ ಬಂದಂತಾಯಿತು. ಇದೇ ವೇಳೆಗೆ ಕರ್ಣ ಅರ್ಜುನನ ಮೇಲೆ ಎರಗಿ ಬಂದುದರಿಂದ ಅರ್ಜುನ ತನ್ನ ಶೋಕಪ್ರಕರಣವನ್ನು ತಡೆ ಹಿಡಿಯಬೇಕಾಗಿ ಬಂದಿತು.

ಅರ್ಜುನ ಮತ್ತು ಸಾತ್ಯಕಿ ದ್ರೋಣಾಚಾರ್ಯನನ್ನು ಕೊಲ್ಲಲು ತಯಾರಾಗಿರಲಿಲ್ಲ. ಅರ್ಜುನನಾದರೋ "ನಾನು ಯುದ್ಧದಲ್ಲಿ ಪ್ರಾಣತ್ಯಾಗವನ್ನಾದರೂ ಮಾಡಿಯೇನು. ಆದರೆ ಆಚಾರ್ಯನಿಗೆ ಎದುರಾಳಿಯಾಗಲಾರೆ! ಎಂಬೀ ಸುದ್ದಿಯನ್ನು ಕೃಷ್ಣ ಹಬ್ಬಿಸಿದ ಮತ್ತು ಈ ಸುಳ್ಳು ಸುದ್ದಿಗೆ ಯುಧಿಷ್ಠಿರನಿಂದ ಬೆಂಬಲವನ್ನು ಕೊಡಿಸಿದ್ದ. ಇದರಿಂದ ದ್ರೋಣಾಚಾರ್ಯ ಶೋಕಾಕುಲನಾದ. ಈ ಸ್ಥಿತಿಯಲ್ಲಿ ಧೃಷ್ಟದ್ಯುಮ್ನ ಆತನನ್ನು ವಧೆ ಮಾಡಿದ. ಶೋಕದಲ್ಲಿ ಮುಳುಗಿದ್ದ ಮತ್ತು ನಿಃಶಸ್ತ್ರನಾಗಿದ್ದ ದ್ರೋಣಾಚಾರ್ಯನ ಮೇಲೆ ಯಾವಾಗ ಧೃಷ್ಟದ್ಯುಮ್ನ ಎರಗಿದನೋ ಆಗ ವ್ಯಾಕುಲನಾಗಿ, "ಆಚಾರ್ಯನನ್ನು ಕೊಲ್ಲಬೇಡ ಬರೀ ಜೀವಂತವಾಗಿ ಹಿಡಿದು ತಾ'! ಎಂದು ಅರ್ಜುನ ಪರಿಪರಿಯಾಗಿ ಬೇಡಿಕೊಂಡ. ಆದರೆ ಆ ಕಡೆ ಗಮನವನ್ನು ಕೊಡದೆ ಧೃಷ್ಟದ್ಯುಮ್ನ ದ್ರೋಣಾಚಾರ್ಯನ ಶಿರಚ್ಛೇದನವನ್ನು ಮಾಡಿದ. ಈ ಘಟನೆಯಿಂದ ಪಾಂಡವರ ಪಾಳಯದಲ್ಲಿ ಸಾತ್ಯಕಿ ಮತ್ತು ಧೃಷ್ಟದ್ಯುಮ್ನ ಇವರ ಯುದ್ಧ ಪ್ರಾರಂಭವಾಗುವುದೋ ಎನ್ನುವಷ್ಟು ಗೊಂದಲವುಂಟಾಯಿತು. ಅರ್ಜುನನ ವಿಷಾದ ಎರಡು ಬದಿಗಳನ್ನೂ ತುಂಬಿ ಹರಿಯಿತು.

ದ್ರೋಣನ ವಧೆಗೆ ಧರ್ಮರಾಜ ಯುಧಿಷ್ಠಿರನೂ ಕಾರಣನಾಗಿದ್ದನೆಂದು ಕಂಡು ಅರ್ಜುನ ತೀರ ಕ್ಷುಬ್ಧನಾದ.

*ಉಪಚೀರ್ಣೋ ಗುರುರ್ಮಿಥ್ಯಾ ಭವತಾ ರಾಜಕಾರಣಾತ್ ।*

*ಧರ್ಮಜ್ಞೇನ ಸತಾನಾಮಸೋಽಧರ್ಮಃ ಸುಮರ್ನ್ಕೃತಃ ॥*

*ಚಿರಂ ಸ್ಥಾಸ್ಯತಿ ಚಾಕೀರ್ತಿ ಸ್ತ್ರೈಲೋಕ್ಯೇ ಸ ಚರಾಚರೇ ।*

*ರಾಮೇ ವಾಲಿವಧಾತ್ ಯದ್ವದೇವಂ ಯದ್ರೋಣೇ ನಿಪಾತಿತೇ ॥*

("ಗುರುವಿನಲ್ಲಿ ನೀನು ಸುಳ್ಳನ್ನಾಚರಿಸಿದೆ ರಾಜ್ಯವನ್ನು ಪಡೆಯುವ ಕಾರಣಕ್ಕಾಗಿ. ಧರ್ಮವನ್ನು ತಿಳಿದವನು ದೊಡ್ಡ ಅಧರ್ಮವನ್ನು ಮಾಡಿದೆ. ವಾಲಿ ವಧೆಯಿಂದ ರಾಮನ ಬಗ್ಗೆ ಚರಾಚರ ಮೂರುಲೋಕಗಳಲ್ಲಿ ಹೇಗೆ ಅಪಕೀರ್ತಿ ನೆಲಸಿತೋ ಅದರಂತೆ ದ್ರೋಣವಧೆ ಬಗ್ಗೆ ನಿನ್ನ ಅಪಕೀರ್ತಿಯು ಮೂರು ಲೋಕಗಳಲ್ಲೂ ನೆಲೆಸುತ್ತದೆ") ಹೀಗೆಂದು ಅರ್ಜುನನು ಯುಧಿಷ್ಠಿರನನ್ನು ನಿಂದಿಸಿ ಅನಂತರ ತನ್ನನ್ನೂ ಎಂದಿನಂತೆ ನಿಂದಿಸಿಕೊಂಡ.

*ಸಮಯಾ ರಾಜ್ಯಕಾಮೇನ ಹನ್ಯಮಾನೋ ಹ್ಯುಪೇಕ್ಷಿತಃ ।*

*ತಸ್ಮಾದರ್ವಾಕ್‌ಶಿರಾ ರಾಜನ್ ಪ್ರಾಪ್ತೋಽಸ್ಮಿ ನರಕಂ ಪ್ರಭೋ ॥*

*ದ್ರೋ. ಪ. 196-34, 35, 52.*

ರಾಜ್ಯವನ್ನು ಪಡೆಯುವ ಆಸೆಯಿಂದ ನಾನು ಸಾವಿಗೆ ಈಡಾಗುತ್ತಿದ್ದ ಗುರುವನ್ನು ಅಲಕ್ಷ್ಯ ಮಾಡಿದೆ. ಇದರಿಂದ ತಲೆಯನ್ನು ತಗ್ಗಿಸಿ ನರಕದಲ್ಲಿ ಬೀಳುತ್ತಿದ್ದೇನೆ. ಹೀಗೆ ಶೋಕಿಸಿದ. ದ್ರೋಣಾಚಾರ್ಯವಧೆಯನ್ನು ಮಾಡಲು ಅರ್ಜುನ ತಯಾರಾಗಿರಲಿಲ್ಲವಾಗಿ ಒದಗಿದ ಪರಿಸ್ಥಿತಿಯಲ್ಲಿ ಕೃಷ್ಣ ಏನು ಮಾಡಿದನೋ ಅದು ಸರಿಯೇ ಆಗಿತ್ತು. ದ್ರೋಣವಧೆಯಾದ ಆನಂದದಲ್ಲಿ ಭೀಮ, ಧೃಷ್ಟದ್ಯುಮ್ನ ಮುಂತಾದವರು ಕುಣಿಯಲಾರಂಭಿಸಿದರು. ಆದರೆ ಆಗ ಅರ್ಜುನ ಶೋಕಸಾಗರದಲ್ಲಿ ಮುಳುಗಿಹೋಗಿದ್ದ. ಪಾಂಡವರ ಗಮನ ಮುಖ್ಯವಾಗಿ ಅರ್ಜುನನ ಮೇಲೇ ಇತ್ತು ಎಂಬೀ ಅನುಭವ ಈ ರೀತಿಯಾಗಿ ಮತ್ತೊಮ್ಮೆ ಉಂಟಾಯಿತು. ದ್ರೋಣ ವಧೆಯಾದ ಮೇಲೆ ಕರ್ಣ ಕೌರವರ ಸೇನಾಪತಿಯಾದ. ಈ ಪದವಿಯನ್ನು ಎರಡು ದಿನಗಳವರೆಗೆ ಅಲಂಕರಿಸಿದ. ಈ ಎರಡು ದಿನಗಳಲ್ಲಿ ಅವನು ಯುಧಿಷ್ಠಿರ, ನಕುಲ ಮತ್ತು ಸಹದೇವ ಇವರನ್ನು ಸಂಪೂರ್ಣವಾಗಿ ಸೋಲಿಸಿದ. ಯುಧಿಷ್ಠಿರನಿಗೆ ತುಂಬ ಯಾತನೆಯನ್ನುಂಟು ಮಾಡಿದ. ಸೋತ ಎದುರಾಳಿಯನ್ನು ಅಪಮಾನವನ್ನೆಸಗುವ ಮಾತುಗಳಿಂದ ಕೆರಳಿಸುವುದು ಕರ್ಣನಿಗೆ ಇಷ್ಟವಾದ ಚಟವಾಗಿತ್ತು. ಇದರಿಂದ ಯುಧಿಷ್ಠಿರನ ಶಾರೀರಿಕ ಮತ್ತು ಮಾನಸಿಕ ನೆಮ್ಮದಿಯ ಎಲ್ಲೆ ನಷ್ಟವಾಯಿತು. ಏಷ್ಟೆಂದರೆ ಶಿಬಿರಕ್ಕೆ ಹೋಗಿ ಹಾಸಿಗೆಯ ಮೇಲೆ ಉರುಳಿಕೊಳ್ಳುವುದಕ್ಕಿಂತ ಬೇರೆ ಮಾರ್ಗವೇ ಇರಲಿಲ್ಲ.

ರಣರಂಗದಲ್ಲಿ ಯುಧಿಷ್ಠಿರ ಕಾಣಬರಲಿಲ್ಲವಾಗಿ ಅರ್ಜುನನ ಜೀವ ಮೇಲೆ ಕೆಳಗಾಗಲು ಪ್ರಾರಂಭಿಸಿತು. ಯುಧಿಷ್ಠಿರ ಶಿಬಿರಕ್ಕೆ ಹೋದನೆಂದು ತಿಳಿದ ಕೂಡಲೇ ಅವನನ್ನು ಭೇಟಿ ಮಾಡಲು ಅರ್ಜುನ ಕೃಷ್ಣನೊಡನೆ ಅಲ್ಲಿಗೆ ಹೋದ. ಕರ್ಣನ ವಧೆ ಮಾಡದೆ ಅರ್ಜುನ ತನ್ನನ್ನು ನೋಡಲು ಬಂದಿದ್ದಾನೆಂದು ಸಂತಾಪಗೊಂಡಿದ್ದ ಯುಧಿಷ್ಠಿರನಿಗೆ ಯಾವಾಗ ತಿಳಿಯಿತೋ, ಆಗ ಅವನ ಸ್ಥಿರತೆಯ ಎಲ್ಲೆ ನಡುಗಿತು. ಅರ್ಜುನನನ್ನು ಕಠಿಣವಾಗಿ ನಿಂದಿಸಲು ಪ್ರಾರಂಭಿಸಿದ. ದುರಾತ್ಮಾ ಅರ್ಜುನಾ, ರಣಾಂಗಣದಿಂದ ಓಡಿ ಬರುವುದಕ್ಕಿಂತ ನೀನು ಕುಂತಿಯ ಹೊಟ್ಟೆಯಿಂದ ಹುಟ್ಟದೆ ಅಥವಾ ಗರ್ಭಪಾತವಾಗಿ ನಷ್ಟವಾಗಿದ್ದಿದ್ದರೆ ತುಂಬ ಚೆನ್ನಾಗಿರುತ್ತಿತ್ತು!! ಈ ಕಟುಮಾತನ್ನು ಅರ್ಜುನನಿಗೆ ಕೇಳಿ ತನ್ನ ಅಸಾಂಗತ್ಯದ ತುದಿಯನ್ನು ಅವನು ಮುಟ್ಟಿದ. ಯಾರಿಗಾಗಿ ತನ್ನ ಸರ್ವಸ್ವವನ್ನು ವ್ಯಯ ಮಾಡಿದನೋ ಮಾಡುತ್ತಿದ್ದಾನೋ ಅಂಥ ಯುಧಿಷ್ಠಿರನ ಬಾಯಿಂದ ಈ ಮಾತುಗಳನ್ನು ಕೇಳಿದ ಅರ್ಜುನನೂ ಸಂತಾಪದಿಂದ ಈಗ ಎಚ್ಚರ ತಪ್ಪಿದವನಾದ. "ನಿನ್ನ ಗಾಂಡೀವ ಧನುಸ್ಸನ್ನು ಬೇರೆಯವರಿಗೆ ಕೊಟ್ಟುಬಿಡು' ಎಂಬೀ ಯುಧಿಷ್ಠಿರನ ಮಾತಿನಿಂದ ಅರ್ಜುನನ ಮನಸ್ಸಿನ ನೆಮ್ಮದಿಯ ಎಲ್ಲೆ ನಾಶವಾಯಿತು. "ಗಾಂಡೀವ ಧನುಸ್ಸನ್ನು ಹೀಯಾಳಿಸುವವನ ತಲೆಯನ್ನು ಕತ್ತರಿಸುವೆ" ಎಂಬೀ ಪ್ರತಿಜ್ಞೆ ಇದ್ದುದರಿಂದ ಯುಧಿಷ್ಠಿರನ ತಲೆಯನ್ನು ಕಡಿಯಲು ಅವನು ಖಡ್ಗವನ್ನು ಕೈಗೆ ಎತ್ತಿಕೊಂಡ. ಕೇವಲ ಯುದ್ಧದಲ್ಲೇ ಅಲ್ಲ ಮತ್ತೆ ಯುದ್ಧ ಕಾಲದಲ್ಲೂ ಕೃಷ್ಣ ಯಾವಾಗಲೂ ಅರ್ಜುನನ ಜೊತೆ ಇರುತ್ತಿದ್ದ ಎಂಬುದಕ್ಕೆ ಕಾರಣ ಅರ್ಜುನನ ಭಾವನಾವಶಸ್ವಭಾವವೇ ಆಗಿತ್ತು. ಕೃಷ್ಣನ ಸಂಜೀವಕ ಸಾನ್ನಿಧ್ಯ ಆ ಭಾವನೆಗೆ ತಾಯತಿಯಿದ್ದಂತಿತ್ತು. ಕೃಷ್ಣನಲ್ಲಿ ಅಪಾರ ನಿಷ್ಠೆಯುಳ್ಳ ಅರ್ಜುನನ ಕದಡಿದ ಮನಸ್ಸು ಕೃಷ್ಣನ ಸಾನ್ನಿಧ್ಯದಿಂದ ತತ್ಕಾಲದಲ್ಲಿ ವಿಶ್ರಾಂತಿ ಪಡೆಯುತ್ತಿತ್ತು. ಅರ್ಜುನನ ಎಲ್ಲ ಸಮಸ್ಯೆಗಳಿಗೆ ಕೃಷ್ಣನ ಬಳಿ ಉತ್ತರವಿತ್ತು. ಆದರಣೀಯ ಮನುಷ್ಯನನ್ನು ಕೆಟ್ಟ ಮಾತುಗಳಿಂದ ಹೊಡೆಯುವುದು ವಧೆ ಮಾಡಿದಂತೆಯೇ ಆಗುವುದರಿಂದ ಈ ಉಪಾಯದಿಂದ ಪ್ರತಿಜ್ಞಾಪಾಲನೆಯನ್ನು ಮಾಡಬೇಕೆಂದು ಕೃಷ್ಣ ಅರ್ಜುನನಿಗೆ ಸೂಚಿಸಿದ. ಈ ಸೂಚನೆಯನ್ನು ಶಿರಸಾವಹಿಸಿ ಆಡಿ ಅರ್ಜುನ ಯುಧಿಷ್ಠಿರನ ಮೇಲೆ ಎಷ್ಟು ಕಟುಮಾತುಗಳನ್ನು ಆಡಿದನೆಂದರೆ ಅದರಿಂದ ಕೊನೆಗೆ ತನ್ನ ಮೇಲೆಯೇ ಜಿಗುಪ್ಸೆಗೊಂಡು ಪ್ರಾಯಶ್ಚಿತ್ತಕ್ಕಾಗಿ ಆತ್ಮಹತ್ಯೆ ಮಾಡಿಕೊಳ್ಳುವ ನಿರ್ಧಾರಕ್ಕೆ ಬಂದನು. ಅದಕ್ಕಾಗಿ ಥಟ್ಟನೆ ಒರೆಯಿಂದ ತನ್ನ ಕತ್ತಿಯನ್ನು ಹೊರಗೆ ಎಳೆದ. "ಕತ್ತಿಯನ್ನು ಹೊರತೆಗೆಯುವುದಕ್ಕೆ ಈಗ ಏನಾಗಿದೆ'ಯೆಂದು ಕೃಷ್ಣ ವಿಚಾರಿಸಿದಾಗ ಯುಧಿಷ್ಠಿರನ ಬಗ್ಗೆ ಕೆಟ್ಟದಾಗಿ ನಡೆದುಕೊಂಡದ್ದರಿಂದ ಅದರ ಪ್ರಾಯಶ್ಚಿತ್ತಕ್ಕಾಗಿ ತನ್ನ ಆತ್ಮಹತ್ಯೆಯ ನಿರ್ಧಾರವನ್ನು ಅರ್ಜುನ ಕೃಷ್ಣನಿಗೆ ತಿಳಿಸಿದಾಗ, ಈ ನಿರ್ಧಾರದಿಂದ ಹೇಗೆ ಪಾರಾಗಬೇಕೆಂಬುದನ್ನೂ ಕೃಷ್ಣ ತೋರಿಸಿಕೊಟ್ಟ. ಆತ್ಮಸ್ತುತಿ ಮಾಡಿಕೊಳ್ಳುವುದೆಂದರೆ ಆತ್ಮಹತ್ಯೆ ಮಾಡಿಕೊಂಡಂತೆಯೇ ಎಂದು ಹೇಳಿ ಅರ್ಜುನನಿಂದ "ಆತ್ಮಹತ್ಯೆ"ಯನ್ನು ನಡೆಸಿಕೊಟ್ಟ. ಕೊನೆಯಲ್ಲಿ ಅರ್ಜುನ ಮತ್ತು ಯುಧಿಷ್ಠಿರ ಪರಸ್ಪರರು ಒಂದಾಗಿ

ಮುಕ್ತಕಂಠದಿಂದ ಅತ್ತರು. ಕಣ್ಣೀರಿನ ಕೋಡಿಯಿಂದ ಇಬ್ಬರ ಮನಸ್ಸೂ ಶುದ್ಧವಾಯಿತು. ಉತ್ಕಟವಾಗಿ ಪ್ರೀತಿಸುವ ಆಚಾರ ವಿಚಾರಗಳಲ್ಲಿ ಒಂದೇ ಬಗೆಯಾಗಿರುವ ಇಬ್ಬರು ಸಹೋದರರ ಹೃದಯಗಳು ಒಟ್ಟುಗೂಡಿದವು. ಇದು ಕೃಷ್ಣನ ಸಾನ್ನಿಧ್ಯದ ಅಪೂರ್ವ ರಸತಂತ್ರವಾಗಿತ್ತು.

ಯಾವ ಯುದ್ಧದ ಕಡೆ ಎಲ್ಲರ ಮನಸ್ಸು ಕೂಡಿತ್ತೋ ಅದು ಕರ್ಣಾರ್ಜುನರ ಕಟ್ಟಕಡೆಯ ನಿರ್ಣಾಯಕ ಯುದ್ಧವಾಗಿತ್ತು. ಈ ಯುದ್ಧವನ್ನು ನೋಡಲು ದೇವ-ದಾನವ, ಪಶು-ಪಕ್ಷಿ ಮತ್ತು ಸಕಲ ಭೂತಗಳು ನಿಂತಿದ್ದವೆಂದು ಮಹಾಭಾರತಕಾರ ವರ್ಣಿಸಿದ್ದಾನೆ. ಕರ್ಣ ಮತ್ತು ಅರ್ಜುನರ ಸಂಗ್ರಾಮವನ್ನು ನೋಡಲು ಎಲ್ಲರ ಉತ್ಕಂಠ ತುದಿಯನ್ನೇರಿತ್ತು ಎಂಬುದು ಈ ಆಲಂಕಾರಿಕ ವರ್ಣನೆಯ ಅರ್ಥ. ನಕುಲ ಮತ್ತು ಕರ್ಣನ ಮಗ ಮತ್ತು ವೃಷಸೇನ ಇವರಿಬ್ಬರ ಯುದ್ಧ ಕಾರಣವಾಗಿ ಈ ಇಬ್ಬರು ಪ್ರಬಲ ಯೋಧರು ಒಬ್ಬರ ಮೇಲೊಬ್ಬರು ಆಕ್ರಮಣ ಮಾಡಿದರು. ವೃಷಸೇನ ನಕುಲನನ್ನು ಸಂಪೂರ್ಣವಾಗಿ ಸೋಲಿಸಿದ. ತನ್ನ ಜೀವವನ್ನು ಉಳಿಸಿಕೊಳ್ಳಲು ನಕುಲ ಭೀಮನ ರಥದಲ್ಲಿ ಧುಮುಕಿದ. ಆದರೂ ವೃಷಸೇನನ ಹೊಡೆತ ಸಾಗುತ್ತಲೇ ಇದ್ದುದರಿಂದ ತನ್ನ ಸಹಾಯಕ್ಕಾಗಿ ವೃಷಸೇನ ಅರ್ಜುನನನ್ನು ಕೋರಿದ. ಬೇಗನೆ ಎಲ್ಲ ಕೌರವ-ಪಾಂಡವ ವೀರರೂ ಈ ಗದ್ದಲದಲ್ಲಿ ಕೂಡಿಕೊಂಡರು. "ನನ್ನ ಗೈರು ಹಾಜರಿಯಲ್ಲಿ ಅಭಿಮನ್ಯು ಒಬ್ಬನೇ ಸಿಕ್ಕಿ ಬಿದ್ದಾಗ ನೀವು ನಿರ್ದಯವಾಗಿ ವಧೆ ಮಾಡಿದಿರಿ. ಕರ್ಣಾ, ವೃಷಸೇನನ ವಧೆಯನ್ನು ನಾನು ನಿಮ್ಮೆಲ್ಲರ ಎದುರೇ ಮಾಡಲಿದ್ದೇನೆ. ಸಾಮರ್ಥ್ಯವಿದ್ದರೆ ಅವನನ್ನು ಕಾಪಾಡಿಕೊಳ್ಳಿ" ಹೀಗೆ ಕರೆ ನೀಡಿ ಅರ್ಜುನ ವೃಷಸೇನನ ತಲೆಯನ್ನು ಕತ್ತರಿಸಿದ. ಅರ್ಜುನ ವೃಷಸೇನನನ್ನು ಕೊಲ್ಲುವುದಾಗಿ ಹೇಳಿಕೊಂಡಿದ್ದರಿಂದ ಕರ್ಣನ ಸಂತಾಪ ಹತೋಟಿ ಮೀರಿತು. ಅವನು ಅರ್ಜುನನ ಮೇಲೆ ಎರಗಿದ. ಕೊನೆಯ ನಿರ್ಣಾಯಕ ಸಂಗ್ರಾಮ ಈ ರೀತಿ ಪ್ರಾರಂಭವಾಯಿತು.

ಕರ್ಣ ಮತ್ತು ಅರ್ಜುನರ ಯುದ್ಧ ಸಂಬಂಧವಾಗಿ ಬಹುವಾಗಿ ತಪ್ಪು ತಿಳುವಳಿಕೆ ಪ್ರಚಲಿತವಾಗಿರುವುದರಿಂದ ಯುದ್ಧ ಹೇಗಾಯಿತೆಂದು ಸ್ವಲ್ಪ ವಿಸ್ತಾರವಾಗಿ ನೋಡುವುದು ಅಗತ್ಯವಾಗಿದೆ. ಯುದ್ಧ ಪ್ರಾರಂಭವಾಯಿತು. ಆಗ ಕೌರವರು ಮತ್ತು ಅವರ ಕಡೆಯವರು ಕರ್ಣನ ಬಳಿ ಸುತ್ತುವರಿದಿದ್ದರು. ಪಾಂಡವ ವೀರರೂ, ಅರ್ಜುನನ ಬಳಿ ಒಂದುಗೂಡಿದ್ದರು. ಪ್ರಾರಂಭದಲ್ಲಿ ಇಬ್ಬರ ಕೈಚಳಕ ಎಷ್ಟು ಘನವಾಗಿತ್ತೆಂದರೆ, ಕೊನೆಗೆ ಯಾವನು ಗೆಲ್ಲುತ್ತಾನೆಂಬುದನ್ನು ಹೇಳಲು ಆ ಹೊತ್ತಿನಲ್ಲಿ ಕಠಿಣವಾಗಿತ್ತು. ಕರ್ಣಾರ್ಜುನರ ಜೊತೆಗೆ ಅವರ ಸುತ್ತಲೂ ಇದ್ದ ಯೋಧರೂ ಯುದ್ಧದಲ್ಲಿ ಸಹ ಭಾಗಿಗಳಾಗಿದ್ದರಿಂದ ಆ ಯುದ್ಧ ತೀರ ಉಗ್ರಸ್ವರೂಪವನ್ನು ತಾಳಿತು. ಕರ್ಣ ಅನೇಕ ಪಾಂಚಾಲರನ್ನು ತೊಲಗಿಸಿದರೆ, ಅರ್ಜುನ ಅನೇಕ ಕೌರವ ವೀರರನ್ನು ತೊಲಗಿಸಿದ. ಒಂದು ಸಲ ಕರ್ಣನದು ಮೇಲುಗೈ ಆದರೆ ಮತ್ತೊಂದು ಸಲ ಅರ್ಜುನನದು ಮೇಲುಗೈ ಯಾಗುತ್ತಿದ್ದುದರಿಂದ ಗೆಲುವು ತಮ್ಮದೇ ಎಂದು ಎರಡು ಪಕ್ಷಗಳಿಗೂ ಅನಿಸುತ್ತಿತ್ತು. ಇಬ್ಬರ ಅಸ್ತ್ರ ನೈಪುಣ್ಯವೂ ಎಷ್ಟು ವಿಲಕ್ಷಣವಾಗಿತ್ತೆಂದರೆ, ಇಬ್ಬರಲ್ಲಿ ಶ್ರೇಷ್ಠ ಯಾವನು ಎಂಬುದನ್ನು ಹೇಳಲು ತುಂಬ ಹೊತ್ತು ಅಶಕ್ಯವಾಗಿತ್ತು.

ಯುದ್ಧದಲ್ಲಿ ಕೃಷ್ಣನ ಶರೀರವೂ ಕರ್ಣನ ಬಾಣಗಳಿಂದ ಘಾತಿಸಲ್ಪಟ್ಟದ್ದನ್ನು ಕಂಡು ಅರ್ಜುನ ಹೆಚ್ಚು ಉಗ್ರನಾಗಿ ಹೋರಾಡಿದ. ಅರ್ಜುನನ ಶ್ರೇಷ್ಠತರ ಹಸ್ತಲಾಘವ ಬೇಗನೆ ಪ್ರಕಟವಾಗಿ ಯುದ್ಧದ ಎರಡನೆಯ ಪರ್ವ ಪ್ರಾರಂಭವಾಯಿತು. ಕರ್ಣನ ತೀರ ಹತ್ತಿರವಿದ್ದ ಕೌರವ ವೀರರ ಮೇಲೆ ತಪ್ಪಿಲ್ಲದೆ ಒಂದೇ ಸಮನಾಗಿ ಬಾಣಗಳ ಮಳೆಯನ್ನು ಅರ್ಜುನ ಸುರಿಸಿದ್ದರಿಂದ ಅವರೆಲ್ಲರೂ ಕರ್ಣನನ್ನು ಒಬ್ಬಂಟಿಗನನ್ನಾಗಿ ಮಾಡಿ ದೂರ ಓಡಿ ಹೋದರು. ಅರ್ಜುನನ ಬಾಣಗಳು ಎಲ್ಲಿ ಬರಲಾರವೋ ಅಂಥ ಅಪಾಯವಿಲ್ಲದ ಎಡೆಯಲ್ಲಿ ಹೋಗಿ ನಿಂತರು. ಕೌರವರು ಎಷ್ಟು ದೂರ ಓಡಿಹೋಗಿದ್ದೆಂದರೆ, ಕರ್ಣನಿಗೆ ಎಲ್ಲ ದಿಕ್ಕುಗಳೂ ಭಯಂಕರವಾಗಿ ಕಂಡು ಬಂದವು. ಕರ್ಣ ಈಗ ಸಹಾಯವಿಲ್ಲದೆ ಒಬ್ಬಂಟಿಗನಾದ. ಕರ್ಣಾರ್ಜುನರ ಸಂಗ್ರಾಮದಲ್ಲಿ ಈ ಮಹತ್ವದ ಘಟನೆಯನ್ನು ಗಮನಕ್ಕೆ ತಂದುಕೊಳ್ಳುವುದು ಅಗತ್ಯವಾಗಿದೆ. ಮುಂದೆ ಕರ್ಣ ರಥದ ಚಕ್ರ ನೆಲದಲ್ಲಿ ಹೂತು ಹೋದುದರಿಂದ ಆತ ಬೇರೆ ರಥವನ್ನು ಏಕೆ ತೆಗೆದುಕೊಳ್ಳಲಿಲ್ಲ ಮತ್ತು ಬೇರೊಬ್ಬರ ರಥವನ್ನೇರಿ ಏಕೆ ಯುದ್ಧ ಮಾಡಲಾಗಲಿಲ್ಲ ? ಇದರ ಗುಟ್ಟು ಅವನೊಬ್ಬನನ್ನುಳಿದು ಯಾರಿಗೂ ಗೊತ್ತಾಗುವುದು ಸಾಧ್ಯವಿರಲಿಲ್ಲ. ರಥ ನಾಶವಾದಾಗ ಮತ್ತು ಉಪಯೋಗಕ್ಕೆ ಬಾರದಿದ್ದಾಗ ರಥಿಯಾದವನು ಮತ್ತೊಂದು ರಥದಲ್ಲಿ ಹಾರಿಯೋ ಅಥವಾ ಹೊಸರಥವನ್ನು ತೆಗೆದುಕೊಂಡೋ ಯುದ್ಧವನ್ನು ಮುಂದುವರಿಸಿದಂಥ ದಾಖಲೆಗಳು ಮಹಾಭಾರತದಲ್ಲಿ ಮತ್ತೆ ಮತ್ತೆ ಸಿಗುತ್ತದೆ. ಭೀಮ ಸಾತ್ಯಕಿ ಅಥವಾ ಅರ್ಜುನ ಇವರೊಡನೆ ಈ ಹಿಂದೆ ಹೋರಾಡುತ್ತಿದ್ದಾಗ ಸ್ವತಃ ಕರ್ಣನೇ ಈ ಮಾರ್ಗವನ್ನು ಅವಲಂಬಿಸಿದ್ದ. ಆದರೆ ಈ ಹೊತ್ತಿನಲ್ಲಿ ಅರ್ಜುನ ಕೌರವ ವೀರರನ್ನು ದೂರ ಓಡಿಸಿ ಕರ್ಣನಿಗೆ ಒದಗಿಬರಬಹುದಾದ ಸಹಾಯವನ್ನು ತಡೆಹಿಡಿದಿದ್ದ. ಅರ್ಜುನನ ಶ್ರೇಷ್ಠವಾದ ಯುದ್ಧ ಕೌಶಲ್ಯದಿಂದಾಗಿ ಕರ್ಣ ವಿಜಯವೆಂಬ ಕೌರವರ ಸ್ವಪ್ನ ಭಂಗವಾಯಿತು. ಆದರೂ ನಿರಾಶೆಗೊಳ್ಳದೆ ಕರ್ಣ ತನ್ನ ಪ್ರತೀಕಾರ ಕಡಿಮೆಯಾಗದಂತೆ ಮೇಲ್ಮಟ್ಟದ ಕಾರ್ಯವನ್ನೆಸಗಿದ. ಕರ್ಣನ ಒಂದು ತೇಜಸ್ವಿ ಬಾಣ ಅರ್ಜುನನ ಮೇಲೆ ಬರುತ್ತಿರುವಾಗ ಕುದುರೆಗಳು ಮಂಡಿವೂರುವಂತೆ ಮಾಡಿ ರಥವನ್ನು ಕೆಳಗೆ ಒತ್ತಿದ. ಇದರ ಪರಿಣಾಮವಾಗಿ ಅರ್ಜುನನ ಕಿರೀಟ ಮುರಿದು ಕೆಳಗೆ ಬಿತ್ತು. ಅನಂತರ ಅರ್ಜುನ ಕರ್ಣನ ಮೇಲೆ ಬಾಣಗಳ ಪ್ರಚಂಡ ಮಳೆಯನ್ನು ಸುರಿಸಿದ. ಇದರಿಂದ ಕರ್ಣನ ಅಲಂಕಾರ, ಕುಂಡಲ ಮತ್ತು ಕವಚಗಳು ಭಗ್ನವಾದವು.

ಕವಚಹೀನನಾದ ಕರ್ಣನ ಮೇಲೆ ಅರ್ಜುನ ಪ್ರಖರವಾದ ಹಲ್ಲೆಯನ್ನು ಎರಿಸಿದ ಮತ್ತು ಯುದ್ಧದ ಕೊನೆ ಈಗ ದೃಷ್ಟಿಗೆ ಬೀಳುವಂತಾಯಿತು. ಭಯಂಕರ ರಕ್ತಸ್ರಾವದಿಂದ ಕರ್ಣ ವ್ಯಥೆಗೊಂಡು ವಿಹ್ವಲನಾದ. ಶೋಚನೀಯ ಅವಸ್ಥೆಗೆ ಒಳಗಾದ ಕರ್ಣನ ಮೇಲೆ ಬಾಣಗಳ ಮಳೆಯನ್ನು ಸುರಿಸುವ ಅರ್ಜುನ ತನ್ನ ಹೊಡೆತವನ್ನು ಮುಂದುವರಿಸಿದ. ಒಂದು ತೀಕ್ಷ್ಣ ಬಾಣದ ಹೊಡೆತದಿಂದ ಕರ್ಣ ರಥದಲ್ಲಿ ಮೂರ್ಛಿತನಾಗಿ ಬಿದ್ದ. ಈ ಸಮಯದಲ್ಲಿ ಅರ್ಜುನ ಸಹಜವಾಗಿ ಕರ್ಣ ವಧೆಯನ್ನು ಮಾಡುವವನಾಗಿದ್ದ. ಆದರೆ ಅವನು ಹಾಗೆ ಮಾಡಲಿಲ್ಲವೆಂದು ಮಹಾಭಾರತಕಾರ ಹೇಳಿದ್ದಾನೆ.

ನ ಚಾರ್ಜುನಸ್ತಂ ವ್ಯಸನೇ ತದೇಷಿವಾನ್
ನಿಹಂತುಮಾರ್ಯಃ ಪುರುಷವ್ರತೇ ಸ್ಥಿತಃ

(ಅರ್ಜುನ ಸತ್ಪುರುಷರು ಆಚರಿಸುವ ವ್ರತದಲ್ಲಿದ್ದು (ಕ. ಪ. 90-70,) ಸಂಕಟ ಸಮಯದಲ್ಲಿ ಕರ್ಣನನ್ನು ಕೊಲ್ಲಲು ಇಚ್ಛಿಸಲಿಲ್ಲ.)

ಆದರೂ ಮೂರ್ಛೆಗೊಂಡ ಮನುಷ್ಯನ ಮೇಲೆ ತಪ್ಪಿಲ್ಲದೆ ಗುರಿಯಿಡುವುದು ಕಠಿನವಾದುದರಿಂದ ಅರ್ಜುನ ಹಾಗೆ ಮಾಡಲಿಲ್ಲವೆಂದು ಹೇಳುವುದು ಹೆಚ್ಚು ಯುಕ್ತವಾದೀತು. ಸ್ವಲ್ಪ ಹೊತ್ತಿನ ನಂತರ ಕರ್ಣ ಎಚ್ಚರಗೊಂಡು ಮತ್ತೆ ಹೋರಾಡಿದ. ಆದರೆ ಈಗ ಹಿಂದಿನ ಕರ್ಣನಾಗಿ ಇರಲಿಲ್ಲ. ರಕ್ತದಿಂದ ತೊಯ್ದು ಎಣಿಕೆಯಿಲ್ಲದ ಗಾಯಗಳಿಂದ ಕೂಡಿದ, ಕರ್ಣನ ಯುದ್ಧ ಕೌಶಲ್ಯ ಈಗ ನಷ್ಟವಾಗಿತ್ತು. ಅವನ ಅಸ್ತ್ರ ಜ್ಞಾನವೂ ಕಳೆದುಹೋದಂತೆ ಕಾಣಬರುತ್ತಿತ್ತು. ಪರಶುರಾಮನ ಶಾಪಕ್ಕಿಂತ ಅರ್ಜುನನ ಅತುಲ ಪರಾಕ್ರಮದ್ದೇ ಪರಿಣಾಮವೆಂಬುದು ಸ್ಪಷ್ಟವಾಗಿತ್ತು. ಆತ ಈ ದುರ್ದಶೆಯಲ್ಲಿರುತ್ತಿರುವಾಗಲೇ ರಥದ ಎಡಚಕ್ರ ಭೂಮಿಯಲ್ಲಿ ಹೂತುಕೊಂಡಿತು. ಹಲವಾರು ದಿನಗಳ ಭಯಂಕರ ಯುದ್ಧದಿಂದ ರಕ್ತ ಸ್ನಾನವಾಗಿದ್ದ ಭೂಮಿಯಲ್ಲಿ ಚಕ್ರ ಹೂತುಕೊಂಡಿದ್ದರಲ್ಲಿ ಆಶ್ಚರ್ಯವಿರಲಿಲ್ಲ. "ಓರ್ವ ಬ್ರಾಹ್ಮಣ ಕರ್ಣನಿಗೆ ಕೊಟ್ಟ ಶಾಪದಿಂದ ಭೂಮಿ ರಥದ ಚಕ್ರವನ್ನು ನುಂಗಿತು" ಎಂಬುದು ಈ ಸ್ವಾಭಾವಿಕ ಘಟನೆಯ ಆಲಂಕಾರಿಕ ಸ್ಪಷ್ಟೀಕರಣವಾಗಿದೆ. ಹಿಂದೆ ತಿಳಿಸಿದಂತೆ ಬೇರೆ ರಥವನ್ನು ತೆಗೆದುಕೊಳ್ಳುವುದಾಗಲಿ ಅಥವಾ ಬೇರೆಯವರ ರಥದಲ್ಲಿ ಕೂತು ಯುದ್ಧ ಮಾಡುವುದಾಗಲಿ ಈ ಎರಡು ದಾರಿಗಳು ಮೊದಲೇ ತಡೆ ಹೊಂದಿದ್ದವು. ಹೂತುಕೊಂಡಿದ್ದ ಚಕ್ರವನ್ನು ಹೊರತೆಗೆಯುವ ಪ್ರಯತ್ನ ಮಾಡುವುದನ್ನುಳಿದು ಕರ್ಣನಿಗೆ ಬೇರೆ ದಾರಿಯೇ ಇರಲಿಲ್ಲ. "ಭೂಮಿಯಲ್ಲಿ ಹೂತುಕೊಂಡ ಚಕ್ರವನ್ನು ಹೊರಗೆ ತೆಗೆಯುವವರೆಗೆ ಯುದ್ಧವನ್ನು ನಿಲ್ಲಿಸು" ಎಂದು ಅರ್ಜುನನನ್ನು ಬೇಡಿದ ಮತ್ತು ಅರ್ಜುನನ ಭಾವನೆಗೆ ಆಹ್ವಾನವನ್ನು ನೀಡುವ ಪ್ರಯತ್ನವನ್ನು ಮಾಡಿದ. ಕೃಷ್ಣ ಹತ್ತಿರವಿಲ್ಲದಿದ್ದರೆ ಭಾವನಾ ಪ್ರಧಾನವಾದ ಅರ್ಜುನ ಕರ್ಣನ ಈ ಬೇಡಿಕೆಯನ್ನು ಬೇಗನೇ ಮಾನ್ಯ ಮಾಡುತ್ತಿದ್ದ. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಆದರೆ ಅರ್ಜುನನಿಗೆ ಮಾತನಾಡಲು ಅವಕಾಶವನ್ನು ಕೊಡದೆ ಕೃಷ್ಣ ಕರ್ಣನ ಬೇಡಿಕೆಯನ್ನು ತಳ್ಳಿಹಾಕಿ, ಕರ್ಣನ ದುಷ್ಕೃತ್ಯಗಳನ್ನು ಉಪಹಾಸ ಪೂರ್ವಕವಾಗಿ ಉಚ್ಚರಿಸಿದನು. ಹೀಗೆ ಮಾಡುವಲ್ಲಿ ಕರ್ಣ ಉತ್ತರವನ್ನು ಕೊಡದಿರುವಂಥ, ಹಾಗೆಯೇ ಅರ್ಜುನ ಭಾವನಾ ವಶನಾಗದಿರುವಂಥ ಪರಿಸ್ಥಿತಿ ಬಗ್ಗೆ ಎಚ್ಚರಿಕೆ ವಹಿಸುವುದು ಕೃಷ್ಣನ ಉದ್ದೇಶವಾಗಿತ್ತು. ಕೃಷ್ಣ ಕರ್ಣನಿಗೆ ಹೇಳಿದ ಮಾತುಗಳನ್ನು ಕೇಳಿ ಅರ್ಜುನ ಹೆಚ್ಚು ಆವೇಶದಿಂದ ಹೋರಾಡಿದನೆಂದು ಮಹಾಭಾರತಕಾರ ತಿಳಿಸಿದ್ದಾನೆ. ಕೃಷ್ಣನ ಸಾರಥ್ಯ, ಅವನ ಸಾನ್ನಿಧ್ಯ ಅರ್ಜುನನಿಗೆ ಸಂಜೀವಕವಾಗಿ ಪರಿಣಮಿಸಿ ಕರ್ಣನ ವಧೆಗೆ ನಿರ್ಣಾಯಕವಾದುವೆಂದು ಇದರಿಂದ ಸ್ಪಷ್ಟವಾಗುತ್ತದೆ. ಕೃಷ್ಣನ ಮುಚ್ಚು ಮರೆಯಿಲ್ಲದ ಮಾತನ್ನು ಕೇಳಿ ಕರ್ಣ

ಸವ್ವಿಲ್ಲದೆ ಯುದ್ಧವನ್ನು ಆರಂಭಿಸಿದ. ಒಂದು ಬಾಣದಿಂದ ಅರ್ಜುನನನ್ನು ಮೂರ್ಛೆಗೊಳಿಸಿ, ಮತ್ತೆ ಚಕ್ರವನ್ನು ಮೇಲೆತ್ತಲು ಪ್ರಯತ್ನಿಸಿದ. ಆ ಪ್ರಯತ್ನದಲ್ಲಿದ್ದಾಗಲೇ ಎಚ್ಚರಗೊಂಡ ಅರ್ಜುನ ಕರ್ಣನ ರುಂಡವನ್ನು ಮುಂಡದಿಂದ ಬೇರ್ಪಡಿಸಿದ. ಅರ್ಜುನ ಸ್ವಲ್ಪ ಹೊತ್ತು ತಡೆದಿದ್ದರೂ ಕರ್ಣ ವಧೆ ತಪ್ಪುತ್ತಿರಲಿಲ್ಲ. ಕರ್ಣನ ಅವಸ್ಥೆ ಕೊನೆ ಕೊನೆಗೆ ಎಷ್ಟು ವಿಹ್ವಲವಾಗಿತ್ತೆಂದರೆ ಅರ್ಜುನನಿಂದ ಕರ್ಣ ವಧೆ ಒಂದೆರಡು ಗಳಿಗೆಗಳ ಪ್ರಶ್ನೆಯಾಗಿತ್ತು. ಆದರೂ ಯಾವನು ಸಾಯುವವರೆಗೆ ಮಾನವತೆಯ ತತ್ತ್ವವನ್ನು ಕಾಲಡಿಯಲ್ಲಿ ತುಳಿದನೋ ಅಂಥವನಿಗೆ ಸಂಕಟದಲ್ಲಿ ಸಿಕ್ಕಿಕೊಂಡಾಗ ಮತ್ತೊಬ್ಬರಿಂದ ಮಾನವತೆಯನ್ನು ಅಪೇಕ್ಷಿಸುವ ಹಕ್ಕಿಲ್ಲವೆಂಬ ಈ ಮಹತ್ತ್ವದ ತತ್ತ್ವವನ್ನು ಸ್ಥಾಪಿಸುವುದಕ್ಕಾಗಿಯೇ ಕೃಷ್ಣ ಕರ್ಣನ ಈ ರೀತಿಯ ವಧೆಯನ್ನು ಮಾಡಿಸಿದನೆಂಬುದು ಸ್ಪಷ್ಟವಾಗಿದೆ. ಆದ್ದರಿಂದ ಅರ್ಜುನ ಕರ್ಣನನ್ನು ಅಧರ್ಮದಿಂದ ಕೊಲ್ಲಲಿಲ್ಲವೇ ಎಂಬ ಪ್ರಶ್ನೆಯೇ ಅಸಮಂಜಸವೆಂದಾಗುತ್ತದೆ.

ಕರ್ಣನ ವಧೆಯಿಂದ ಮಹಾಭಾರತ ಯುದ್ಧ ಮುಗಿಯಲಿಲ್ಲವಾದರೂ ಅದರಿಂದ ಆ ಯುದ್ಧಕ್ಕೆ ತೀರ್ಪು ಬಂದಾಯಿತೆಂದು ಹೇಳಲಡ್ಡಿಯಿಲ್ಲ. ಈ ಯುದ್ಧದಲ್ಲಿ ಕೌರವ-ಪಾಂಡವ ವೀರರು ಮಹಾಪರಾಕ್ರಮವನ್ನು ಪ್ರದರ್ಶಿಸಿದ್ದು ನಿಜವಾದರೂ, ಅರ್ಜುನನ ಪರಾಕ್ರಮವಂತೂ ಅಸಾಮಾನ್ಯವಾಗಿತ್ತು. ಆದರೂ ಸ್ವಜನರೊಡನೆ ಯುದ್ಧ ಮಾಡುವ ಪ್ರಸಂಗ ಬಂದುದರಿಂದ ಅರ್ಜುನನ ಭಾವನಾವಶತೆ ಕಾಲಕಾಲಕ್ಕೆ ಹೇಗೆ ಉರಿಯಂತೆ ಉಕ್ಕಿ ಏಳುತ್ತಿತ್ತು ಎಂಬುದು ಈ ವಿವೇಚನೆಯಿಂದ ಸ್ಪಷ್ಟವಾದೀತು. ಸ್ವತಃ ಕೈಗೆ ಶಸ್ತ್ರವನ್ನು ತೆಗೆದುಕೊಳ್ಳುವ ಬದಲು ಕೃಷ್ಣ ಅರ್ಜುನನ ಸಾರಥ್ಯವನ್ನು ವಹಿಸಿಕೊಂಡ. ಇದಕ್ಕೆ ಕಾರಣ ಸರಿಯಾಗಿ ಇದೇ ಆಗಿತ್ತು. ಬೇರೆ ಬೇರೆ ಪ್ರಸಂಗಗಳಲ್ಲಿ ಬೇರೆ ಬೇರೆ ಉಪಾಯಗಳನ್ನು ಯೋಜಿಸಿ, ಅರ್ಜುನನ ಭಾವನಾವಶತೆ ಪಾಂಡವರ ಹಿತಕ್ಕೆ ಅಂಕೆಯಲ್ಲಿಡಲಾಗದ ತೊಂದರೆಯಾಗದಿರುವಂತೆ ಕೃಷ್ಣ ಅಲೌಕಿಕ ಚಾತುರ್ಯವನ್ನು ಪ್ರಕಟಿಸಿದ. ಪಾಂಡವರ ವಿಜಯ ಕೊನೆಗೆ ನಿಶ್ಚಯವಾದುದು ಇದರಿಂದಲೇ.

ಮರಾಠಿ ಮೂಲ : **ಮನೋಹರ ರಂ. ಶಿರವಾಡಕರ್**

*'ಹಸ್ತಿನಾಪುರ್' ಗ್ರಂಥದ 'ಕೃಷ್ಣಾ ಚೇ ಸಾರಥ್ಯ' ಎಂಬ ಭಾಗ.*



# ಹೊನ್ನವಳ್ಳಿ ಪಟ್ಟದ ಗುರುಪಾದಸ್ವಾಮಿಗಳಿಗೆ ಸಂಬಂಧಿಸಿದ ಕೆಲವು ಹಸ್ತಪ್ರತಿ ಪುಷ್ಪಿಕೆಗಳು (೧೪೮೯-೧೬೩೮)

- ಎಸ್. ಶಿವಣ್ಣ

1. 'ಶಾ. ಶ. ೧೭೪೧ನೆಯ ಪ್ರವರ್ತಮಾನಕ್ಕೆ ಸಲ್ಲುವ ಪ್ರಮಾಥಿನಾಮ ಸಂವತ್ಸರ ಮಾರ್ಗಶಿರ ಬಹುಳ ದಶಮಿ ಸ್ಥಿರವಾರ ಉದಯ ಏಕವಿಂಶತಿ ಘಟಗಿ ಮುಕ್ತಮಾಗಿ ಶ್ರೀ ಬಸವೇಶ್ವರ ದೇವರ ಪುರಾಣವನ್ನು (ಷಡಕ್ಷರದೇವ ವಿರಚಿತ...) ರಾಮಗಿರಿಗೆ ಕರ್ತರಾದಂಥ ಹೊನ್ನವಳ್ಳಿ ಪಟ್ಟದ ಗುರುಪಾದಸ್ವಾಮಿಯವರ ಚರಣಾರವಿಂದಕ್ಕೆ ಭೃಂಗಾಯಮಾನರಾದಂಥ ಬಾಣಾವಾರದ ಸ್ಥಳದ ಬೆಂಡಿಕೆಜಿ ಶಾನಭೋಗರಾದಂಥ ಶಂಕರಯ್ಯನವರ ಪುತ್ರರಾದಂಥ ಹೆಬ್ಬಾರುವಯ್ಯನು ನಾಗಪುರಿ ಶಂಕರೇಶ್ವರ ಸ್ವಾಮಿಯವರ ಕರುಣಾಕಟಾಕ್ಷದಿಂದ ಬರೆದಿದ್ದಾನೆ.
2. 'ಸ್ವಭಾನು ಸಂವತ್ಸರದ ಪುಷ್ಯ ಶುಲು ಹೊನ್ನವಳ್ಳಿ ಪಟ್ಟದ ಗುರುಪಾದ ಸ್ವಾಮಿಯವರ ಪಾದಕ್ಕೆ ಹೊಳೆಮಲ್ಲಾಪುರದ ಚೆನ್ನವೀರಸ್ವಾಮಿಯವರ... ಶಿಷ್ಯರಾದಂಥ ಮಲ್ಲೇನಹಳ್ಳಿ ಮಠದ ಬಸವಲಿಂಗಪ್ಪ ದೇವರ ಮಗ ವೀರಪ್ಪನು ಬರೆದು ವಪ್ಪಿಸಿದ ಅಕ್ಷರಾಂಕನ ಗದ್ಯ' ಸಂಪೂರ್ಣ.
3. 'ಶಾ. ಶ. ೧೭೪೯ನೆ ವರ್ತಮಾನಕ್ಕೆ ಸಂಬಂಧಿಸಿದ ಸರ್ವಜಿತು ನಾಮ ಸಂ. ಕಾರ್ತೀಕ ಶುದ್ಧ ಪ್ರತಿಪತ್ ಭಾನುವಾರದಲ್ಲಿ ಕರಣಹಸಿಗೆ ಮಿಶ್ರಾರ್ಪಣ ಸಹ ಪ್ರಾರಂಭ ಮಾಡಿದ್ದು. ಈ ಸಂವತ್ಸರ ಮಾರ್ಗಶಿರ ಶು. ೫ವರೆಗೆ ಮುಕ್ತಾಯವಾಯಿತು. ಶ್ರೀ ರಂಭಾಪುರಿ ವೀರಸಿಂಹಾಸನದ ಸೂತ್ರಾನುವರ್ತಿಗಳಾದ ಹೊನ್ನವಳ್ಳಿ ಪಟ್ಟದ ಗುರುಪಾದಪ್ಪನವರು ಸ್ವಯಂ ಹಿತಾರ್ಥವಾಗೂ ಪರಹಿತಾರ್ಥವಾಗೂ ತಮ್ಮ ಸ್ವಯಂ ಹಸ್ತದಿಂದ ಲಿಖಿತ ಮಾಡಿದ ಕರಣಹಸಿಗೆ ಮಿಶ್ರಾರ್ಪಣ ಸಹ' ಸಂಪೂರ್ಣ.
4. 'ಸರ್ವಜಿತು ನಾಮ ಸಂವತ್ಸರದ ಪುಷ್ಯ ಬಹುಳ ೨ ಗುರುವಾರ ದಿವಸದಲ್ಲಿ... ಹೊನ್ನವಳ್ಳಿ ಪಟ್ಟದ ಸ್ವಾಮಿಗಳವರ ಪಾದಕ್ಕೆ ಅತ್ಯಂತ ಶಿಷ್ಯನಾದ ಕೊಲ್ಲೂರು ಮಠದ ಹುತ್ತಿನಯ್ಯನವರ ಕೊಮಾರ ಸಿದ್ಧಲಿಂಗನು ಬರೆದು ಒಪ್ಪಿಸಿದ 'ಶಿವಪೂಜಾವಿಧಿ' ಸಮಾಪ್ತ.
5. 'ವಿರೋಧಿ ಸಂ. ದ ಭಾದ್ರಪದ ಬಹುಳ ೧೪ ಮಂದವಾಸರ ಉತ್ತರಾನಕ್ಷತ್ರ ದಿವಸ ೩ ಗಳಿಗೆ... ಶ್ರೀಮದ್ರಂಭಾಪುರೀ ವೀರಸಿಂಹಾಸನದ ಸೂತ್ರಾನುವರ್ತಿಗಳಾದ ಹೊನ್ನವಳ್ಳಿ ಮಠಕ್ಕೆ ಕಾರಣಕರ್ತರಾದ ಪಟ್ಟದ ಗುರುಪಾದಸ್ವಾಮಿಗಳ ಪಾದಪದ್ಮಕ್ಕೆ ಅವರ ಶಿಷ್ಯನಾದ ಕೊಲ್ಲೂರು ಶ್ರೀಮಠದ ಹುತ್ತಿನಯ್ಯನ ಮಗ, ಸಿದ್ದಲಿಂಗಯ್ಯನು ಬರದು ಒಪ್ಪಿಸಿದ 'ವಾತುಲಾಗಮ' ಪರಿಸಮಾಪ್ತ.
6. 'ಶ್ರೀಗುರು ಹೊನ್ನವಳ್ಳಿಯ ಪಟ್ಟದ ಗುರುಪಾದಸ್ವಾಮಿಯವರ ದಿವ್ಯಚರಣಾರವಿಂದ ಗಳಿಗೆ ಕೌಳಿ ಒರಿಯೂರ ಪಟ್ಟಣಶೆಟ್ಟಿ ಅರೆಮಲ್ಲಪ್ಪನ ಮೊಂಮಗ ಪರೂಶೆಟ್ಟಿಯು...

ಕಂಠವಿಡಿದು ಬರದು ಗುರುಪಾದಸ್ವಾಮಿಯವರಿಗೆ ಓದಿಕೊಳುವುದಕ್ಕೆ'... (ಕೃತಿ ಷಡ್ವಕ್ತ್ರಸ್ತೋತ್ರ)

7. 'ವಿಳಂಬಿ ಸಂ/ದ ಆಷಾಢ ಶು. ೫. ಚಂದ್ರವಾರದಲ್ಲು ಹೊನ್ನವಳ್ಳಿ ಕರಿಸಿದ್ಧೇಶ್ವರ ಸ್ವಾಮಿಯವರ ಕರಕಮಲ ಸಂಜಾತರಾದ ಪಟ್ಟದ ಗುರುಪಾದ ಸ್ವಾಮಿಯವರು ಬರೆಯುವುದಕ್ಕೆ ಪ್ರಾರಂಭಿಸಲ್ಪಟ್ಟ 'ಶತಕತ್ರಯ'ದ ಪುಸ್ತಕ.

8. 'ವಿಳಂಬಿ ಸಂವತ್ಸರದ ವೈಶಾಖ ಶುದ್ಧ ಪಂಚಮಿ ಗುರುವಾರ ಘಳಿಗೆ ಹತ್ತರಲ್ಲಿ ಹೊನ್ನವಳ್ಳಿ ಕರಿಸಿದ್ಧೇಶ್ವರ ಸ್ವಾಮಿಯವರ ಕರಕಮಲ ಸಂಜಾತರಾದ ಪಟ್ಟದ ಗುರುಪಾದಸ್ವಾಮಿಯವರು ತಮ್ಮ ಸ್ವಂತಕ್ಕೆ ತಾವೇ ಬರೆಯುವುದಕ್ಕೆ ಪ್ರಾರಂಭಿಸಿದ ಗುರು ರಗಳೆ (ತ್ರಿಭುವನತಾತಕೃತ) ವ್ಯಾಖ್ಯಾನ ಮುಂತಾಗಿ ಜೇಷ್ಠ ಬ. ೧೨ ಮಂಗಳವಾರ ೨೮ ಗಳಿಗೆಯಲ್ಲಿ ಮುಗಿಯಿತ್ತು.

***ಮೇಲಿನ ಓಲೆ ಹಸ್ತಪ್ರತಿಗಳ ವಿವರಗಳನ್ನು ಹೊನ್ನವಳ್ಳಿ ಕರಿಸಿದ್ದೇಶ್ವರ ಮಠ (ತಿಪಟೂರು ತಾ॥)ದ ಸಂಗ್ರಹದಿಂದ ಪಡೆಯಲಾಗಿದೆ. ಹಸ್ತಪ್ರತಿಗಳನ್ನು ಉಪಯೋಗಿಸಿ ಕೊಳ್ಳಲು ಅನುಮತಿಯಿತ್ತ ಪೂಜ್ಯ ಶ್ರೀ ಶ್ರೀಗಳವರಿಗೆ ವಂದನೆಗಳು.***

---

**ಸೂಚಿ : (ವ್ಯಕ್ತಿಗಳು)**

ಅರೆಮಲ್ಲಪ್ಪ (6), ಕರಿಸಿದ್ಧೇಶ್ವರಸ್ವಾಮಿ (7, 8) ಗುರುಪಾದಸ್ವಾಮಿ (1, 2, 3, 5, 6, 7, 8), ಚೆನ್ನವೀರಸ್ವಾಮಿ (2), ಪರೂಶೆಟ್ಟಿ (6), ಬಸವಲಿಂಗಪ್ಪದೇವ (2), ವೀರಪ್ಪ (2), ಶಂಕರಯ್ಯ (1), ಸಿದ್ಧಲಿಂಗಯ್ಯ (4, 5), ಹುಪ್ಪಿನಯ್ಯ (4, 5), ಹೆಬ್ಬಾರುವಯ್ಯ (1).

**ಕೃತಿಗಳು**

(1), ಅಕ್ಷರಾಂಕನಗದ್ಯ (2), ಕರಣಹಸಿಗೆ (3), ಗುರು ರಗಳೆ (ತ್ರಿಭುವನ ತಾತ) ವ್ಯಾಖ್ಯಾನ (8), ಬಸವೇಶ್ವರ ದೇವರಪುರಾಣ (ಷಡಕ್ಷರಿ) (1), ಮಿಶ್ರಾರ್ಪಣ (3), ವಾತುಲಾಗಮ (5), ಶತಕತ್ರಯ (7), ಶಿವಪೂಜಾವಿಧಿ (4), ಷಡ್ವಕ್ತ್ರ ಸ್ತೋತ್ರ (6).

**(ಸ್ಥಳಗಳು)**

ಕೊಲ್ಲೂರು (4, 5), ಕೌಳಿ ಹಿರಿಯೂರ (6), ನಾಗಪುರಿ (1), ಬಾಣಾವಾರ (1), ಬೆಂಡಿಕೆಜೆ (1), ಮಲ್ಲೇನಹಳ್ಳಿ (2), ರಂಭಾಪುರಿ (3, 5), ರಾಮಗಿರಿ (1), ಹೊನ್ನವಳ್ಳಿ (1, 2, 3, 4, 5, 6, 7, 8), ಹೊಳೆಮಲ್ಲಾಪುರ (2).

**(ಸಂವತ್ಸರ)**

ಪ್ರಮಾಥಿ (1819), ವಿರೋಧಿ (1829) (5), ವಿಳಂಬಿ (1838) (7, 8) ಸರ್ವಜಿತು (1827) (3, 4) ಸ್ವಭಾನು (1823) (2).

<u>ವಾರಗಳು</u>

ಗುರುವಾರ (4, 8), ಚಂದ್ರವಾರ (7), ಭಾನುವಾರ (3), ಮಂದವಾಸರ (5), ಸ್ಥಿರವಾರ (1).

<u>(ಇತರೆ)</u>

ಕರ್ತ (1), ಕಂಠ (6), ಕಾರಣಕರ್ತ (5), ಪಟ್ಟಣಶೆಟ್ಟಿ (6), ಪಟ್ಟದ (1, 2, 3, 4, 5, 6, 7, 8) ವರ್ತಮಾನ (3), ವೀರಸಿಂಹಾಸನ (3, 5) ಶಂಕರೇಶ್ವರ ಸ್ವಾಮಿ (1), ಶಾನಭೋಗ (1), ಸ್ವಯಹಸ್ತ (3), ಸ್ವಂತಕ್ಕೆ (8), ಸೂತ್ರಾನುವರ್ತಿ (3, 5).

  

# ಶಿವಮೊಗ್ಗ ಜಿಲ್ಲೆ : ದಂತ ಕಥೆಗಳು : ವಿಶೇಷ ಪರಂಪರೆ.

**ಡಾ|| ಕೆಳದಿ ವೆಂಕಟೇಶ್**

ಭಾರತ ದಂತಕಥೆಗಳ ತವರು. ಇತಿಹಾಸದ ಮೂಲ ಸಾಧನೆಗೆ ದಂತಕಥೆಗಳು ಅಗತ್ಯವಿರುವ ಮರದ ಬೇರು ಎಂದೆನ್ನಬಹುದು. ಐತಿಹಾಸಿಕವಾಗಿ ದಂತಕಥೆಗಳು ಪರಿಗಣಿತವಾಗದಿದ್ದರೂ ಹಲವು ಪುರಾತತ್ವ ಹಾಗೂ ಜಾನಪದ ಸಂಗತಿಗಳು ದಂತಕಥೆಗಳನ್ನು ತಿರಸ್ಕರಿಸಲಾಗದಷ್ಟು ಅಂಶಗಳಿಂದ ಕೂಡಿದ್ದು ಐತಿಹಾಸಿಕವಾಗಿ ತಳ್ಳಿಹಾಕಲಾಗದಂತೆ ಕೂಡಿಕೊಂಡಿವೆ ಎಂದು ಡಾ. ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.[1] ಈ ಹಿನ್ನೆಲೆಯಲ್ಲಿ ದೆಹಲಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಡಾ. ಸತ್ಯನಾಥ್‌ರವರು ನರಬಲಿ ಕುರಿತು ಕೃತಿಯೊಂದನ್ನು ರಚಿಸಿರುವುದು ದಂತಕಥೆಗಳಿಗೆ ಪಾರಂಪರಿಕ ಮೌಲ್ಯವನ್ನು ಒದಗಿಸಿರುವುದನ್ನು ಪ್ರತಿನಿಧಿಸುತ್ತದೆ.[2]

ದಂತಕಥೆಗಳನ್ನು ಈ ಕೆಳಗಿನಂತೆ ವಿಭಜಿಸಬಹುದಾಗಿದೆ.

(1) **ಆಧ್ಯಾತ್ಮಿಕ ಮತ್ತು ಪೌರಾಣಿಕ ದಂತಕಥೆಗಳು**

(2) **ನೈಸರ್ಗಿಕ ಅಲಭ್ಯ ಘಟನೆಗಳು**

(3) **ಐತಿಹಾಸಿಕ ಪೂರಕ ದಂತಕಥೆಗಳು**

(4) **ಜಾನಪದ ಸಂಗತಿಗಳು**

ಪ್ರಕೃತ ಶಿವಮೊಗ್ಗ ಜಿಲ್ಲೆಗೆ ಸೀಮಿತವಾಗಿರುವಂತೆ ಪ್ರಚಲಿತವಿರುವ ದಂತಕಥೆಗಳನ್ನು ಈ ಪ್ರಬಂಧದಲ್ಲಿ ಸೀಮಿತಗೊಳಿಸಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

## (1) ಆಧ್ಯಾತ್ಮಿಕ ಪೌರಾಣಿಕ ದಂತಕಥೆಗಳು :

ರಾಮಾಯಣ ಕಾಲದ ದಂಡಕಾರಣ್ಯಕ್ಕೆ ಸೇರಿದ್ದ ಶಿವಮೊಗ್ಗ ಜಿಲ್ಲೆಯು ಆಧ್ಯಾತ್ಮಿಕ, ಪೌರಾಣಿಕವಾಗಿ ದೇವ ಋಷಿಗಳ ತಾಣಗಳನ್ನು ಹೊಂದಿದೆ. ಪವಿತ್ರ ನದಿಗಳಾದ ತುಂಗಾ, ವರದಾ, ಕುಮುದ್ವತಿ, ದಂಡಾವತಿ, ಶರಾವತಿ, ತುಂಗಭದ್ರಾ ಹಾಗೂ ಇತರೇ ಚಿಕ್ಕ ನದಿಗಳು ಗುಡ್ಡ ಬೆಟ್ಟಗಳು ಹಾಗೂ ಜಲಪಾತಗಳು ಸ್ವಾಭಾವಿಕವಾಗಿಯೇ ಕೆಳದಿ ಲಿಂಗಣ್ಣ ಕವಿಯ ನೃಪವಿಜಯದಲ್ಲಿ ಕವಿ ಸಂಪ್ರದಾಯದಂತೆ ಸಮುದ್ರ ವರ್ಣನೆ, ಮೇರು ಪರ್ವತ ವರ್ಣನೆ, ಜಂಬೂದ್ವೀಪ ವರ್ಣನೆಯನ್ನು ಹೇಳುತ್ತಾ

**ವ : ಇಂತೆಸೆವ ಭರತ ಖಂಡದ ತೆಂಕಣಾಶಾ ಭಾದೊಳೆ**

**ನಾನಾ ವಿಧ ವರ್ಣಾಶ್ರಮ ಸುಖಸಂವತ್ಸಮಾಜಕಾಸ್ಪದಮೆನಿಸಿ**

---

[1] ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ - ಎಂ. ಚಿದಾನಂದಮೂರ್ತಿ

[2] ಕೃತಿ ನನಗೆ ಸಿಗಬೇಕಾಗಿದೆ.

ಮೆರೆವ ಕನ್ಯಾಖಂಡ ಪ್ರದೇಶದೊಳೆ
ಅಗಣಿತ ತೀರ್ಥ ನದೀನದ
ನಗಪುಣ್ಯಾರಣ್ಯ ವಿಷಯ ಸುಕ್ಷೇತ್ರ ಸಮೂ
ಹಗಳಿಗೆಡೆಯೆನಿಸಿ ಮಿಗೆ ಝಗ
ಝಗಿಪುದು ಸಹ್ಯಾಚಲಂ ಮಹಾಸುಖಮೂಲಂ
ಆ ಸಹ್ಯಾದ್ರಿಯೊಳೊಪ್ಪುವ
ದೇಶಂಗಳೊಳಧಿಕಮೆನಿಸಿ ನಿರುಪಮ ಲಕ್ಷ್ಮೀ
ಕೋಶಂ ವಿಲಸತ್ಪುಣ್ಯನಿ
ವೇಶಂ ಕರ್ಣಾಟದೇಶಮುದೆ ರಂಜಿಸುಗುಂ
ಜಲಜನಮರ್ದಂ ಬೆಳ್ಳಿಯ
ಕೊಳವಿಗಳೊಳೆ ತುಂಬಿ ಗಂಟನೊಂದಿಸಿ ಗರುಡಂ
ತಿಳಿಯದೊಲವನೀತೆಯೊಳ್ನೆಲೆ
ಗೊಳಿಸಿದನೆನೆ ಮೆರೆದುದಮಳ ಪುಂಡ್ರೇಕ್ಷುವನಂ[1]

ಇಂತಹ ಸಹ್ಯಾದ್ರಿಯ ಸುಂದರ ವರ್ಣನೆಯನ್ನು ಮಹಾಕವಿ ಕಾಳಿದಾಸನಂತೆ ವರ್ಣಿಸಿ ಕಾವ್ಯಾಲಂಕಾರಗಳಲ್ಲಿ ಕಡೆದಿದ್ದಾನೆ.

**ಆಧ್ಯಾತ್ಮಿಕ ದಂತಕಥೆಗಳು :**

ಆಧ್ಯಾತ್ಮಿಕವಾಗಿ ಶೈವ, ವೀರಶೈವ, ವೈಷ್ಣವ (ಬೌದ್ಧ) ಜೈನ ಧರ್ಮದ ದಂತಕಥೆಗಳು ಪ್ರಚಲಿತವಿದೆ. ಡಾ. ಅ. ಸುಂದರರ ಅಭಿಪ್ರಾಯದಂತೆ 'ಶಿವಮೊಗ್ಗ' ಎಂಬ ಹೆಸರು ಬರಲು ತುಂಗಾನದಿಯ ದಂಡೆಯ ಮೇಲೆ ದೂರ್ವಾಸ ಮುನಿಗಳ ಆಶ್ರಮವಿತ್ತಂತೆ. ಪುರಾಣದಲ್ಲಿ ವರ್ಣಿಸಿರುವಂತೆ ಶೀಘ್ರಕೋಪಿಗಳಾದ ದೂರ್ವಾಸರಿಗೆ ತಮ್ಮ ಕೋಪವನ್ನು ಹತೋಟಿಯಲ್ಲಿ ಇಗಿಸಿಕೊಳ್ಳಲು ಪ್ರತಿದಿನವೂ ಆ ಪ್ರದೇಶದಲ್ಲಿ ಬೆಳೆಯುತ್ತಿದ್ದ ದೂರ್ವೆ ಹುಲ್ಲಿನಿಂದ ರಸವನ್ನು ತೆಗೆದು ಮಡಕೆಯಲ್ಲಿರಿಸಿ ತಮ್ಮ ಅನುಷ್ಠಾನ ಪೂರ್ತಿಯಾದ ನಂತರ ಅದನ್ನು ಸೇವಿಸುತ್ತಿದ್ದರಂತೆ. ಒಂದು ಬಾರಿ ದೂರ್ವೆ ರಸವನ್ನು ಶೇಖರಿಸಿ ನಿತ್ಯಾನುಷ್ಠಾನಕ್ಕೆ ಹೋದ ಸಮಯದಲ್ಲಿ ಆ ಸ್ಥಳದಲ್ಲಿ ದನ ಕಾಯುತ್ತಿದ್ದ ಗೋಪಾಲಕರಿಗೆ ಈ ಮಡಕೆಯು ಕಣ್ಣಿಗೆ ಬಿತ್ತು. ಕುತೂಹಲದಿಂದ ಅದರಲ್ಲಿದ್ದ ರಸವನ್ನು ಕುಡಿದರು. ತುಂಬಾ ರುಚಿ ಹಾಗೂ ಸಿಹಿಯಾಗಿದ್ದು ಬಾಯಿ ಚಪ್ಪರಿಸಿದರು. ಆ ಮಡಕೆಗೆ ಆಥರಾ ಭಾಷೆಯಲ್ಲಿ 'ಮೊಗೆ' ಎಂದು ಕರೆಯುವ ವಾಡಿಕೆ. ಅದು ಅಷ್ಟು ಸಿಹಿಯಾಗಿರುವುದಕ್ಕೆ ಆ ಮೊಗೆಯಲ್ಲಿ ಏನೋ ದಿವ್ಯಶಕ್ತಿ ಇರಬೇಕೆಂದು ಆ ಮುಗ್ಧರು ಬಗೆದರು. ಅದರಿಂದ

[1] ಕಸ್ಯೆಪಿ 1 ಆಶ್ವಾಸ

'ಸಿಮೊಗೆ' ಎಂದೆನಿಸಿಕೊಂಡಿತು. ಮುಂದೆ ಅದೇ ಹೆಸರು ಪ್ರಚಲಿತಗೊಂಡು ಪಟ್ಟಣ ಬೆಳೆದು 'ಶೀಮೊಗೆ'ಯಾಗಿ ಇಂದಿನ ಶಿವಮೊಗ್ಗವಾಯಿತು.

ದೂರ್ವಾಸರಂತೆಯೇ ಶಿವಮೊಗ್ಗ ಜಿಲ್ಲೆ ಇನ್ನೂ ಕೆಲವು ಪುರಾಣೋಕ್ತ ಮುನಿಗಳ ತಾಣಗಳಾಗಿದ್ದವು. ಬನವಾಸಿ (ತೀರ್ಥಹಳ್ಳಿ ತಾ.) ಭಾರದ್ವಾಜ ಮುನಿಗಳ ಆಶ್ರಮ. ಇಲ್ಲಿಯೇ ನಾಗಮುನಿಗಳು ತಪಸ್ಸು ಮಾಡಿದರು. ಭದ್ರಾವತಿ (ಬೆಂಕಿಪುರ) ಮಂಕಿ ಋಷಿಗಳ ತಪೋಭೂಮಿ. ಚಂದ್ರಗುತ್ತಿ (ಸೊರಬ ತಾ.) ಜಮದಗ್ನಿ, ಪರಶುರಾಮರ ರೇಣುಕಾ ದೇವಾಲಯ, ಆಶ್ರಮ ಗೌಜ (ಸಾಗರ ತಾ.) ಗೌತಮ, ಕುಂದ, ಮಾಂಡವ್ಯ (ಮಂಡಗದ್ದೆ) ತೀರ್ಥಹಳ್ಳಿ ತಾಲ್ಲೂಕು ಇವು ಕ್ರಮವಾಗಿ ಮುಚಕುಂದ, ಮಾಂಡವ್ಯ ಮುನಿಗಳ ಸ್ಥಳಗಳು ಹಂಸಋಷಿ - ಹಂಸಮುನಿ ಆಶ್ರಮ. ಕುಪ್ಪೆ (ಸೊರಬ ತಾ.) ವರದಹಳ್ಳಿ (ಸಾಗರ ತಾ.) ಅಗಸ್ತ್ಯ, ವ್ಯಾಸರ ಆಶ್ರಮಗಳು. ಕುಂತಳ ನಗರ (ಚಂದ್ರಹಾಸನ ಕುಬಟೂರು - ಸೊರಬ ತಾ.) ಶ್ರೀರಾಮನ ಕಾಲದ ಅಂಬುತೀರ್ಥ ಅಗಸ್ತ್ಯ - ವಾಲ್ಮೀಕಿ ಹೇಳಿದ ಪಾಂಡವರ ಕಾಮ್ಯಕವನ ಕಾಲೇದುರ್ಗ ಮುಂತಾದ ಪ್ರದೇಶಗಳು ಪೌರಾಣಿಕ, ದಂತಕಥೆಗಳಿಂದ ಆವೃತಗೊಂಡಿವೆ. ಸುರಬ ನಂದಭದ್ರ, ಸುಮನ, ಸುಶೀಲ ಎಂಬ ಐದು ಕಾಮಧೇನುಗಳು ಈ ಜಿಲ್ಲೆಯಲ್ಲಿ ಪ್ರಚಲಿತವಾಗಿವೆ.

**ಧೃವಭೇದ ದಂತಕಥೆಗಳು :**

ಈ ಜಿಲ್ಲೆಯಲ್ಲಿ ಧೃವಭೇದ ದಂತಕಥೆಗಳು ಅನೇಕವು ಪ್ರಚಲಿತವಿದೆ. ಜಮದಗ್ನಿ ರೇಣುಕೆಯ ವಾಸಸ್ಥಾನವಾಗಿದ್ದು ಚಂದ್ರಗುತ್ತಿಯ ಪ್ರದೇಶಗಳ ದಟ್ಟ ಅರಣ್ಯದಲ್ಲಿ ಸುರಭಿ ಎಂಬ ಹಸು ರಂಗನಾಥ ದೇವರ ಮೇಲೆ ನಿತ್ಯ ನಂದ, ಭದ್ರ, ಸುಶೀಲ, ಸುಮನ ಎಂಬ ದೇವಲೋಕದ ಹಸುಗಳು ಬಂದು ಹಾಲು ಕರೆದು ಹೋಗುತ್ತಿದ್ದುದರಿಂದ ಸುರಭಿಪುರ ಎಂಬ ಹೆಸರನ್ನು ಪಡೆದಿತ್ತೆಂದು ಹೇಳಲಾಗಿದೆ. ಕಾಲಕ್ರಮೇಣ ಇದು ಸೊರಬ ಎನ್ನಿಸಿಕೊಂಡಿದೆ.

**ಕೆಳದಿ ಶ್ರೀರಾಮೇಶ್ವರ ಲಿಂಗ :**

ಪ್ರಸಿದ್ಧ ಐತಿಹಾಸಿಕ ಕಾವ್ಯ ಕೆಳದಿ ನೃಪವಿಜಯದಲ್ಲಿ ಕವಿ ಲಿಂಗಣ್ಣನು

*ಶ್ರೀಮತ್ಕೆಳದಿಯ ಪೊಳಪೊಳೆ*
*ಹೇಮಾವತೀರಮಣನೆಸೆವ ಲಿಂಗಾಕೃತಿಯಂ*
*ರಾಮೇಶ್ವರಾಖ್ಯೆಯಂ ತಳೆ*
*ದಾ ಮಹಿಯೊಳೆ ಪುತ್ತದಲ್ಲಿ ನೆಲೆಸಿರುತಿರ್ದಂ*

---

1 ಶಿವಮೊಗ್ಗ ಜಿಲ್ಲಾದರ್ಶನ - ಡಾ|| ಅ. ಸುಮದರ

2 ಇಲ್ಲಿ ಜನಮೇಜಯರಾಯನು ಸರ್ಪಯಾಗ ಮಾಡಿದನೆಂದೂ ಈತನ ಕಾಲದ್ದೆಂದು ಹೇಳಲಾದ ತಾಮ್ರ ಶಾಸನವೊಂದು ಕೆಳದಿ ವಸ್ತುಸಂಗ್ರಹಾಲಯದಲ್ಲಿದೆ.

3 ಇಲ್ಲಿರುವ ವ್ಯಾಸರ ಗುಹೆ ಹಾಗೂ ಅಗಸ್ತ್ಯ ತೀರ್ಥಗಳಲ್ಲಿ ಮಹಾಯೋಗಿ ಶ್ರೀ ಶ್ರೀಧರ ಸ್ವಾಮಿಗಳು ತಪೋನಿರತರಾಗಿದ್ದರು.

ಪ : ಅದೆಂತೆಂದೊಡಿಂತು ವಿರಾಜಿಸುಮಿರ್ಪ ಭದ್ರಪಾಗ್ರಜಮಪ್ಪ ಚೌಡಪನ ಸ್ವಪ್ನದೊಳೆ ಶ್ರೀಮತ್ಪುರಮೇಶ್ವರಂ ಮನಂಗೊಳಿಪ್ಪ ವೃದ್ಧ ಜಂಗಮಸ್ವರೂಪದಿಂ ಪ್ರಸನ್ನನಾಗಿ ಕೆಳದಿಪುರ ವರದೆಡೆಯೊಳ ಸೀಗೆವಳ್ಳಿಯೆಂಬ ತಾಣದೊಳೆ ತರುಗುಲ್ಮಲತಾ ಪುತಾನಾವೃತಮಾದ ಸೀಗೆಲೆಳೆಯ ಮಧ್ಯದೊಳೆ ರಾಮೇಶ್ವರನೆಂಬ ಮಹಾದಿವ್ಯಲಿಂಗಂ ನೆಲೆಸಿರ್ಪುದಾನೆಂದೊಡೆ ನಿನ್ನ ಮನೆಯೊಳೆಸವ ಕಪಿಳೆವಣ್ಣದ ಪಸು ಕರುವೆ ರಸಾತಾಣಮನ್ನೈದಿ ಸಿಂವಾಪುತ್ತದ ಮೇಗಡೆಯೊಳೆ ಪ್ರತಿದಿನಂ ಪಾಲ್ಗರೆದು ಬರುತಿರ್ಪುದೆಸರು ಹಾಲಿಂಗಮಂ ಜನರ ಕಣ್ಮನಕ್ಕೆ ಗೋಚರಮಪ್ಪಂತು ನಿಮಿರ್ಚಿಸಿ ತದ್ರಾಮೇಶ್ವರಲಿಂಗಮಂ ಸದ್ಭಕ್ತಿಯಿಂದ ರ್ಚಿಸಲೆ ವಿನಗಖಂಡಪೃಥ್ವೀಪತಿತ್ವಂ ಕೈಸಾರ್ಪುದೆಂದುಸಿರ್ದಾ ಜಂಗಮಮೂರ್ತಿಯಂತರ್ಧಾನ ಮನ್ನೈದಲೆಳಾರ್ತು ಪರಮಹರ್ಷಿತನಾಗಿ ನಿಜಮಾತೃವಪ್ಪ ಬಸವಾಂಬಿಕೆಯೊಳಿಂತು ಕಂಡ ಸ್ವಪ್ನವನುಸಿರಲದಂ ಕೇಳ್ದಿಂತು ಸ್ವಪ್ನದೊಳೆ ನಿರೂಪಿಸಿ ಪೋದ ಜಂಗಮಮೂರ್ತಿ ಸಾಕ್ಷಾತ್ಪರಮೇಶ್ವರನೆಂಬುದೆನಿಶ್ಚಯವಾ ರಾಮೇಶ್ವರಲಿಂಗಕ್ಕೆ ಭಕ್ತಿಯೊಳೆ ನಡೆಕೊಂಡೊಡೆ ಮುಂದೆ ನಿನಗೆ ಮಹಾಭಿವೃದ್ಧಿಯುಂಟದರ್ಕೆ ಸಂದೆಗಮಿಲ್ಲೆಂದುಸಿರಲಂತಾ ಮಾತಂ ಕೇಳ್ದು ಮರುದಿವಸಂ ಬೇಹಚರರಂ ಕಾಯ್ದಿಕ್ಕಿ ನಿಜಮಂದಿರದೊಳಿರ್ಪ ಕಪಿಲೆವಣ್ಣದ ಪಸುವಾ ಪುತ್ತದೆಡೆಗೈದಿ ಸುರಭಿಯಂ ಕರೆದು ಬರ್ಪುದಂ ಗೋರಕ್ಷಕರ ಮುಖದಿಂದರಿದಲ್ಲಿಗೈದಿಯಾ ಪುತ್ತವನಗುಳಿಸಿ ನೋಡಲದರೊಳೆ ಕಂಗೊಳಿಸುತಿರ್ಪ ಮಂಗಲಮೂರ್ತಿಯಪ್ಪ ಶ್ರೀರಾಮೇಶ್ವರಲಿಂಗಮಿರಲ್ಕಂಡು ವಿಸ್ಮಿತನಾಗಿ ಕರಸರೋಜಮಂ ಮುಗಿದು ಭಯಭರಿತ ಭಕ್ತಿಯಿಂ ಪೊಡಮಟ್ಟುನುತಿಸಿ ಬಳಿಕಾ ತರುಗುಲ್ಮಲತಾನ ಸೀಕಕುಂಜಗಳಂ ಸವರ್ದಾ ತಾಣಮಂ ಮನೋಹರಮಪ್ಪಂತು ಸೈತುಗೊಳಿಸಿ ತತ್ಕಾಲೋಚಿತಮಾದ ತೃಣಕುಟಿಯಂ ನಿರ್ಮಿಸಿ ನೀತ್ಯಮಾ ಲಿಂಗಕ್ಕಂ ಧೂಪದೀಪನೈವೇದ್ಯಂ ನಡೆವಂತು ಕಟ್ಟಲೆಯುಂ ರಚಿಸಿ ಪ್ರತಿದಿನಂಗಳೊಳೆ ತಾಂಪಳ್ಳಿವಯಲಿಂದೆಳ್ತಂದಾ ಲಿಂಗವುಂ ಭಜಿಸಿ ಪೋಪ ನಿಯಮವುಂ ಮಾಡಿಕೊಂಡಿಂತು ವರ್ತಿಸುತ್ತುಮಿರ್ದು

* *

---

1 ಕೆಳದಿ ಇತಿಹಾಸದ ಮೂಲವನ್ನು ಕುರಿತು ಕೆಳದಿ ಬಸವರಾಜ ಕೃತ ಶಿವತತ್ವರತ್ನಾಕರದಲ್ಲಿ

**ರಣೇ ವನೇ ಜಲೇ ಶೈಲೇ**
**ಸುಪ್ತಂ ಮತ್ತಂ ಚ ದೇಹಿನಮ್**
**ಪುರಾಕೃತಾನಿ ಪುಣ್ಯಾನಿ**
**ರಕ್ಷಂತಿ ನವಾಯಿಮ್ಮೃಕ್ಷ**

(ಶಿ. ತ. ರ ಕಲ್ಲೋಲ 5 ತರಂಗ 2 ಶ್ಲೋಕ 39 ಈ ರೀತಿ ಪ್ರಸ್ತಾಪವಿದೆ.)

2 ಸೋರ್ಸಸ್ ಆಫ್ ವಿಜಯನಗರ ಹಿಸ್ಟ್ರಿಯಲ್ಲಿ ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್‌ರವರು 'ರಾಯವಾಚಕಮು' ಕೃತಿಯನ್ನು ಆಧರಿಸಿ ಕೆಳದಿ ಚೌಡಪ್ಪನಾಯಕನು ಸೇನಾಧಿಕಾರಿ ಸುಕ್ಕುಲನಾಯಕನೆಂಬುದಾಗಿ ಉಲ್ಲೇಖಿಸಿದೆ. (ರೆಫರೆನ್ಸ್ : ನಾಯಕಾಸ್ ಆಫ್ ಇಕ್ಕೇರಿ - ಡಾ|| ಸ್ವಾಮಿನಾಥನ್ ಪುಟ 17 )

**ಐತಿಹಾಸಿಕ ಸಂಗತಿಗಳನ್ನು ಕುರಿತ ದಂತಕಥೆಗಳು :**

ಕೆಳದಿ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿರುವ ನಾಗರಮುರಿ ಕುರಿತು ಇರುವ ಐತಿಹ್ಯಗಳು (ಕೆನೃವಿ (ಗದ್ಯಾನುವಾದ) ಪುಟ-31) ಕೆಳದಿ ಅರಸರಿಗೆ ಸಿಗುವ ಸಂದರ್ಭದಲ್ಲಿ ನರಬಲಿಯಾದ ಕುರಿತು ಇರುವ ದಂತಕಥೆಗಳು. ಕೆಳದಿಗೆ ಕೆಳದಿ ಎಂದು ಹೆಸರು ಬರಲು ಕಾರಣವಾದ ದಂತಕಥೆ. ಶಿಕಾರಿಪುರ, ಶಿರಾಳಕೊಪ್ಪ, ತಡಗಣಿ ಈ ಮೊದಲಾದ ಸ್ಥಳಗಳಿಗೆ ಇರುವ ಸ್ಥಳಪುರಾಣವನ್ನು ಪ್ರತಿನಿಧಿಸುವ ದಂತಕಥೆಗಳು. ಎಡವ ಮುರಾರಿ - ಬಲಮುರಾರಿ ಕುರಿತ ದಂತಕಥೆಗಳು. ಕೆಳದಿ ರಾಜಧಾನಿ ಇಕ್ಕೇರಿ, ಬಿದನೂರು (ನಗರ) ಕೌಲೇದುರ್ಗ ಈ ಕುರಿತು ಇರುವ ದಂತಕಥೆಗಳು ಇರ್ಕಥೆಗಳಲ್ಲಿ ಕೆರತೇಡಲ್ಲ ಟ್ಟಕಾರಣ ಇಕ್ಕೇರಿ ಎಂದು ಹೆಸರಿಟ್ಟು ಕುರಿತು ದಂತಕಥೆಗಳು ಈ ಮೊದಲಾದವು ಐತಿಹಾಸಿಕವಾಗಿ ಪ್ರಮುಖವಾಗಿರುವ ದಂತಕಥೆಗಳಾಗಿವೆ. ಕೆಳದಿ ಕೆರೆಯ ಹತ್ತಿರವಿರುವ 'ವಡ್ಡರ ತಿಮ್ಮಿ' ಎಂಬ ಸ್ತ್ರೀ ವಿಗ್ರಹವು ದಂತಕಥೆಯ ಹಿನ್ನೆಲೆಯಲ್ಲಿ ಗಮನಿಸುವಂತಹುದಾಗಿದೆ. ಕೆಳದಿ ನೃಪವಿಜಯದಲ್ಲಿ ಅಲ್ಲದೆ ಮೆಕೆಂಜಿ ಸಂಗ್ರಹದಲ್ಲಿ ನಮಗೆ ಕೆಳದಿ ಶಿವಮೊಗ್ಗ ಜಿಲ್ಲೆಯ, ಐತಿಹಾಸಿಕ, ಧಾರ್ಮಿಕ ವ್ಯವಸ್ಥೆಯನ್ನು ಪ್ರತಿನಿಧಿಸುವಂತಹ ಸಾಕಷ್ಟು ದಂತಕಥೆಗಳನ್ನು ಗುರುತಿಸಬಹುದಾಗಿದೆ. (ಕವಿಲೆ ಎಂಬ ಹಸುವಿನಿಂದ ಕೌಲೇದುರ್ಗ ಎಂಬ ಹೆಸರು ಬಂದಿತು)

ಕೆಳದಿ 'ಶಿವಪ್ಪನಾಯಕನು ಕೋಟೆ ಕಟ್ಟಿದ ಹಾಗೆ' ಎಂಬ ಗಾದೆಯನ್ನಾಧರಿಸಿದ ದಂತಕಥೆ, ಕೊಲ್ಲೂರು ಮೂಕಾಂಬಿಕೆಗೆ ಕೆಳದಿ ಶಿವಪ್ಪನಾಯಕನು ಬಾಳೆಯಹಣ್ಣು ಕಳುಹಿಸುತ್ತಿದ್ದ ಕುರಿತು ಪ್ರಚಲಿತವಿರುವ ದಂತಕಥೆ ಮೊದಲಾದವುಗಳನ್ನು ಕೆಳದಿ ನೃಪವಿಜಯ, ಶಿವತತ್ವರತ್ನಾಕರ ಮೊದಲಾದ ಸಮಕಾಲೀನ ಕೃತಿಗಳಲ್ಲಿ ಚರ್ಚಿಸಲಾಗಿದೆ.

ಚೆನ್ನಮಾಜಿಯ ಕಾಲದಲ್ಲಿ ಗಂಟುಬಿಚ್ಚಿದ ಕತೆಯೊಂದು ಪ್ರಚಲಿತವಿದೆ. ತನ್ನ ಮನೆಯ ಜಗಲಿಯಲ್ಲಿದ್ದ ಗಂಟನ್ನು ಬಿಚ್ಚಬಾರದೆಂಬ ಕಟ್ಟುಪಾಡಿದ್ದರೂ ಲೆಕ್ಕಿಸದೆ ಬಿಚ್ಚಿದಾಗ ಅದರಲ್ಲಿ ಎರಡು ಚಮ್ಮಾವುಗೆಗಳಿದ್ದುದು ಗೋಚರವಾಯಿತು. ಸಮಗಾರ ಹರಳಯ್ಯನು ಇಂತಹ ಒಂದು ಜೊತೆ ಚಮ್ಮಾವುಗೆಯನ್ನು ಬಸವಣ್ಣನವರಿಗೆ ಮಾಡಿಕೊಟ್ಟಿದ್ದನಂತೆ ಈ ಕತೆಯು ಅಂದಿನ ಮೂಢನಂಬಿಕೆಗೆ ಒಂದು ಉದಾಹರಣೆಯಾಗಿದೆ.

ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ಅವನು ಬಾರಕೂರನ್ನು ಹಿಡಿದಾಗ ಅಲ್ಲಿಯ ಜನ ಬಸದಿಗಳಿಗೆ ಹಾನಿಯಾಯಿತು. 'ಇಕ್ಕೇರಿ ಮಕ್ಕಳನ್ನು ಹಿಡಿದುಕೊಂಡು ಹೋಗೋ' ಎಂದು ಜನರು ರೊಚ್ಚಿಗೆದ್ದು ಕೂಗಿದರಂತೆ.[1] ಆದರೆ ಇಲ್ಲಿ ಸರ್ವಧರ್ಮ ಸಮನ್ವಯತೆಯ ಕೆಳದಿ ಅರಸರ ಮನೋಭಾವದ ಹಿನ್ನೆಲೆಯಲ್ಲಿ ಸತ್ಯಾಸತ್ಯತೆಯನ್ನು ಗಮನಿಸಬೇಕಾಗುತ್ತದೆ.

ಹೀಗೆ ಕೆಳದಿ ಅರಸರ ಇತಿಹಾಸ ಕುರಿತಂತೆ ಸಾಕಷ್ಟು ದಂತಕಥೆಗಳು ಪ್ರಚಲಿತವಿದೆ. ಇದೇ ವೇಳೆಯಲ್ಲಿ ಶಿಕಾರಿಪುರದ ಹುಚ್ಚರಾಯಸ್ವಾಮಿ ದೇವಾಲಯದಲ್ಲಿರುವ

---

[1] ತೆಂಕನಾಡು ಪುಟ 31-35

ದೋಂಡವಾಘನ ಕುರಿತ ಕತ್ತಿ ಈ ಕುರಿತ ದಂತಕಥೆ ಇಕ್ಕದ ಮಾದಯ್ಯ ಮತ್ತು ಅವನ ಹೆಂಡತಿ ಕೊಡದ ಮಾರವ್ವೆ ಶರಣ ಶರಣೆಯರ ತಾಣಾ ಶಿಕಾರಿಪುರದ ಶಿವನ ಪಾದವೆಂಬ ದಂತಕಥೆ ಗಮನೀಯವಾಗಿದೆ. ಹದಿನಾಲ್ಕನೆ ಶತಮಾನದಲ್ಲಿ ಮಲ್ಲಯ್ಯನೆಂಬ ಶರಣರ ದಂತ್ರಕಥೆ ಶರಣರ ದಂತಕಥೆಯೊಂದು ವೀರಶೈವ ಶರಣಧರ್ಮ ಪ್ರಸಾರವನ್ನು ಮೆಕ್ಕಾದಲ್ಲಿ ಕೈಗೊಂಡಿದ್ದಾನೆಂದು ಉಕ್ತವಾಗಿದೆ.[2] ಉಡುಪಿಯ ಅಕ್ಕಮಹಾದೇವಿಯ ಪ್ರದೇಶವೂ ಇದರ ಸಮೀಪವೇ ಇದೆ. ಅಂತೆಯೇ ಜಿನಧರ್ಮದ ಕುರಿತು ನಮಗೆ ಸಾಕಷ್ಟು ದಂತಕಥೆಗಳು ಹುಂಚ (ಹೊಸನಗರ ತಾ.) ಮಾರುತಿಪುರ (ಹೊಸನಗರ ತಾ.) ಈಳಿ (ಸಾಗರ ತಾ.) ತುಂಬ್ರಿ (ಸಾಗರ ತಾ.) ಬ್ಯಾಕೋಡ್ (ಸಾಗರ ತಾ.) ಮೊದಲಾದ ಕಡೆ ಪ್ರಚಲಿತವಿದೆ. ಈಳಿ ಜಿನ ದೇವಾಲಯುದ ಬಾಗಿಲು ಹಾಕಿದರೆ ಕೆಳದಿಗೆ ಕೇಳುತ್ತಿತ್ತು ಎಂಬ ಮಾತಿಗೆ ಪೂರಕವಾಗಿ ಇಂದು ಅಲ್ಲಿ ಅವಶೇಷವೂ ಇಲ್ಲದಂತಾಗಿದೆ. ಅಲ್ಲಿಯ ಭಗ್ನ ಶಿಲ್ಪಗಳನ್ನು ಕೆಳದಿ ವಸ್ತುಸಂಗ್ರಹಾಲಯದಲ್ಲಿ ಸಂರಕ್ಷಿಸಲಾಗಿದೆ.[3]

ಅಲ್ಲಮಪ್ರಭು ಇಷ್ಟಲಿಂಗವನ್ನು ಅನಿಮಿಷಯ್ಯನಿಂದ ಪಡೆದದ್ದು ಶಿಕಾರಿಪುರದ ಮಾಲಿಗೊಂಡನಕೊಪ್ಪವೆಂದು ಹೇಳಲಾಗಿದೆ.[4] ಅದೇ ತಾಲ್ಲೂಕಿನ ಶಿವಪುರದಲ್ಲಿ ಅಲ್ಲಮಪ್ರಭು ಅನುಷ್ಠಾನವನ್ನು ಕೈಗೊಂಡಿದ್ದನು.[5] ಮಾರೀಚನನ್ನು ಶ್ರೀರಾಮನು ವಧಿಸಿದ್ದು ಮೃಗವಧೆಯಲ್ಲಿ (ತೀರ್ಥಹಳ್ಳಿ ತಾ.) ಪರಶುರಾಮನು ನೀರಿನಲ್ಲಿ ಕೊಡಲಿ ತೊಳೆದದ್ದು ಅಂಬುತೀರ್ಥದಲ್ಲಿ - ಈ ಮೊದಲಾದ ದಂತಕಥೆಗಳು ವಿಶೇಷವಾಗಿ ಜಿಲ್ಲೆಯಲ್ಲಿ ಗಮನ ಸೆಳೆಯುತ್ತದೆ. ಹಾಗೆಯೇ ಮಧ್ವಾಚಾರ್ಯರ ಶಿಷ್ಯರಾದ ಅಕ್ಷೋಭ್ಯತೀರ್ಥರು ಹಾಗೂ ರಾಘವೇಂದ್ರಸ್ವಾಮಿಗಳ ಬೃಂದಾವನ ಬಾಳಗಾರು ಮಠವೆಂದು ಪ್ರತೀತಿಯಿದೆ.

**ಜಾನಪದ ಸಂಗತಿಗಳು :**

'ಸಾವಿರ ತಲೆ ಹೋದರು ದೀವರ ತಲೆ ಹೋಗ' ಕೆಳದಿ ವೆಂಕಟಾದ್ರಿ ಜೋಯಿಸರು ಅಮಾವಾಸ್ಯೆಯನ್ನು ಹುಣ್ಣಿಮೆ ಮಾಡಿದ ಕಥೆಯೇ[1] ಮೊದಲಾಗಿ ಜಿಲ್ಲೆಯಲ್ಲಿ ಜನಪದ ದಂತಕಥೆಗಳು ಬಹಳವೇ ಪ್ರಚಲಿತವಿದೆ. ಕನ್ನೇಶ್ವರ ರಾಮನನ್ನು ಕುರಿತ ದಂತಕಥೆ (ಇವನ ಊರು ಸೊರಬ ತಾ.ನ ಗಡಿಯಲ್ಲಿತ್ತು ಎಂಬ ಮಾತಿದೆ. ಹೊಸನಗರದ ಆಸುಪಾಸಿನಲ್ಲಿ ಇವನ ಬಗ್ಗೆ ಬಹಳ ಕತೆಗಳು ಪ್ರಚಲಿತವಿದೆ) ಜುಂಜನ ಕುರಿತು (ಸೊರಬ ತಾಲ್ಲೂಕು-ಯಲ್ಲಿ) ಇರುವ ಕತೆ, ಅಂಡಿಗೆ (ಸೊರಬ ತಾ.) ಭೂತಪ್ಪನ ಕುರಿತ ದಂತಕಥೆ ಮೊದಲಾದವು ಜಾನಪದೀಯವಾಗಿ ಗಮನ ಸೆಳೆಯುತ್ತವೆ. ಕಂಚಿನ ಬಾಗಿಲ ಕಥೆ ಮೊದಲಾದವು ಜನಪ್ರಿಯವಾದದ್ದು. ತನ್ನ ತವರಿನ ಮನೆ ಬಾಗಿಲು ಹಾಕಿದ ಶಬ್ದವನ್ನು ಪ್ರತಿದಿನ ಕೇಳಿ ಮಲಗುತ್ತಿದ್ದವಳಿಗೆ ಒಂದು ದಿನ ಕಂಚಿನ ಬಾಗಿಲ ಶಬ್ದ ಕೇಳದಿದ್ದಾಗ ಏಕೆ ಎಂದು ತಿಳಿಯಲು ಹೋದಾಗ ಊರ ದಾರಿಯಲ್ಲಿ ಅವಳನ್ನು

---

[2] ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್ - ಶಿವಮೊಗ್ಗ ಜಿಲ್ಲೆ ಪುಟ 633.

[3] ಜಿನದತ್ತರಾಯನ ಹಸ್ತಪ್ರತಿ ಓಲೆಗರಿ ಕೃತಿಯೊಂದು ಕೆಳದಿ ವಸ್ತುಸಂಗ್ರಹಾಲಯದಲ್ಲಿ ರಕ್ಷಿಸಲಾಗಿದೆ.

[4] ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್ - ಶಿವಮೊಗ್ಗ ಜಿಲ್ಲೆ ಪುಟ 666.

[5] ಅದೇ ಪುಟ 633.

[1] ಈಗಲೂ ಸರ್ಕಾರದಿಂದ ತೋಗದಿಯನ್ನು ಜೋಯಿಸರು ಪಡೆಯುತ್ತಿದ್ದಾರೆ.

ಪ್ರಾಣ ಹಿಡಿದು ಸಾಯುತ್ತಾಳೆ. ಅದಕ್ಕೆ ಮಡಿಬ್ಯಾಣ ಎಂದೇ ಹೆಸರು ಇರುವುದನ್ನು ಗಮನಿಸಬಹುದು. ಅವಳ ಮನೆಯಲ್ಲಿ ಆ ದಿನ ತಂದೆ ಸತ್ತಿದ್ದರಿಂದ ಬಾಗಿಲು ಹಾಕಿರಲಿಲ್ಲವೆಂಬುದು ವಾಸ್ತವ ಸಂಗತಿ. ನಿಧಿ ಇರುವುದರಿಂದ ಇಬ್ಬರು ದೂತರನ್ನು ನಿಲ್ಲಿಸಿದ್ದರೆಂಬ ಕಥೆ ಇದೆ. (ಯಲ್ಸಿ) ಆದರೆ ಅಲ್ಲಿರುವುದು ಯಕ್ಷ. ಯಕ್ಷರ ಕೆಲಸ ಕುಬೇರ ಅನುಚರರು ಹಾಗಾಗಿ ಕಥೆಗೆ ಪೂರಕವಾಗಿ ಈ ಶಿಲ್ಪ ನಮಗೆ ಗಮನ ಸೆಳೆಯುತ್ತದೆ. ಅಂತೆಯೇ ಏಳೂರು ಚೆನ್ನಮ್ಮಾಜಿ ಮೊದಲಾದ ವೀರ ಗೀತೆಗಳು ಸಾಕಷ್ಟು ಈ ಪರಿಸರದಲ್ಲಿ ಪ್ರಚಲಿತವಿದೆ. ಮಾನ್ಯ ಶ್ರೀ ಗದ್ದಗಿ ಮಠದವರು ಕೆಲವನ್ನು ಸಂಗ್ರಹಿಸಿರುವುದನ್ನು ಉದಾಹರಿಸಬಹುದಾಗಿದೆ.

## ಉಪಸಂಹಾರ :

ಹೀಗೆ ಶಿವಮೊಗ್ಗ ಜಿಲ್ಲೆ ಸರ್ವಧರ್ಮದ ಹಿನ್ನೆಲೆಯಲ್ಲಿ ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ ಮಹತ್ವವನ್ನುಳ್ಳ ದಂತಕಥೆಗಳು ಸಾಕಷ್ಟನ್ನು ಒಳಗೊಂಡಿದೆ. ಇವು ಪ್ರಾಚೀನವಾಗಿದ್ದು ವಾಸ್ತವಿಕ ಘಟನೆಯ ಆಧಾರದ ಮೇಲೆ ಕಾಲ್ಪನಿಕ ಅಂಶವನ್ನು ಒಳಗೊಂಡು ಬೆಳೆದು ನಿಂತಿರುವ ಪರಂಪರಾಗತವಾಗಿ ಜಾನಪದೀಯರು ನಂಬಿ ಉಳಿಸಿಕೊಂಡು ಬಂದಿರುವಂತಹುದಾಗಿದೆ. ಇವು ಕೆಲವೊಮ್ಮೆ ಚಾರಿತ್ರಿಕ ಘಟನೆಗಳ ಪಳಯುಳಿಕೆಯಾಗಿಯೂ ಕೆಲಸ ಮಾಡುವುದಿದೆ. ಆದರೆ ಇವು ಚಾರಿತ್ರಿಕ ಅಂಶವನ್ನು ಒಳಗೊಂಡಿದ್ದರೂ ಕಾಲ್ಪನಿಕ ಅಂಶಗಳಿಂದ ಆಕರ್ಷಕವಾಗಿರುವುದರಿಂದ ಐತಿಹಾಸಿಕ ಮಹತ್ವವನ್ನು ಅಷ್ಟಾಗಿ ಪಡೆಯುತ್ತಿಲ್ಲ. ಸಾಮಾನ್ಯವಾಗಿ ಕಥೆಗಳು ಒಂದೊಂದು ವಸ್ತುವನ್ನು ಆಧರಿಸಿ ಹುಟ್ಟಿಕೊಂಡಿರುತ್ತದೆ. ಅದು ಸಂಪೂರ್ಣವಾಗಿ ಆಧಾರವಿಲ್ಲದಂತಹವುಗಳಾಗಿ ರುವುದಿಲ್ಲ. ಇವು ವಾಸ್ತವಿಕ ಅಂಶಗಳ ಜೊತೆ ಜೊತೆಗೆ ಕಾಲ್ಪನಿಕ ಅಂಶಗಳನ್ನು ಒಳಗೊಂಡು ಆಕರ್ಷಕವಾಗಿರುತ್ತದೆ. ಸಾಮಾನ್ಯವಾಗಿ ಪ್ರತಿ ಊರಿಗೂ, ಪ್ರತಿ ನದಿಗೂ ಅಷ್ಟೇಕೆ ಊರಲ್ಲಿ ಇರಬಹುದಾದ ಪ್ರತಿ ದೇವರು, ದೇವಾಲಯಕ್ಕೂ ಏನಿಲ್ಲವೆಂದರೂ ಒಂದು ಕಥೆ ಇದ್ದೇ ಇರುತ್ತದೆ. ಅದಿದ್ದರೇ ಅದಕ್ಕೆ ಮಹತ್ವ. ಅದರ ಮೂಲಕ ಜನಪದ ನ್ಯಾಯ, ನಿಷ್ಠೆ, ಧರ್ಮಕಾರ್ಯಗಳು, ಕೆರೆ, ಬಾವಿ, ಪ್ರಕೃತಿ ಹಲವಾರು ವಿಷಯಗಳ ಬಗ್ಗೆ ಶ್ರದ್ಧೆಯನ್ನು ಮೂಡಿಸಲು ಈ ಕಥೆಗಳು ಕಾರಣೀಭೂತವಾಗಿವೆ. ದಂತಕಥೆಗಳಲ್ಲಿ ಕಾಣಬರುವ ವಿಷಯಗಳಿಗೆ ಪೂರಕವಾಗಿ ಶಿಲ್ಪಗಳಲ್ಲಿ ಮಾಹಿತಿ ದೊರೆಯುವುದಿದೆ. (ಯಲ್ಸಿ ಕುದುರೆ ಬಗ್ಗೆ) ಹೆಚ್ಚಿನ ಸಂಶೋಧನೆಗೆ ಹಚ್ಚಿದಾಗ ಅದನ್ನು ಗುರುತಿಸಲು ಸಾಧ್ಯವಿದೆ.

ಜಿಲ್ಲೆಯಲ್ಲಿ ಕಂಡು ಬರುವ ಪೂರ್ಣಸತ್ಯವೆಂದು ಹೇಳದಿದ್ದರು ಅದು ಹುಟ್ಟಿದ ಕಾಲ, ಸಂದರ್ಭ, ಇವುಗಳ ಹಿನ್ನೆಲೆಯಲ್ಲಿ ಅವುಗಳನ್ನು ಅಳವಡಿಸಿಕೊಂಡರೆ ಅವು ನಮ್ಮ ಜೀವನಕ್ಕೆ ಹತ್ತಿರವಾಗಿರುವಂತೆ ನೋಡಿಕೊಳ್ಳಲು ಸಾಧ್ಯವಿದೆ. ಜಿಲ್ಲೆಯ ವಿಶೇಷ ಪರಂಪರೆಯನ್ನು ಇವು ಪ್ರತಿನಿಧಿಸಿದರೆ ಅಚ್ಚರಿಯಿಲ್ಲ.



# ಕನ್ನಡ ಸಾಹಿತ್ಯ-ಭಾಷೆ-ಛಂದಸ್ಸಿನ ಅಧ್ಯಯನದ ಆಕರಗಳಾಗಿ ಶಾಸನಗಳು

ಡಾ|| ಸಿ. ನಾಗಭೂಷಣ

ಶಾಸನಗಳು ಪ್ರಮುಖವಾಗಿ ಒಂದು ಕಾಲದಲ್ಲಿ ನಡೆದ ವ್ಯವಹಾರಗಳ ಲಿಖಿತ ದಾಖಲೆಗಳು. ನಾಡಿನ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಅಂಶಗಳನ್ನು ಅರ್ಥಮಾಡಿಕೊಳ್ಳುವ ಮೂಲ ಅಥವಾ ನೇರವಾದ ಸಾಮಗ್ರಿಗಳು. ರಾಜಕೀಯ ಹಾಗೂ ಸಾಂಸ್ಕೃತಿಕ ಚರಿತ್ರೆಯನ್ನು ಪುನಾರಚಿಸುವಲ್ಲಿ ಉಳಿದೆಲ್ಲವುಗಳಿಗಿಂತ ಮಹತ್ತರವಾದ ಮತ್ತು ಅಧಿಕೃತ ದಾಖಲೆಗಳಾಗಿವೆ. ಶಾಸನಗಳು ಸಾಹಿತ್ಯವಾಗಬೇಕೆಂಬ ಉದ್ದೇಶ್ಯದಿಂದ ರೂಪುಗೊಂಡವುಗಳು ಅಲ್ಲ. ಆದಾಗ್ಯೂ ಎಷ್ಟೋ ವೇಳೆ ಶಾಸನಗಳನ್ನು ಬರೆಸಿದ ಅಥವಾ ವ್ಯಕ್ತಿಯ ಮನೋಧರ್ಮ ಅಥವಾ ಸಾಮರ್ಥ್ಯದಿಂದಾಗಿ ಸಾಹಿತ್ಯದ ಸೊಗಸು ಅಥವಾ ಕಾವ್ಯಗುಣ ಕಾಣಿಸಿಕೊಳ್ಳಬಹುದು. ಯಾವುದೇ ಒಂದು ವಿಷಯವನ್ನು ಕುರಿತು ಭಾಷೆಯ ಮೂಲಕ ಹೇಳುವಾಗ, ಹೇಳುವ ವಿಧಾನ ಕೇವಲ ವಿಷಯ ನಿರೂಪಣೆಯಷ್ಟೇ ಆಗದೆ ಭಾವನೆಯ ವರ್ಣನಾ ಕ್ರಮ ಆದಾಗ ಕವಿತ್ವದ ಅಂಶ ಸೇರ್ಪಡೆಯಾಗುತ್ತದೆ. ಶಾಸನದಲ್ಲಿಯ ವಿವರವು ವಾರ್ತೆ ಅಥವಾ ವರದಿಯ ನೆಲೆಯನ್ನು ಮೀರಿದಾಗ, ಅದು ಆಸ್ವಾದ ಹಾಗೂ ಪರಿಭಾವನೆಯ ವಿಷಯವಾದಾಗ ಕಾವ್ಯತ್ವದ ನೆಲೆಯನ್ನು ಪ್ರವೇಶಿಸುತ್ತದೆ. ಅಭಿವ್ಯಕ್ತಿಗೆ ಒದಗುವ ಛಂದೋಬದ್ಧತೆಯ ಸೊಗಸಿನಿಂದ ಕಾವ್ಯಗುಣವನ್ನು ಗುರುತಿಸಬಹುದು. ಶಾಸನಗಳು ಛಂದೋಬದ್ಧವಾದ ಬರವಣಿಗೆಗಳ (ಚಂಪೂಶೈಲಿ) ವ್ಯಾಪ್ತಿಗೆ ಒಳಪಡುವುದರಿಂದ ಶಾಸನಗಳುದ್ದಕ್ಕೂ ಅಲ್ಲಲ್ಲಿ ಕಾವ್ಯಗುಣ ವ್ಯಕ್ತವಾಗಿರುವುದು ಕಂಡುಬರುತ್ತದೆ. ಕವಿಹೃದಯವುಳ್ಳ ಕೆಲವು ಶಾಸನಕಾರರು ತಮ್ಮ ಪ್ರತಿಭಾಗುಣದಿಂದ ರಾಜಕೀಯ ಹಾಗೂ ಸಾಂಸ್ಕೃತಿಕ ದಾಖಲೆಗಳಾದ ಶಾಸನಗಳನ್ನು ಸಾಹಿತ್ಯವನ್ನಾಗಿಸಲು ಪ್ರಯತ್ನಪಟ್ಟಂತೆ ಕಂಡು ಬರುತ್ತದೆ.

ಕನ್ನಡ ಕಾವ್ಯಗಳು ಮೂಲತಃ ಸಾಹಿತ್ಯ ಕ್ಷೇತ್ರಕ್ಕೆ ಸೇರಿದವುಗಳಾದರೂ ಅನುಷಂಗಿಕವಾಗಿ ಆಯಾ ಕಾಲದ ಚರಿತ್ರೆಗೆ ಸಲ್ಲುವಂತೆ, ಶಾಸನಗಳು ಚಾರಿತ್ರಿಕ ಸಂಗತಿಗಳ ಪ್ರಾತಿನಿಧಿಕವಾಗಿದ್ದರೂ ಅನುಷಂಗಿಕವಾಗಿ ಕಾವ್ಯ ಅಥವಾ ಸಾಹಿತ್ಯದ ಲಕ್ಷಣಗಳನ್ನು ಕ್ವಚಿತ್ತಾಗಿ ಒಳಗೊಂಡಿವೆ. ಶಾಸನಗಳಿಗೂ ಕಾವ್ಯಗಳಿಗೂ ಇರುವ ಮುಖ್ಯ ವ್ಯತ್ಯಾಸ, ಶಾಸನ ರಚನೆ ಸಾಂದರ್ಭಿಕವಾದುದು, ಎಂದರೆ ದಾನದತ್ತಿಗೆ ಸಂಬಂಧಿಸಿದ ದೇವಾಲಯಗಳ ನಿರ್ಮಾಣ, ಲೋಕೋಪಯೋಗಿ ಕಾರ್ಯ ಇತ್ಯಾದಿ ಕ್ರಿಯೆಯ ಸಂದರ್ಭಕ್ಕೆ ಸಂಬಂಧಪಟ್ಟಿದ್ದು, ಅವೆಲ್ಲ ನಿರ್ದೇಶಿತ ರಚನೆಗೆ ಸಂಬಂಧಪಟ್ಟವುಗಳು. ಶಾಸನಗಳ ನಿರ್ಮಾಣ ಮೂರು ಹಂತಗಳಲ್ಲಿ ನಡೆಯುತ್ತವೆ. 1. ಶಾಸನಗಳನ್ನು ಹಾಕಿಸಬೇಕೆಂಬ ಪ್ರಭುವರ್ಗ. 2. ಪ್ರಭುವರ್ಗದ ನಿರ್ದೇಶನದ ಮೇರೆಗೆ ಆ ಸಂದರ್ಭದ

ವಸ್ತುವಿಗೆ ತಕ್ಕ ಪದಸಂಯೋಜನೆಯ ಮೂಲಕ ಶಾಸನ ಪಠ್ಯವನ್ನು ಸಿದ್ಧಪಡಿಸಿದ ವ್ಯಕ್ತಿ. 3. ಶಾಸನ ಪಾಠವನ್ನು ಕಲ್ಲಿನಲ್ಲಿ ಕಂಡರಿಸುವ ವ್ಯಕ್ತಿ. ಈ ಕ್ರಿಯೆಯಲ್ಲಿ ತನಗೆ ತಾನೇ ಇಚ್ಛಿಸಿದ ವಸ್ತುವೊಂದನ್ನು ಆಯ್ಕೆ ಮಾಡಿಕೊಂಡು ಏಕಾಂತದಲ್ಲಿ ಕುಳಿತು ಕೃತಿ ರಚನೆ ಮಾಡುವ ಕವಿಯ ಕಾವ್ಯದಲ್ಲಿರುವ ಕಾವ್ಯಗುಣವನ್ನು ಹುಡುಕಲಿಕ್ಕೆ ಸಾಧ್ಯವಿಲ್ಲ. ಕವಿಯಾದವನು ತನ್ನನ್ನು ನಿಯಂತ್ರಿಸುವ ಪ್ರಭುಶಕ್ತಿಗೆ ಎಷ್ಟೇ ನಿಷ್ಠನಾಗಿದ್ದರೂ ಬರೆಯುವ ಹೊತ್ತಿನಲ್ಲಿ ಆತ ಬದ್ಧತೆಯನ್ನು ಮೀರಿ ತಾನು ಆರಿಸಿಕೊಂಡ ವಸ್ತು ಹಾಗೂ ರಸಕ್ಕೆ ಅಧೀನವಾಗುವುದರಿಂದಲೇ ಆತ ತನ್ನ ಬರವಣಿಗೆಯಲ್ಲಿ ಕಾವ್ಯತ್ವವನ್ನು ಸಾಧಿಸಲು ಸಾಧ್ಯವಾಗುತ್ತದೆ.

ಆದರೆ ಶಾಸನ ರಚನೆಯ ಕ್ರಿಯೆ ಹಾಗಲ್ಲ. ಸಾಂದರ್ಭಿಕವಾದದ್ದು. ನಿರ್ದೇಶಿತವಾದುದು. ತನ್ನ ಅಭಿವ್ಯಕ್ತಿಗೆ ಆಶ್ರಯಿಸಬೇಕಾದ ಮಾಧ್ಯಮದ (ಶಿಲೆ-ಲೋಹ) ಪರಿಮಿತಿಯಿಂದ ನಿರ್ಬಂಧಿತವಾದುದು. ಈ ಹಿನ್ನೆಲೆಯಲ್ಲಿ ಶಾಸನಗಳಲ್ಲಿ ಒಂದು ವೇಳೆ ಕಾವ್ಯಗುಣವೇನಾದರೂ ಪ್ರಾಸಂಗಿಕವಾಗಿ ಕಂಡು ಬಂದರೆ ಅದು ಶಾಸನ ಸಿದ್ಧಪಡಿಸಿದವನ ಮನೋಧರ್ಮ ಹಾಗೂ ರಚನಾ ಸಾಮರ್ಥ್ಯದ ಪರಿಣಾಮವಲ್ಲದೆ ಬೇರೇನೂ ಅಲ್ಲ. ಶಾಸನಗಳನ್ನು ರಚಿಸಿದವರಲ್ಲಿ ಎಷ್ಟೋ ಮಂದಿ ಕವಿಗುಣವುಳ್ಳವರೂ ಹಾಗೂ ಕವಿಗಳೂ ಆಗಿರುವ ಸಾಧ್ಯತೆ ಇರುವುದರಿಂದ ಹಾಗೂ ಅಪ್ರಭಾಷಿಕ ಸಂದರ್ಭದಲ್ಲಿ ಕೆಲಸ ಮಾಡುತ್ತಿರುವುದರಿಂದ ಹೇಳುವ ವಿಷಯವನ್ನು ತಮಗೆ ಹಿನ್ನೆಲೆಯಾದ ಕಾವ್ಯ ಪರಂಪರೆಯ ಭಾಷಾ ಸಾಮಗ್ರಿಯಿಂದ ಕಟ್ಟಿಕೊಡುವ ಕಲೆಗಾರಿಕೆಯನ್ನು ಅಲ್ಲಲ್ಲಿ ಪ್ರಕಟಿಸಿದ್ದಾರೆ. ಹೀಗಾಗಿ ಶಾಸನಗಳಲ್ಲಿ ಹಲವೆಡೆ ಕಾವ್ಯಗುಣ ಪ್ರಾಸಂಗಿಕವಾಗಿ ಕಾಣಿಸಿಕೊಂಡಿದ್ದು ಕಡೆಗಣಿಸುವಂತಹದ್ದಲ್ಲವಾಗಿದೆ. ಉತ್ತಮ ಕಾವ್ಯದ ಯಾವುದೋ ಒಂದು ಭಾಗವನ್ನು ಓದುವಾಗ ಉಂಟಾಗುವ ಅನುಭವ ಕೆಲವು ಶಾಸನಗಳನ್ನು ಓದುವಾಗಲೂ ಆಗುತ್ತದೆ. ಶಾಸನಗಳಲ್ಲಿ ಕಾವ್ಯವಲ್ಲದ ಭಾಗವೂ ಉಂಟು. ಆದಾಗ್ಯೂ ಶಾಸನ ಸಾಹಿತ್ಯವನ್ನು ಮಾರ್ಗಸಾಹಿತ್ಯಕ್ಕಾಗಲೀ ದೇಶೀ ಸಾಹಿತ್ಯಕ್ಕಾಗಲೀ ಸೇರಿಸುವ ಪ್ರಶ್ನೆಯೇ ಇಲ್ಲ. ಅದು ಕನ್ನಡ ಸಾಹಿತ್ಯವಾಹಿನಿಯ ಪಕ್ಕದಲ್ಲೆ ಹರಿದಿರುವ ಇನ್ನೊಂದು ನದಿ ಎಂದು ಹೇಳಬಹುದು. ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಹಳಗನ್ನಡ ಭಾಷೆ, ನುಡಿಕಟ್ಟುಗಳು, ಛಂದೋ ಪ್ರಯೋಗಗಳಲ್ಲಿ ಕನ್ನಡ ಸಾಹಿತ್ಯ ಕವಿಗಳ ಕೊಳುಕೊಡುಗೆ, ಪ್ರೇರಣೆ ಪ್ರಚೋದನೆಗಳನ್ನು ಗುರುತಿಸಬಹುದಾಗಿದೆ. ಶಾಸನಗಳನ್ನು ರಸಾನುಭವಕ್ಕಾಗಿ ಓದದಿದ್ದರೂ ಅನೇಕ ಶಾಸನಗಳನ್ನು ಓದಿದಾಗ ಒಳ್ಳೆಯ ಕಾವ್ಯವನ್ನು ಎದುರುಗೊಂಡ ಅನುಭವವಾಗುತ್ತದೆ. ಶಾಸನಗಳು ನೇರ ಜೀವನದಿಂದ ಹೊರ ಹೊಮ್ಮಿದವು. ಜೀವನವನ್ನೇ ಚಿತ್ರಿಸುವ ಉದ್ದೇಶ್ಯವುಳ್ಳವು. ಶಾಸನಗಳಿಂದ ಕನ್ನಡ ಸಾಹಿತ್ಯದ ಅಧ್ಯಯನಕ್ಕೆ ಎಷ್ಟರ ಮಟ್ಟಿಗೆ ನೆರವು ಉಂಟಾಗಿದೆ ಎಂಬುದು ಒಂದು ಸಂಶೋಧನ ನಿಬಂಧದ ವಸ್ತುವಾಗುವಂತಹುದು.

ಕನ್ನಡ ಸಾಹಿತ್ಯ ಮತ್ತು ಶಾಸನ ಸಾಹಿತ್ಯದ ಅಧ್ಯಯನವನ್ನು ಅನ್ಯೋನ್ಯ ಪೂರಕವಾಗಿಯೂ, ಪ್ರತ್ಯೇಕವಾಗಿಯೂ ಮಾಡುವುದರಿಂದ ಆಗುವ ಪ್ರಯೋಜನಗಳು ಬಹುವಿಧವಾಗಿವೆ. ಶಾಸನಗಳನ್ನು ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಗುರುತಿಸುವಲ್ಲಿ, ಪಂಪಪೂರ್ವ ಯುಗದ ಸಾಹಿತ್ಯದ ಸ್ವರೂಪವನ್ನು ತಿಳಿಯುವಲ್ಲಿ, ಕವಿಗಳ ವೈಯಕ್ತಿಕ ವಿಚಾರದ ಬಗೆಗೆ, ಕವಿಗಳು ಬರೆದಿರುವ ಅನುಪಲಬ್ಧ ಕೃತಿಗಳ ಬಗೆಗೆ, ಕವಿಗಳ ಕಾವ್ಯದ ಅಧ್ಯಯನದಲ್ಲಿ, ಭಾಷಾ ಚರಿತ್ರೆಯನ್ನು ರೂಪಿಸುವಲ್ಲಿ, ಛಂದಸ್ಸಿನ ಚರಿತ್ರೆಯನ್ನು ಅರಿಯುವಲ್ಲಿ ಪ್ರಮುಖ ಆಕರಗಳಾಗಿ ಉಪಯೋಗಿಸಿಕೊಳ್ಳಬಹುದಾಗಿದೆ.

ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಗುರುತಿಸುವಲ್ಲಿ ಶಾಸನಗಳನ್ನು ಅವಲಂಬಿಸಬೇಕಾಗಿದೆ. ಕವಿರಾಜಮಾರ್ಗ ಮತ್ತು ಇನ್ನಿತರ ಆಧಾರಗಳು ಕ್ರಿ. ಶ. 850ಕ್ಕಿಂತ ಹಿಂದೆ ಕನ್ನಡ ಸಾಹಿತ್ಯವಿದ್ದಿತು ಎಂಬುದಕ್ಕೆ ಆಧಾರಗಳೇ ಹೊರತು ಎಷ್ಟು ಹಿಂದೆ ಎಂಬುದಕ್ಕಲ್ಲ. ಕ್ರಿ. ಪೂ. 3ನೇ ಶತಮಾನದ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಬರುವ 'ಇಸಿಲ' ಎಂಬ ಸ್ಥಳವಾಚಿ ಪದವು ಅಚ್ಚಗನ್ನಡವೆಂದೂ, ತೇದಿಯುಳ್ಳ ಅತ್ಯಂತ ಪ್ರಾಚೀನವಾದ ಕನ್ನಡ ಪದವೆಂದು ಈಗಾಗಲೇ ಸಂಶೋಧಕರು ಗುರುತಿಸಿದ್ದಾರೆ. ಈ ಉಲ್ಲೇಖದಿಂದ ಕ್ರಿ. ಶ.ಕ್ಕಿಂತಲೂ ಪೂರ್ವದಲ್ಲಿ ಕನ್ನಡ ಭಾಷೆ ಸಾಕಷ್ಟು ಪ್ರಚಾರದಲ್ಲಿತ್ತು ಎಂದು ಹೇಳಬಹುದಾಗಿದೆ.

ಕವಿರಾಜಮಾರ್ಗದಂತಹ ಲಕ್ಷಣ ಕೃತಿಗಳನ್ನು ಪರಿಶೀಲಿಸುವವರಿಗೆ ಅದಕ್ಕೂ ಹಿಂದೆ ಕನ್ನಡದಲ್ಲಿ ರಚನೆಯನ್ನು ಮಾಡಿದ ಗದ್ಯಪದ್ಯ ಕವಿಗಳ ಉಲ್ಲೇಖ ಮಾತ್ರ ವಿದಿತವಾಗುವುದಲ್ಲದೆ ಅಂತಹ ಕವಿಗಳ ಕಾವ್ಯದ ಸ್ವರೂಪ ಯಾವ ವಿಧವಾಗಿದ್ದಿತು ಎಂಬುದನ್ನು ತಿಳಿಯುವಲ್ಲಿ ಆ ಕಾಲದ ಶಾಸನ ಸಾಹಿತ್ಯದತ್ತ ಹೊರಳಿ ನೋಡಬೇಕಾಗುತ್ತದೆ. ಬಾದಾಮಿ ಚಾಲುಕ್ಯರ ಮತ್ತು ಅದಕ್ಕೂ ಪೂರ್ವದ ಕಾಲದ ಹಲವಾರು ಕನ್ನಡ ಶಾಸನಗಳು ನಮಗೆ ಲಭ್ಯವಿವೆ. ಇವುಗಳಿಂದ ಈ ಶಾಸನಗಳಲ್ಲಿ ಮಾತ್ರವಲ್ಲದೆ ಹೊರಗಡೆಯಲ್ಲಿಯೂ ಈ ಕಾಲದ ಕನ್ನಡ ಸಾಹಿತ್ಯದ ಸ್ವರೂಪ ಯಾವ ರೀತಿ ಇದ್ದಿತು ಎಂಬುದು ಕೆಲಮಟ್ಟಿಗೆ ತಿಳಿವಳಿಕೆಯಾಗುತ್ತದೆ. ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಚಾರಿತ್ರಿಕವಾಗಿ ಗುರುತಿಸುವುದಾದರೆ ಅದಕ್ಕೆ ಸಹಾಯಕವಾಗಬಹುದಾದ ನಿಶ್ಚಿತ ಮಾನದಂಡವನ್ನು ಶಾಸನಗಳಲ್ಲಿ ಹುಡುಕಬಹುದಾಗಿದೆ.

ಎಂ. ಎಚ್. ಕೃಷ್ಣರವರು ಬೆಳಕಿಗೆ ತಂದ ಕ್ರಿ. ಶ. 450ರ ಹಲ್ಮಿಡಿ ಶಾಸನವು ಕನ್ನಡ ಶಾಸನ ಸಾಹಿತ್ಯದ ಮತ್ತು ಸಾಹಿತ್ಯ ಚರಿತ್ರೆಯಲ್ಲಿ ಮಹತ್ತರವಾದ ಸ್ಥಾನವನ್ನು ಪಡೆದಿದೆ. ಹಲ್ಮಿಡಿ ಶಾಸನವು ಕನ್ನಡ ಭಾಷೆಯಲ್ಲಿ ಮೊದಲ ಲಿಖಿತ ದಾಖಲೆಯು ಹೌದು. ಹಲ್ಮಿಡಿ ಶಾಸನದ ಭಾಷೆ ಪೂರ್ವದ ಹಳಗನ್ನಡ ಗದ್ಯವಾಗಿದ್ದು ಆಗಲೇ ಸಂಸ್ಕೃತ ಭಾಷೆಯ ಪೂರ್ಣ ಪ್ರಭಾವಕ್ಕೆ ಒಳಗಾಗಿರುವುದನ್ನು ಗುರುತಿಸಬಹುದು. ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಕ್ರಿ. ಶ. 5 ಅಥವಾ 6ನೆಯ ಶತಮಾನಕ್ಕಿಂತ ಹಿಂದಕ್ಕೆ

ಕೊಂಡೊಯ್ಯಲು ಆಧಾರವಾಗಿ ಪರಿಣಮಿಸಿದೆ. ಹಲ್ಮಿಡಿ ಶಾಸನದ ಪೊಗಳ್ಪೊಟ್ಟ (ಹೊಗಳಲ್ಪಟ್ಟ) ಪೆತ್ತಜಯನ್ (ಜಯಶಾಲಿ) ಇತ್ಯಾದಿ ಉಕ್ತಿಗಳನ್ನು ಗಮನಿಸಿದರೆ ಸಂಸ್ಕೃತದ ಪ್ರಭಾವಕ್ಕೆ ತೀವ್ರವಾಗಿ ಒಳಗಾಗಿರುವ ಮತ್ತು ಸಂಸ್ಕೃತದಲ್ಲಿ ವಾಕ್ಯಗಳನ್ನು ಕಲ್ಪಿಸಿಕೊಂಡು ಅವುಗಳನ್ನು ಕನ್ನಡಕ್ಕೆ ಅನುವಾದಿಸಿರುವ ಒಬ್ಬ ಸಂಸ್ಕೃತ ವಿದ್ವಾಂಸನ ಕನ್ನಡ ಭಾಷೆಯನ್ನು ಅಲ್ಲಿ ಕಾಣಬಹುದಾಗಿದೆ.[1] ಸಂಸ್ಕೃತ ಭಾಷೆಯ ಬೆಂಬಲದಿಂದ ವಚನ ರೂಪವಾಗಿ ಪ್ರಕಟವಾದ ಹಲ್ಮಿಡಿ ಶಾಸನವು ಕನ್ನಡ ಸಾಹಿತ್ಯದ ಉಗಮದ ಕುರುಹುಗಳ ಪ್ರತೀಕವಾಗಿ ಪರಿಣಮಿಸಿದೆ.

ಕ್ರಿ. ಶ. 700ಕ್ಕಿಂತ ಪೂರ್ವದ ಕರ್ನಾಟಕದ ಕಾವ್ಯಮಯವಾದ ಶಾಸನಗಳೆಲ್ಲ ಸಂಸ್ಕೃತ ಭಾಷೆಯಲ್ಲಿವೆ. ಕ್ರಿ. ಶ. 450ರ ತಾಳಗುಂದ ಶಾಸನದ ಕರ್ತೃ ಕುಬ್ಜ. ಕ್ರಿ. ಶ. 634ರ  ಐಹೊಳೆ ಶಾಸನದ ಕರ್ತೃ ರವಿಕೀರ್ತಿ. ಕ್ರಿ. ಶ. 602ರ ಮಹಾಕೂಟ ಶಾಸನದ ಅಜ್ಞಾತ ಕವಿ ಇವರೆಲ್ಲ ಕನ್ನಡನಾಡಿನ ಶಾಸನ ಕವಿಗಳು. ಇವರೆಲ್ಲ ಸಂಸ್ಕೃತದಲ್ಲಿ ಶಾಸನಗಳನ್ನು ರಚಿಸಲು ಬಹುಶಃ ಕನ್ನಡವು ಪದ್ಯ ರಚನೆಗೆ ಇನ್ನೂ ಅಷ್ಟಾಗಿ ಬಳಕೆಯಾಗದಿದ್ದುದೇ ಅಥವಾ ರವಿಕೀರ್ತಿಯಂತಹವರು ತಾನು ಕಾಳಿದಾಸ, ಭಾರವಿಯವರಿಗೆ ಸಮಾನ ಕೀರ್ತಿಯುಳ್ಳವನು ಎಂದಿರುವುದನ್ನು ನೋಡಿದರೆ ಆ ಕಾಲದಲ್ಲಿ ಶಕ್ತರಾದ ಕನ್ನಡ ಕವಿಗಳು ಸಂಸ್ಕೃತದಲ್ಲಿ ಕಾವ್ಯ ರಚನೆ ಮಾಡಿ ಅಲ್ಲಿ ಸ್ಥಾನ ಪಡೆಯಲು ಪ್ರಯತ್ನಿಸುತ್ತಿದ್ದರು ಎಂಬುದಾಗಿ ತಿಳಿದು ಬರುತ್ತದೆ.

ಕನ್ನಡ ಸಾಹಿತ್ಯದ ಪ್ರಾಚೀನ ರೂಪಗಳ ಬಗೆಗೆ ಶಾಸನಗಳಿಂದ ಕೆಲವು ಮಾಹಿತಿ ಲಭ್ಯವಿದೆ. ಅಚ್ಚಗನ್ನಡ ದೇಶಿ ಛಂದೋರೂಪದ ಬಳಕೆ ಕ್ರಿ. ಶ. 700ರ ಬಾದಾಮಿ ಶಾಸನದಲ್ಲಿ ಪ್ರಥಮವಾಗಿ ಕಂಡುಬರುತ್ತದೆ. ತ್ರಿಪದಿ ರೂಪದ ಈ ಶಾಸನವು ಕನ್ನಡ ವೀರನೊಬ್ಬನ ಸುಸಂಸ್ಕೃತವಾದ ಗುಣವೈಶಿಷ್ಟ್ಯವನ್ನು ತಿಳಿಸುತ್ತದೆ. ಕನ್ನಡ ಶಾಸನ ಸಾಹಿತ್ಯದಲ್ಲಿ ವ್ಯಕ್ತಿಚಿತ್ರಣ ಪ್ರಾಧಾನ್ಯ ದೊರೆತಿರುವುದು ಇದರಿಂದ ವ್ಯಕ್ತವಾಗುತ್ತದೆ. ಬಾದಾಮಿ ಶಾಸನದ ತ್ರಿಪದಿಗಳು ಆ ಕಾಲಕ್ಕಿಂತಲೂ ಹಿಂದಿನಿಂದಲೇ ಕನ್ನಡದಲ್ಲಿ ಪ್ರಚಲಿತವಾಗಿ ಜನಪದ ಗೀತಸಾಹಿತ್ಯವಿದ್ದಿರಬೇಕು ಎಂಬ ಅರಿವನ್ನು ಮೂಡಿಸುತ್ತವೆ.[2] ನಗರ ತಾಲ್ಲೂಕಿನ ಹುಂಚ ಶಾಸನದಲ್ಲಿಯ[3] ಗಂಗರಸ ಸೈಗೊಟ್ಟ ಶಿವಮಾರನ ಗಜಾಷ್ಟಕ ಎಂಬ 'ಒನಕೆವಾಡು' ದೇಸಿ ಕಾವ್ಯದ ಪ್ರಸ್ತಾಪದಿಂದ ಈ ಜಾತಿಯ ದೇಸಿಯ ಪದ್ಯರಚನೆ ಕನ್ನಡದಲ್ಲಿ ಕೆಲವು ಕಾಲದಿಂದ ನಡೆಯುತ್ತಿದ್ದುದು ಮಾತ್ರವಲ್ಲದೆ ಕವಿಗಳ ಹಾಗೂ ಲಾಕ್ಷಣಿಕರ ಮನ್ನಣೆಗೂ ಪಾತ್ರವಾಗಿದ್ದಿತು ಎಂಬುದು ತಿಳಿದು ಬರುತ್ತದೆ. ಒನಕೆವಾಡು ಎಂದರೆ ಕುಟ್ಟುವ, ಬೀಸುವ, ಕೇರುವ ಹಾಡು, ಒನಕೆವಾಡುವಿನ ಬಗೆಗೆ 10ನೇ

---

[1] ಎಂ. ಚಿದಾನಂದಮೂರ್ತಿ : ಶಾಸನಗಳು ಮತ್ತು ಕನ್ನಡ ಸಾಹಿತ್ಯ ಸಂಶೋಧನ ತರಂಗ, ಸಂಪುಟ - 2 ಪುಟ 196.

[2] ಟಿ. ಕೇಶವಭಟ್ಟ : ತೀರ ಪ್ರಾಚೀನ ಸಾಹಿತ್ಯ ರೂಪಗಳು, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-1, ಪುಟ -55.

[3] E. C. Vol. VIII ನಗರ 35.

ಶತಮಾನದ ನಂತರದ ದುರ್ಗಸಿಂಹ, ನೇಮಿಚಂದ್ರ, ಸುರಂಗ, ಶಾಂತಲಿಂಗದೇಶಿಕ, ಷಡಕ್ಷರಿ ಕವಿಗಳ ಕೃತಿಗಳಲ್ಲಿಯೂ ಪ್ರಸ್ತಾವ ಇದ್ದು ಒನಕೆವಾಡು ಶೀರ್ಷಿಕೆಯ ಕೆಳಗೆ ಕೆಲವು ತ್ರಿಪದಿಗಳು ಕಂಡು ಬರುತ್ತವೆ. ಈ ಹಿನ್ನೆಲೆಯಲ್ಲಿ ಒನಕೆವಾಡು ಎನಿಸಿಕೊಂಡ ಗಜಾಷ್ಟಕವು ಕುಟ್ಟುವಾಗ ಹಾಡಲು ಬಳಸುತ್ತಿದ್ದ ತ್ರಿಪದಿ ರೂಪವಾಗಿದ್ದಿರಬಹುದು ಎಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ.[4]

ಕನ್ನಡ ಸಾಹಿತ್ಯದ ಪ್ರಥಮ ಘಟ್ಟದ ಅವಶೇಷಗಳೆಂದರೆ ಶಾಸನಗಳು. ಪಂಪಪೂರ್ವ ಯುಗದಲ್ಲಿ ಶ್ರೀಮಂತ ಸಾಹಿತ್ಯ ಕಂಡು ಬರುವುದು ಅಥವಾ ಕಾವ್ಯಗುಣವುಳ್ಳ ಬಿಡಿಮುಕ್ತಕಗಳು ಕಂಡು ಬರುವುದು ಚಿತ್ರದುರ್ಗದ ತಮಟುಕಲ್ಲಿನ ಶಾಸನ ಹಾಗೂ ಶ್ರವಣಬೆಳ್ಗೊಳದ ನಿಷಧಿ ಶಾಸನಗಳಲ್ಲಿ. ನಿಷಧಿ ಶಾಸನಗಳನ್ನು ಕನ್ನಡನಾಡಿನ ಪ್ರಥಮ ಸಾಹಿತ್ಯ ಪಾಠಗಳೆಂದು ವಿದ್ವಾಂಸರು ಗುರುತಿಸಿರುವುದು ಪರಿಶೀಲನಾರ್ಹವಾಗಿದೆ. ಶ್ರವಣ ಬೆಳ್ಗೊಳದ ಬಿಡಿಮುಕ್ತಕಗಳಲ್ಲಿ ಕೆಲವು ಒಳ್ಳೆಯ ಕಾವ್ಯದ ತುಣುಕುಗಳೇ ಆಗಿವೆ. ಈ ಶಾಸನಗಳನ್ನು ಬರೆದವರು ಕಾವ್ಯರಚನೆಯನ್ನು ಬಲ್ಲವರಾಗಿರಬೇಕು.

ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱೆವೋಲ್ ಮಂಜುವೋಲ್ ತೋಱೆ ಬೇಗಂ
ಪಿರಿಗುಂ ಶ್ರೀರೂಪ ಲೀಲಾಧನ ವಿಭವ ಮಹಾರಾಶಿಗಳ್ ನಿಲ್ಲವಾರ್ಗಂ
ಪರಮಾರ್ಥಂ ಮೆಚ್ಚೆನಾನೀ ಧರಣಿಯೊಳಿರವಾನೆಂದು ಸನ್ಯಾಸನಂಗೆ
ಯ್ಯುದ್ದುರುಸತ್ವನ್ ನಂದಿಸೇನ ಪ್ರವರ ಮುನಿವರನ್ ದೇವಲೋಕಕ್ಕೆ ಸಂದಾನ್[5]

ಕ್ರಿ. ಶ. 7ನೆಯ ಶತಮಾನದ ಶ್ರವಣಬೆಳ್ಗೊಳದ ಈ ಶಾಸನವು, ಆಧ್ಯಾತ್ಮಿಕ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡ ಯತಿಯೊಬ್ಬರ ಮನಸ್ಸು ಲೋಕದ ಸೌಂದರ್ಯ, ಸಂಪತ್ತು, ರೂಪ, ವೈಭವಗಳು, ಸುರಚಾಪದ ಹಾಗೆ, ಮಿಂಚಿನ ಬಳ್ಳಿಗಳ ಹಾಗೆ ಕ್ಷಣಾರ್ಧದಲ್ಲಿ ಇಲ್ಲವಾಗುತ್ತವೆಂಬ ಅಚಲ ನಿರ್ಧಾರವನ್ನು ತೆಗೆದುಕೊಂಡು ಸನ್ಯಸನ ವಿಧಿಯಿಂದಾಗಿ ದೇವಲೋಕಕ್ಕೆ ಸಂದ ಸಂಗತಿಯನ್ನು ಕ್ರಮಬದ್ಧವಾಗಿ ವರ್ಣಿಸುತ್ತದೆ. ಕವಿರಾಜಮಾರ್ಗದ ಪೂರ್ವದಲ್ಲಿಯೇ ಲಭ್ಯವಿರುವ ಈ ಶಾಸನ ಪದ್ಯ ನಿಜಕ್ಕೂ ಅಂದಿನ ಕನ್ನಡ ಕಾವ್ಯಸಾಧನೆಯ ದಾಖಲೆಯಾಗಿ ಕಂಡಿದ್ದು 'ಕನ್ನಡದ ನಿಜವಾದ ಶಾಸನ ಕಾವ್ಯ' ಎಂದು ಕರೆಯಬಹುದಾಗಿದೆ. ಈ ಶಾಸನ ಪದ್ಯದಲ್ಲಿಯ ಉಪಮಾ ಸಾಮಗ್ರಿ ಅನಂತರದ ಕನ್ನಡ ಚಂಪೂಕವಿಗಳ ಅಭಿವ್ಯಕ್ತಿಯು ಮೇಲೆ, ಅದರಲ್ಲೂ ಬದುಕಿನ ನಶ್ವರ ಮನೋಹರತೆಯನ್ನು ವರ್ಣಿಸುವ ವೈರಾಗ್ಯ ಪರವಾದ ಭಾವವನ್ನು ಹೇಳುವ ಸಂದರ್ಭಗಳ ಮೇಲೆ ಪ್ರಭಾವ ಬೀರಿರುವುದನ್ನು ಗುರುತಿಸಬಹುದಾಗಿದೆ. ಈ ಶಾಸನದ ಪ್ರಭಾವ ಅನಂತರದ ಚಂಪೂ ಕವಿಗಳಾದ ಪಂಪ, ದುರ್ಗಸಿಂಹ, ಜನ್ನರ ಕಾವ್ಯಗಳಲ್ಲಿ ಗುರುತಿಸಬಹುದಾಗಿದೆ.

[4] ಟಿ. ಕೇಶವಭಟ್ಟ : ಒನಕೆವಾಡು, ಸಂಶೋಧನಾ ರತ್ನಮಾಲಿಕೆ ಪುಟ 143.
[5] E. C. Vol. II No. 88.

ಪಂಪನ ಆದಿಪುರಾಣದಲ್ಲಿ ವಜ್ರದಂತ ಮಹಾರಾಜನಿಗೆ ಸಂಸಾರದ ಬಗೆಗೆ ವೈರಾಗ್ಯ ಉಂಟಾದ ಸಂದರ್ಭವನ್ನು ನಿರೂಪಿಸಿರುವ ಪದ್ಯವು ಶ್ರವಣಬೆಳಗೊಳ ಶಾಸನದ ರೂಪಾಂತರವೇನೋ ಎಂಬಂತೆ ತೋರಿಬರುತ್ತದೆ.

*ತೃಣ ಶಿಖರಾದ್ಯುಷಿತಾಂಭಃ*

*ಕಣ ಸಂಚಲಮಮರ ಚಾಪ ಚಪಲಂ ವಿದ್ಯುತ್*

*ಕ್ಷಣಿಕಂ ನಿಟ್ಟೆಯೆ ತನುಭೃ*

*ದ್ಗಣ ಯೌವನ ರೂಪ ವಿಭವ ಭೋಗಾಭೋಗಂ (ಆ. ಪ್ರ. 4-75)*

ಅದೇ ರೀತಿ ಆದಿಪುರಾಣದ ನೀಲಾಂಜನೆಯ ನೃತ್ಯ ಸಂದರ್ಭದಲ್ಲಿ ಆದಿದೇವನಿಗೆ ವೈರಾಗ್ಯ ಉಂಟಾದ ಸನ್ನಿವೇಶವನ್ನು ನಿರೂಪಿಸಿರುವ ಪದ್ಯವನ್ನು ನೋಡಬಹುದು.

*ತನುರೂಪ ವಿಭವ ಯೌವನ*

*ಧನ ಸೌಭಾಗ್ಯಾಯುರಾದಿಗಳ್ಗೆಣೆ ಕುಚುಮಿಂ*

*ಚಿನಪೊಳಪು ಮುಗಿಲ ನೆಳಲಿಂದ್ರನ ಬಿಲ್ ಬೊಬ್ಬುಳಿಕೆಯುರ್ಬು ಪೆರ್ಚಿದ ಭೋಗಂ*

*(ಆ. ಪು. 9-46)*

ಆದಿಪುರಾಣದ ಈ ಎರಡು ಕಂದಪದ್ಯಗಳಲ್ಲಿ ಬದುಕಿನ ನಶ್ವರತೆಯನ್ನು ಸೂಚಿಸಲು ಕಾಮನಬಿಲ್ಲು, ಮಿಂಚಿನ ಹೊಳಪು, ಹುಲ್ಲ ಮೇಲಿನ ಹನಿ (ಮಂಜು) ಈ ಉಪಮೆ ರೂಪಕಗಳನ್ನೇ ಬಳಸಿರುವುದನ್ನು ಕಾಣಬಹುದು. ದುರ್ಗಸಿಂಹನ ಪಂಚತಂತ್ರದಲ್ಲಿಯೂ ಈ ಶಾಸನದ ಪ್ರಭಾವವನ್ನು ಗುರುತಿಸಬಹುದು.

*ಅನಿಮಿಷ ಚಾಪದಂತೆ ಸಿರಿ, ಶಾರದ ನೀರದ ಕಾಂತಿಯಂತೆ ಯೌ*

*ವನ ದೆಸಕಂ ತೃಣಾಗ್ರಗತವಾಃ ಕಣಿ ಕಾಗಣದಂತೆ ಸಂದ ಜೀ*

*ವನ ಮದದಿಂ ಭವಪ್ರಭವ ಜೀವಿಗೆ ನಿರ್ಮಲ ಧರ್ಮಮಾರ್ಗದೊಳ್*

*ಮನಮೊಸೆದಾಗಳುಂ ನಡೆಯವೇಳ್ವುದು ವಿಶ್ವಮೃಗೇಂದ್ರ ವಲ್ಲಭಾ*

*(ಭೇದ ಪ್ರಕರಣ ಪದ್ಯ 116)*

ಮನುಷ್ಯನ ಜೀವನ ಹಾಗೂ ಅದರ ಸುಖಭೋಗಗಳು ನಶ್ವರವೆಂಬುದನ್ನು ಸಂಕೇತಿಸುವ ಸುರಚಾಪ (ಕಾಮನಬಿಲ್ಲು) ಮಿಂಚಿನಬಳ್ಳಿ (ವಿದ್ಯುಲ್ಲತೆ) ಮಂಜಿನ ಹನಿ ಇತ್ಯಾದಿ ರೂಪಕಗಳು ಶ್ರವಣಬೆಳ್ಗೊಳ ಶಾಸನದಲ್ಲಿ ಕಾವ್ಯಮಯವಾಗಿ ಅಭಿವ್ಯಕ್ತಿಗೊಂಡಿದ್ದು ಈ ಅಭಿವ್ಯಕ್ತಿಯ ಸೊಗಸು ಅನಂತರದ ಕನ್ನಡದ ಪ್ರಮುಖ ಚಂಪೂ ಕವಿಗಳಾದ ಪಂಪ, ದುರ್ಗಸಿಂಹ ಹಾಗೂ ಜನ್ನರ ಕಾವ್ಯಗಳಲ್ಲಿ ಅನುರಣನ ಗೊಂಡಿರುವುದನ್ನು ಮನಗಂಡರೆ ಕ್ರಿ. ಶ. 7ನೆಯ ಶತಮಾನದ ಈ ಶಾಸನದಲ್ಲಿಯ ಪದ್ಯ ಸಾಹಿತ್ಯದ ದೃಷ್ಟಿಯಿಂದ ಮಹತ್ತರವಾದುದು ಎಂದೆನಿಸುತ್ತದೆ.

ಈ ಶಾಸನಗಳನ್ನು ಗಮನಿಸಿ ಹೇಳುವುದಾದರೆ, ಕನ್ನಡ ಸಾಹಿತ್ಯದ ಇತಿಹಾಸವನ್ನು ಕ್ರಿ. ಶ. 650ಕ್ಕಿಂತ ಹಿಂದಕ್ಕೆ ತೆಗೆದುಕೊಂಡು ಹೋಗಲು ಸಾಧ್ಯವಾಗಲಾರದು. ಅದಕ್ಕಿಂತ ಪೂರ್ವದಲ್ಲಿ ಪದ್ಯಕಾವ್ಯಗಳು ಹುಟ್ಟಿದ್ದರೆ ಪದ್ಯರೂಪವಾದ ಕೆಲವು ಶಾಸನಗಳು ದೊರಕುತ್ತಿದ್ದವು. ಗದ್ಯಕೃತಿಗಳು ಹುಟ್ಟಿದ್ದರೆ ಒಳ್ಳೆಯ ಗದ್ಯವು ಶಾಸನಗಳಲ್ಲಿ ದೊರೆಯುತ್ತಿತ್ತು. ಕವಿರಾಜಮಾರ್ಗದಲ್ಲಿ ಉಲ್ಲೇಖಿಸಿರುವ ಕನ್ನಡ ಪದ್ಯ-ಗದ್ಯ ಕವಿಗಳು 7ನೆಯ ಶತಮಾನಕ್ಕಿಂತ ಈಚಿನವರು ಎಂಬುದು ಶಾಸನಗಳಿಂದ ತಿಳಿದುಬರುತ್ತದೆ. ಕವಿರಾಜಮಾರ್ಗದಲ್ಲಿ ದುರ್ವಿನೀತನೆಂಬ ಗದ್ಯಕವಿಯ ಉಲ್ಲೇಖ ಇದೆ.[6] ಈತನು ರಚಿಸಿರುವ ಕೃತಿಗಳ ಬಗೆಗೆ ಶಾಸನಗಳನ್ನೇ ಆಶ್ರಯಿಸಬೇಕಾಗಿದೆ. ಗಂಗರ ತಾಮ್ರ ಶಾಸನಗಳಲ್ಲಿ ದುರ್ವಿನೀತನು ಭಾರವಿಯ ಕಿರಾತಾರ್ಜುನೀಯದ 15ನೇ ಸರ್ಗದ ಮೇಲೆ ಟೀಕೆಯನ್ನು ಬರೆದಿರುವ ಸಂಗತಿಯು ನಿಲ್ಲಾಲ ತಾಮ್ರಪಟದ "ಕಿರಾತಾರ್ಜುನೀಯ ಪಂಚದಶಸರ್ಗ ಟೀಕಾ ಕಾರೋ ದುರ್ವಿನೀತ ನಾಮಧೇಯ" ಎಂಬ ಉಲ್ಲೇಖದಿಂದ ತಿಳಿದುಬರುತ್ತದೆ. ಗುಮ್ಮರೆಡ್ಡಿಪುರ ಶಾಸನದಲ್ಲಿ "ಶಬ್ದಾವತಾರ ಕಾರೇಣ, ದೇವ ಭಾರತಿ ನಿಬದ್ಧ ವಡ್ಡ ಕಥೇನ, ಕಿರಾತಾರ್ಜುನೀಯೇ ಪಂಚದಶ ಸರ್ಗ ಟೀಕಾಕಾರೇಣ ದುರ್ವಿನೀತ ನಾಮಧೇಯೇನ" ಎಂದಿದೆ.[7] ದುರ್ವಿನೀತನು ಶಬ್ದಾವತಾರ ವ್ಯಾಕರಣ ಸಂಬಂಧಿ ಕೃತಿಯನ್ನು ರಚಿಸಿದ್ದಲ್ಲದೆ ಪೈಶಾಚಿ ಭಾಷೆಯಲ್ಲಿದ್ದ ಗುಣಾಢ್ಯನ ವಡ್ಡ ಕಥೆಯನ್ನು ಸಂಸ್ಕೃತಕ್ಕೆ ಅನುವಾದಿಸಿದ್ದನೆಂದು ತಿಳಿದು ಬರುತ್ತದೆ. ಕಿರಾತಾರ್ಜುನೀಯದ ಹದಿನೈದನೆಯ ಸರ್ಗಕ್ಕೆ ಅವನು ಬರೆದ ಟೀಕೆ ಕನ್ನಡದಲ್ಲಿದ್ದಿತ್ತೆ ಅಥವಾ ಸಂಸ್ಕೃತದಲ್ಲಿದ್ದಿತ್ತೆ ಎಂಬ ವಿಷಯ ಸಂಶೋಧಕರ ಚರ್ಚೆಯಾಗಿಯೇ ಉಳಿದಿದೆ.

ಕನ್ನಡದಲ್ಲಿ ಕಾವ್ಯಗಳನ್ನು ಬರೆದು ಪ್ರಸಿದ್ಧರಾಗಿರುವ ಕೆಲವು ಕವಿಗಳು ರಚಿಸಿರುವ ಅನೇಕ ಶಾಸನಗಳು ದೊರೆತಿವೆ. ಅತ್ತಿಮಬ್ಬೆಯ ಸದ್ಗುಣ ಔದಾರ್ಯಾದಿಗಳನ್ನು ಪ್ರಶಂಸಿಸಿರುವ ಲಕ್ಕುಂಡಿಯ ಶಾಸನವನ್ನು ಕವಿರನ್ನ ಬರೆದಿದ್ದಾನೆ. ಅಜಿತನಾಥಪುರಾಣದ ಉನ್ನತ ಕುಕ್ಕುಟೇಶ್ವರ ಹಾಗೂ ಜಿನಪದ ಭ್ರಮರ ಎಂದು ಪ್ರಾರಂಭವಾಗುವ ಪದ್ಯಗಳು ಈ ಶಾಸನದಲ್ಲಿ ಕಂಡುಬರುತ್ತವೆ. ಶಾಂತಿನಾಥನು ಕ್ರಿ. ಶ. 1068ರ ಶಿಕಾರಿಪುರದ 136ನೇ ಸಂಖ್ಯೆಯ ಶಾಸನವನ್ನು ಬರೆದಿದ್ದಾನೆ. ನಾಗಚಂದ್ರನ ಪಂಪರಾಮಾಯಣದ 1-39, 6-48, 1-45 ಪದ್ಯಗಳು ಬಿಜಾಪುರ ಶಾಸನದಲ್ಲಿರುವುದರಿಂದ ಕ್ರಿ. ಶ. 1074ರ ಬಿಜಾಪುರ ಶಾಸನ ಹಾಗೂ ಶ್ರವಣಬೆಳ್ಗೊಳ ಶಾಸನಗಳಲ್ಲಿಯೂ ಈತನ ಕಾವ್ಯಗಳಲ್ಲಿಯ ಪದ್ಯಗಳು ಕಂಡುಬರುವುದರಿಂದ ಶ್ರವಣ ಬೆಳ್ಗೊಳದ ನಾಲ್ಕು ಶಾಸನಗಳನ್ನು ನಾಗಚಂದ್ರನೇ ರಚಿಸಿದ್ದಾನೆಂದು ತಿಳಿಯಬಹುದು. ಪಾರ್ಶ್ವನಾಥನು ಗೋಕಾಕ ತಾಲ್ಲೂಕಿನ ಕಲ್ಲಹೊಳೆ ಬಸದಿಯ ಮೇಲಿನ ಶಾಸನವನ್ನು, ಮಧುರನು ಹಂಪೆಯ ಕೃಷ್ಣಸ್ವಾಮಿ ದೇವಾಲಯದ

---

[6] ಶ್ರೀವಿಜಯಕೃತ ಕವಿರಾಜಮಾರ್ಗ (ಸಂ॥ ಎಂ. ವಿ. ಸೀತಾರಾಮಯ್ಯ) 1-29 ಪುಟ 9.
[7] ಉದ್ಧೃತ ಎಂ. ಚಿದಾನಂದಮೂರ್ತಿ : ಹೊಸತು ಹೊಸತು : ಪುಟ-9.

ಪೂರ್ವಕ್ಕಿರುವ ಶಾಸನವನ್ನು, ತಿರುಮಲಾರ್ಯನು ಶ್ರೀರಂಗಪಟ್ಟಣದ 13ನೇ ಸಂಖ್ಯೆಯ ಶಾಸನಗಳನ್ನು ಬರೆದಿದ್ದಾರೆ. ಈ ಶಾಸನಗಳು ಇವರ ಕಾಲವನ್ನು, ಕಾವ್ಯಗಳನ್ನು ಅರ್ಥೈಸಲು ಕಾರಣವಾಗಿವೆ. ನಿದರ್ಶನಕ್ಕೆ ಜನ್ನನು ರಚಿಸಿರುವ ಶಾಸನಗಳನ್ನು ಉದಾಹರಿಸಬಹುದು. ಜನ್ನನ ಎರಡು ಕೃತಿಗಳು ಯಶೋಧರ ಚರಿತೆ (ಕ್ರಿ. ಶ. 1209), ಅನಂತನಾಥಪುರಾಣ ಕ್ರಿ. ಶ. 1230ರಲ್ಲಿ ಹುಟ್ಟಿವೆ. ಜನ್ನನು ಬರೆದಿರುವ ನಾಲ್ಕು ಶಾಸನಗಳು ದೊರೆತಿವೆ. ಚನ್ನರಾಯಪಟ್ಟಣದ 179ನೇ ಸಂಖ್ಯೆಯ ಶಾಸನವನ್ನು ಕ್ರಿ. ಶ. 1191ರಲ್ಲೂ ತರೀಕೆರೆಯ (ಅಮೃತಾಪುರ) 42, 45 ಮತ್ತು 68ನೆಯ ಸಂಖ್ಯೆಯ ಶಾಸನಗಳನ್ನು ಕ್ರಿ. ಶ. 1196ರಲ್ಲಿ ರಚಿಸಿದ್ದಾನೆ. ಇವು ಜನ್ನನ ಕಾವ್ಯಗಳ ಶೈಲಿಯ ವಿಕಾಸದ ನಿರೂಪಣೆಗೆ ಸಾಕ್ಷೀಭೂತವಾಗಿವೆ. ಚನ್ನರಾಯಪಟ್ಟಣದ ಶಾಸನ ತೀರಾ ಸಪ್ಪೆ. ಅಮೃತಾಪುರದ ಶಾಸನಗಳನ್ನು ಬರೆಯುವ ವೇಳೆಗೆ ಜನ್ನ ತನ್ನ ಕಾವ್ಯದ ಶೈಲಿಯನ್ನು ಉತ್ತಮ ಪಡಿಸಿಕೊಂಡಿದ್ದನೆಂಬುದು ಅಮೃತಾಪುರ ಶಾಸನಗಳಿಂದ ತಿಳಿದು ಬರುತ್ತದೆ. ಅಮೃತಾಪುರದ ಶಾಸನ ಒಂದು ಚಿಕ್ಕ ಚಂಪೂಕಾವ್ಯ. ಈ ಶಾಸನದಲ್ಲಿ ಬರುವ ವೀರಗಜದ ವರ್ಣನೆ ಸುಗ್ಗಿಯಕ್ಕ ಮತ್ತು ಅಮಿತ ದಂಡಾಧಿಪನ ವ್ಯಕ್ತಿತ್ವಗಳ ನಿರೂಪಣೆ ಸೊಗಸಾಗಿವೆ. ಈ ಶಾಸನದ ಮೊರಡಿಯ ಮೇಲೆ ಮಾದುಫಲವೋಲಾದುದು ತೀವಿನಿಂದ ಪೆರ್ಗರೆ ಎಂಬ ಮಾತು ಯಶೋಧರ ಚರಿತೆಯ ಉಕ್ತಿಯೊಂದನ್ನು ನೆನಪಿಗೆ ತರುತ್ತದೆ. ಜನ್ನ ಮೊದಮೊದಲು ಹೊಯ್ಸಳ ರಾಜ್ಯದ ಅಧಿಕಾರಿಗಳ, ದಂಡನಾಥರ ವಿಶ್ವಾಸವನ್ನು ಪಡೆದು ಕ್ರಮೇಣ ಹೊಯ್ಸಳ ಚಕ್ರವರ್ತಿಯ ಆಸ್ಥಾನ ಕವಿಯಾಗಿ ಮೇಲೇರಿದ ಒಂದು ಸ್ಥೂಲ ಚಿತ್ರಣವನ್ನು ಕಟ್ಟಿಕೊಳ್ಳಲು ಶಾಸನಗಳು ಸಹಾಯ ಮಾಡುತ್ತವೆ.[8] ಜನ್ನನು ಬರೆದ ಶಾಸನಗಳ ವಸ್ತು ಮತ್ತು ಕಾವ್ಯಗಳ ವಸ್ತು ಬೇರೆ ಬೇರೆಯಾದರೂ ವರ್ಣನಾಚಾತುರ್ಯ ಮತ್ತು ವ್ಯಕ್ತಿಗಳ ಸ್ವಭಾವ ಚಿತ್ರಣ ಶಾಸನ ಮತ್ತು ಕಾವ್ಯಗಳಲ್ಲಿ ಒಂದೇ ಪ್ರಕಾರದ್ದಿದೆಯೆಂದು ಹೇಳಬಹುದು. ಜನ್ನನು ಮಹಾಕಾವ್ಯಗಳನ್ನು ಬರೆಯಬಲ್ಲನೆಂಬ ಕುರುಹು ಅವನು ರಚಿಸಿದ ಶಾಸನಗಳಲ್ಲಿಯೇ ಗೋಚರವಾಗುತ್ತದೆ. ಜನ್ನನ ವೈಯಕ್ತಿಕ ಜೀವನದ ಬಗೆಗೆ, ಕಾವ್ಯಶೈಲಿಯ ವಿಕಾಸದ ಚಿತ್ರಣವನ್ನು ಕಲ್ಪಿಸಿಕೊಳ್ಳಲು ಸಾಮಗ್ರಿಯನ್ನು ಒದಗಿಸಿರುವುದರಿಂದ ಜನ್ನನ ಸಮಗ್ರ ಅಧ್ಯಯನದಲ್ಲಿ ಶಾಸನಗಳು ಪ್ರಮುಖ ಆಕರಗಳಾಗಿ ಕೆಲಸ ಮಾಡಿವೆ.

ಅನೇಕ ಕವಿಗಳಿಗೆ ಸಂಬಂಧಿಸಿದ ಕೆಲವು ವೈಯಕ್ತಿಕ ಸಂಗತಿಗಳು ಶಾಸನಗಳಲ್ಲಿ ದೊರೆಯುತ್ತವೆ. ಕ್ರಿ. ಶ. 950ರ ಜಿನವಲ್ಲಭನ ಕುರಿತ್ಯಾಲ ಶಾಸನವು ಪಂಪಕವಿಯನ್ನು ಅರ್ಥೈಸಲು ಸಹಾಯಕವಾಗಿದೆ.[9] ಈ ಶಾಸನ ದೊರೆಯುವುದಕ್ಕಿಂತ ಮೊದಲು ಪಂಪಕವಿಯ ಬಗೆಗೆ ಕೆಲವು ಸಂದೇಹಗಳಿದ್ದವು. ತಂದೆ ಭೀಮಪಯ್ಯನೋ ಅಭಿರಾಮದೇವರಾಯನೋ ಎಂಬ ಸಂದೇಹ ಇತ್ತು. ಸಂದೇಹ ಪರಿಹಾರವಾಯ್ತು. ತಂದೆ ಭೀಮಪಯ್ಯ, ತಾಯಿ ಅಬ್ಬಣಬ್ಬೆ, ತಮ್ಮ ಜಿನವಲ್ಲಭ, ತಾತ ಜೋಯಿಸಿಂಘ.

[8] ಎಂ. ಚಿದಾನಂದಮೂರ್ತಿ : ಸಂಶೋಧನಾ ತರಂಗ, ಸಂ. 2, ಪುಟ-201.
[9] ಪ್ರಬುದ್ಧ ಕರ್ಣಾಟಕ . ಸಂ. 50. ಸಂಪುಟ-3, ಪುಟ-23-41.

ತಾಯಿ ಕರ್ನಾಟಕದ ಬೆಳ್ವೊಲ ಪ್ರಾಂತದ ಅಣ್ಣಿಗೇರಿಯವಳು ಎಂಬ ಅಮೂಲ್ಯ ಸಂಗತಿ ಶಾಸನದಿಂದ ತಿಳಿದು ಬಂದಿತು. ವಿಕ್ರಮಾರ್ಜುನ ವಿಜಯ ಕೃತಿಯಲ್ಲಿಯ ಬನವಾಸಿಯ ವರ್ಣನೆಯಿಂದ ಪಂಪನಿಗೆ ಕನ್ನಡನಾಡಿನ ಪರಿಚಯವಿದ್ದಿತು ಎಂಬ ಊಹೆಯನ್ನು ಮಾಡಲಾಗಿತ್ತು. ಈ ಶಾಸನದಿಂದ ಅದು ಖಚಿತವಾಯ್ತು. ಪಂಪ ಹುಟ್ಟುವ ಮೊದಲು ಅವನ ಮನೆತನದವರು ವೈದಿಕರು ಆಗಿದ್ದರು. ಭೀಮಪಯ್ಯ ಜೈನಧರ್ಮವನ್ನು ಸ್ವೀಕರಿಸಿದ್ದು ಪಂಪ ಹುಟ್ಟಿದ ಮೇಲೆ, ಜಿನವಲ್ಲಭ ಹುಟ್ಟುವ ಮೊದಲು. ಪಂಪ ಪುಲಿಗೆರೆಯ ತಿರುಳ್ಗನ್ನಡದಲ್ಲಿ ಕಾವ್ಯ ಬರೆದಿದ್ದಾನೆಂಬ ಹೇಳಿಕೆಯನ್ನು ಅರ್ಥೈಸಲು ಸಹಾಯಕವಾಯಿತು. ಪಂಪಭಾರತವನ್ನು ಬರೆದಿದ್ದುದಕ್ಕೆ ಅರಿಕೇಸರಿಯು ಸನ್ಮಾನ ಮಾಡಿ ಶಾಸನ ಸಮೇತ ಧರ್ಮಪುರ ಅಗ್ರಹಾರವನ್ನು ದಯಪಾಲಿಸಿದುದಾಗಿ ಪಂಪಭಾರತದಿಂದ ತಿಳಿದುಬಂದಿತು. ಆ ಶಾಸನವು ಶಿಲಾ ಶಾಸನವಲ್ಲ, ತಾಮ್ರ ಶಾಸನ ಎಂಬುದು ಈ ಶಾಸನದಿಂದ ತಿಳಿದು ಬಂದಿತು.

ಬಸವಣ್ಣನವರ ವೈಯಕ್ತಿಕ ಚರಿತ್ರೆ, ಜನ್ಮಸ್ಥಳದ ಮೇಲೆ ಬೆಳಕು ಚೆಲ್ಲುವ ಹಾಗೂ ಬಸವರಾಜದೇವರ ರಗಳೆಯಲ್ಲಿ ಬಸವಣ್ಣನವರ ತಂದೆ, ಊರುಗಳ ಬಗೆಗೆ ಇದ್ದ ಸಂದೇಹಗಳನ್ನು ಹೋಗಲಾಡಿಸುವಲ್ಲಿ ಕ್ರಿ. ಶ. 1260ರ ಅರ್ಜುನವಾಡ ಶಾಸನ ಮಹತ್ತರ ಪಾತ್ರವನ್ನು ವಹಿಸಿದೆ.[10] ಈ ಶಾಸನದಲ್ಲಿ ನಿರೂಪಿತವಾಗಿರುವ ಬಸವಣ್ಣನವರಿಗೆ ಸಂಬಂಧಿಸಿದ ಸಂಗತಿಗಳು ಕಾವ್ಯಗಳಿಗಿಂತ ಪ್ರಾಚೀನವಾಗಿದ್ದು ವಿಶ್ವಸನೀಯವಾಗಿವೆ. ಈ ಶಾಸನದ ಮುಖ್ಯ ಭಾಗವಾದ

'ಮತ್ತಂ ತರ್ದವಾಡಿ ಮಧ್ಯಗ್ರಾಮ ಭಾಗವಾಡಿ ಪುರವರಾಧೀಶ್ವರ
ಮಾದಿರಾಜನ ತನೂಜಂ

ಬಸವರಾಜನ ಮಹಿಮೆಯೆಂತಂದಡೆ' ಎಂಬ ಸಂಗತಿಗಳು ಬಸವಣ್ಣನವರ ತಂದೆಯ ಹೆಸರು ಮತ್ತು ಜನ್ಮಸ್ಥಳದ ಬಗೆಗೆ ಸಂಶೋಧಕರು ಎತ್ತಿದ್ದ ಪ್ರಶ್ನೆಗಳನ್ನು ಹೋಗಲಾಡಿಸಿವೆ. ಬಸವಣ್ಣನವರ ವೈಯಕ್ತಿಕ ಸಂಗತಿಗಳ ಬಗೆಗೆ, ವಂಶಾವಳಿಯ ಬಗೆಗೆ ಸಂಬಂಧಪಟ್ಟ ಕೆಲವು ಹೊಸ ವಿಷಯಗಳನ್ನು ಹೊರಗೆಡವಿದ ಈ ಶಾಸನಕ್ಕೆ ಚಾರಿತ್ರಿಕ ಪ್ರಾಮುಖ್ಯತೆ ಸಂದಿದೆ.

ಸಂಗನ ಬಸವನ ಅಗ್ರಜ
ಲಿಂಗೈಕಂ ದೇವರಾಜ ಮುನಿಪನ ತನಯಂ
ಜಂಗಮ ಪರುಸಂ ಕಾವರ
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ

---

[10] ಎಂ. ಎಂ. ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು, ಪುಟ : 62-63.

ಎಂಬ ಶಾಸನ ಪದ್ಯದ ಉಲ್ಲೇಖದಿಂದ ಬಸವಣ್ಣನವರ ಅಣ್ಣನ ಹೆಸರು ದೇವರಾಜ, ಆತನ ಮಗ ಕಲಿದೇವ ಹಾಗೂ ಆತನ ಮಗ ಹಾಲಬಸವಿದೇವರ ವಿವರ ಮೊಟ್ಟಮೊದಲ ಬಾರಿಗೆ ಬೆಳಕಿಗೆ ಬಂದಿತು. ಈ ಶಾಸನದಲ್ಲಿ ಬಸವಣ್ಣನವರ ಮನೆತನದ ವಂಶಾವಳಿಯ ಒಳನೋಟವನ್ನು ಉಲ್ಲೇಖ ಮಾಡಿದೆ. ಈ ವಿವರ ಬಸವಣ್ಣನವರನ್ನು ಕುರಿತು ಅಪಾರ ಸಂಖ್ಯೆಯಲ್ಲಿ ರಚಿತವಾಗಿರುವ ವೀರಶೈವ ಕಾವ್ಯ-ಪುರಾಣಗಳಲ್ಲಿ ಎಲ್ಲಿಯೂ ವ್ಯಕ್ತವಾಗಿಲ್ಲ.

ಕೆಲವು ಕವಿಗಳ ಕಾವ್ಯಗಳ ಪದ್ಯಗಳು ಕೆಲವೊಂದು ಶಾಸನಗಳಲ್ಲಿ ದೊರೆಯುವುದರಿಂದ ಕವಿಗಳ ಜನ್ಮಸ್ಥಳ, ಕಾವ್ಯಗಳ ರಚನೆಯ ಕಾಲವನ್ನು ಅರ್ಥೈಸಲು ಸಹಾಯಕವಾಗಿವೆ.

ಪಂಪ ಪೂರ್ವಯುಗದ ಒಂದನೆಯ ಗುಣವರ್ಮನ ಅನುಪಲಬ್ಧ 'ಶೂದ್ರಕ' ಕಾವ್ಯದ ಸಮುದ್ರ ವರ್ಣನೆಯನ್ನು ಕುರಿತ

*ಗಂಭೀರ ಸ್ಫಾರವೇಳಾ ಬಹಳ ಪರಿವೃತೋಲ್ಲೋಲ ಕಲ್ಲೋಲಮಾಲಾ*
*ರಂಭ ಪ್ರೋಡ್ಡೀನ ಫೇನ ಪ್ರಬಳ ಜಲಚರೋಲ್ಲುಂಡ ಪಾಠೀನಶುಂಭ*
*ತ್ಕುಂಬೀರಾಭೀಳ ನಕ್ರಪ್ರಕರ ಕಮಠ ನೀರೇಭ ರತ್ನ ಪ್ರವಾಳೋ*
*ಜ್ಜೃಂಭತ್ಪ್ರೋದ್ಭಾಸಿ ವೀಚೀನಿಚಯ ಘನಘನಾರಾವ ರೌದ್ರಂ ಸಮುದ್ರಂ*

ಎಂದು ಪ್ರಾರಂಭವಾಗುವ ಪದ್ಯವು ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಮಾಗಳ ಶಾಸನ (ಕ್ರಿ. ಶ. 1214). ಕೂಡ್ಲಿಗಿ ತಾಲ್ಲೂಕಿನ ಬೆಣ್ಣೆ ಕಲ್ಲಿನ ಶಾಸನ (ಕ್ರಿ. ಶ. 1226) ಹಡಗಲಿ ತಾಲ್ಲೂಕಿನ ಸೋಗಿ ಶಾಸನ, ಹಾಸನ ಜಿಲ್ಲೆಯ ಶಿವರಗ್ರಾಮದ (ಕ್ರಿ. ಶ. 1223) ಶಾಸನಗಳಲ್ಲಿ ಕಂಡು ಬರುತ್ತದೆ. ಈ ಪದ್ಯವು ಕಾವ್ಯ ಸಂಕಲನ ಗ್ರಂಥಗಳಿಂದ ಸೂಕ್ತಿ ಸುಧಾರ್ಣವ ಹಾಗೂ ಕಾವ್ಯಸಾರಗಳಲ್ಲಿ ಕಂಡುಬರುತ್ತದೆಯಾದರೂ ಈ ಶಾಸನಗಳ ಪಾಠ ಪ್ರಾಚೀನವಾಗಿದ್ದು ಸುಮಾರು 780 ವರ್ಷಗಳ ಹಿಂದಿನ ರೂಪವನ್ನು ಉಳಿಸಿಕೊಂಡಿದ್ದು ಮೂಲಕ್ಕೆ ಸಮೀಪವಾಗಿದೆ. ಬಳ್ಳಾರಿ ಜಿಲ್ಲೆಯ ಹಡಗಲಿ ಮತ್ತು ಕೂಡ್ಲಗಿ ಪರಿಸರದಲ್ಲಿ ಶಾಸನಗಳಲ್ಲಿ ಈ ಪದ್ಯ ಬಂದಿರುವುದರಿಂದ ಈ ಪರಿಸರವು ಒಂದನೇ ಗುಣವರ್ಮನ ಜನ್ಮಸ್ಥಳವಾಗಿದ್ದಿರಬೇಕು ಅಥವಾ ಶಾಸನ ಕವಿಗಳಿಗೆ 'ಶೂದ್ರಕ' ಕಾವ್ಯದ ಪದ್ಯ ಪ್ರಿಯವಾಗಿರಬೇಕು ಎಂದೆನಿಸುತ್ತದೆ.

ಪಂಪನ ಆದಿಪುರಾಣದ ಪದ್ಯವೊಂದು ಬೇಲೂರಿನ ಆದಿನಾಥ ಬಸ್ತಿಯ ಗರ್ಭಾಂಕಣದ ಬಾಗಿಲುವಾಡ ಮೇಲಿನ ಕ್ರಿ. ಶ. 1138ರ ಶಾಸನದಲ್ಲಿ ಕಂಡುಬರುತ್ತದೆ.[11]

---

[11] E. C. Vol. XV ನಂ. 335, ಪುಟ : 87

ಮುನಿಜನದೋದಿಸಿದೋಜೆಯ
ಲನುವದಿಪುದಿದೊಂದೆ ಕೊಣ್ಡಕುಂದಾನ್ವಯನ
ನ್ದನವನ ಶುಕವೆಂದೆನಗಿನಿ
ತನನುಗ್ರಹಂ ಗೆಯ್ಗೆ ಕರುಣದಿಮ್ಮುನಿನಿವಹಂ

ಈ ಉಲ್ಲೇಖದಿಂದ ಕ್ರಿ. ಶ 1138ರ ವೇಳೆಗಾಗಲೇ ಶಾಸನದಲ್ಲಿ ಸ್ಥಾನ ಪಡೆಯುವಷ್ಟರ ಮಟ್ಟಿಗೆ ಪ್ರಸಿದ್ಧವಾಗಿದ್ದವು ಎಂಬುದಾಗಿ ತಿಳಿದುಬರುತ್ತದೆ.[12]

ಪಂಪಭಾರತದಲ್ಲಿಯ 5 ಕಂದ ಪದ್ಯಗಳು ಕ್ರಿ. ಶ. 946ರ ಕರೀಂನಗರದ ಇಮ್ಮಡಿ ಅರಿಕೇಸರಿಯ ಶಾಸನದಲ್ಲಿ ಉದ್ಧೃತವಾಗಿರುವುದರ ಆಧಾರದ ಮೇಲೆ ಪಂಪಭಾರತದ ರಚನಾ ಕಾಲವನ್ನು ಸಂಶೋಧಕರು ಕರಾರುವಾಕ್ಕಾಗಿ ಗುರುತಿಸಿದ್ದಾರೆ. ಆದಿಪುರಾಣದ ರಚನಾಕಾಲ ಗೋವಿಂದ ಪೈ ಅವರ ಪ್ರಕಾರ 16-10-942. ಮೂರು ತಿಂಗಳಲ್ಲಿ ಆದಿಪುರಾಣವನ್ನು, ಆರು ತಿಂಗಳಲ್ಲಿ ವಿಕ್ರಮಾರ್ಜುನ ವಿಜಯವನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. ಪಂಪಭಾರತದ ರಚನಾಕಾಲವನ್ನು ತಿಳಿಸಿಲ್ಲವಾದರೂ ಆದಿಪುರಾಣ ರಚಿಸಿದ ವರ್ಷದಲ್ಲಿಯೇ ರಚಿಸಿದ್ದಾನೆ. 16-10-942ರಿಂದ ಕ್ರಿ. ಶ. 946ರ ನಡುವೆ ಪಂಪಭಾರತ ರಚನೆಯಾಗಿದೆ ಎಂದು ನಿಶ್ಚಿತವಾಗಿ ಹೇಳಬಹುದು. ಕ್ರಿ. ಶ. 943-44ರಲ್ಲಿ ಇದ್ದಿರಬೇಕು.[13]

ಶಾಂತಿನಾಥನ ಕ್ರಿ. ಶ. 1068ರ ಶಿಕಾರಿಪುರದ 136ನೇ ಶಾಸನದಲ್ಲಿಯೇ ಸುಕುಮಾರಚರಿತದ ಪ್ರಸ್ತಾಪ ಬರುವುದರಿಂದ ಹಾಗೂ ಈ ಶಾಸನದಲ್ಲಿಯೇ ಸುಕುಮಾರಚರಿತ ಚಂಪೂಕಾವ್ಯದ ಸುಮಾರು 59 ಪದ್ಯಗಳು ಅಲ್ಪಸ್ವಲ್ಪ ವ್ಯತ್ಯಾಸದೊಡನೆ ಕಂಡು ಬರುವುದರಿಂದ ಕ್ರಿ. ಶ. 1066-67ರ ವೇಳೆಗೆ[14] ಸುಕುಮಾರ ಚರಿತವನ್ನು ರಚಿಸಿದ್ದ ಎಂಬುದಾಗಿ ಭಾವಿಸಬಹುದಾಗಿದೆ. ಸೋಮರಾಜನ ಉದ್ಭಟ ಕಾವ್ಯವನ್ನು ಕ್ರಿ. ಶ. 1340ರ ಬೇಲೂರು ಶಾಸನದಿಂದ ನಿರ್ಧರಿಸಬಹುದಾಗಿದೆ. ಉದ್ಭಟ ಕಾವ್ಯದ 'ಶಿವನೆಂದುತ್ತಮ ಶೈವರ್' ಎಂದು ಪ್ರಾರಂಭವಾಗುವ ಪದ್ಯವು ಕ್ರಿ. ಶ. 1340 ಬೇಲೂರು ಶಾಸನದಲ್ಲಿಯ 'ಯಂ ಶೈವಾಸ್ಸಮುಪಾಸತೇ...' ಎಂಬ ಸಂಸ್ಕೃತ ವೃತ್ತದ ಅಭಿಪ್ರಾಯವನ್ನೇ ಒಳಗೊಂಡಿರುವುದು ವ್ಯಕ್ತವಾಗುತ್ತದೆ. ಸೋಮರಾಜನು ಆ ಶಾಸನ ಪದ್ಯಕ್ಕೆ ಮಾರು ಹೋಗಿ ಅದೇ ಅಭಿಪ್ರಾಯವನ್ನು ತನ್ನ ಕಾವ್ಯದಲ್ಲಿ ವ್ಯಕ್ತ ಪಡಿಸಿದ್ದಾನೆ.

ಕವಿಗಳ ಕಾಲ ನಿರ್ಣಯದಲ್ಲಿ ಶಾಸನಗಳು ಎಷ್ಟರಮಟ್ಟಿಗೆ ನೆರವು ನೀಡಿವೆ ಎಂಬುದಕ್ಕೆ ಎ. ವೆಂಕಟಸುಬ್ಬಯ್ಯನವರ 'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ',

---

[12] ಎಂ. ಎಂ. ಕಲಬುರ್ಗಿ : ಮಾರ್ಗ, ಸಂ. 2, ಪುಟ : 41
[13] ಎಂ. ಚಿದಾನಂದಮೂರ್ತಿ : ಹೊಸತು ಹೊಸತು, ಪುಟ : 53
[14] ಅದೇ ಪುಟ : 255

ಗೋವಿಂದ ಪೈಯವರ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಸಂಶೋಧನ ಲೇಖನಗಳು, ಆರ್. ನರಸಿಂಹಾಚಾರ್ಯರ ಕವಿಚರಿತೆಯ ಮೂರು ಸಂಪುಟಗಳು, ಮೈಸೂರು ವಿಶ್ವವಿದ್ಯಾಲಯ ಮತ್ತು ಬೆಂಗಳೂರು ವಿಶ್ವವಿದ್ಯಾಲಯದ ಸಾಂಸ್ಥಿಕ ಸಾಹಿತ್ಯ ಚರಿತ್ರೆಯ ಸಂಪುಟಗಳು, ಪ್ರಬುದ್ಧ ಕರ್ಣಾಟಕ, ಸಾಧನೆ, ಕರ್ನಾಟಕ ಲೋಚನ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಇತ್ಯಾದಿ ನಿಯತ ಕಾಲಿಕೆಗಳಲ್ಲಿಯ ಲೇಖನಗಳನ್ನು ಪರಿಶೀಲಿಸಿದರೆ ಗೊತ್ತಾಗುತ್ತದೆ.

ಬಸವಣ್ಣನವರ ಜೀವಿತಾವಧಿಯ ಕಾಲವನ್ನು ಶಾಸನಗಳಲ್ಲಿಯ ಪೂರಕ ಮಾಹಿತಿಗಳಿಂದ ಕ್ರಿ. ಶ. 1167ಕ್ಕೆ ಬದಲಾಗಿ 1185-86 ಎಂದು ಸುಮಾರು 19 ವರ್ಷಗಳಷ್ಟು ಮುಂದಕ್ಕೆ ಹಾಕಲಾಗಿದೆ. ಬಸವಣ್ಣನವರ ಸಮಕಾಲೀನರೂ ಅನುಯಾಯಿಗಳೂ, ಸಮವಯಸ್ಕರೂ ಆದ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಕೊನೆಯ ಶಾಸನ ಕ್ರಿ. ಶ. 1187ರಲ್ಲಿ ತೆಲಂಗಾಣದಲ್ಲಿ ದೊರೆತಿದೆ. ಹೀಗಾಗಿ ಬಸವಣ್ಣನವರು ಕ್ರಿ. ಶ. 1187ರವರೆಗೂ ಬದುಕಿದ್ದರು ಎಂದು ತಿಳಿದುಬರುತ್ತದೆ. ಬಸವಣ್ಣನವರ ಅಭಿಮಾನಿ ಮತ್ತು ಅನುಯಾಯಿಯಾದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಐಕ್ಯರಾಗುವುದಕ್ಕೆ ಒಂದು ವರ್ಷ ಮುಂಚೆ ಬಸವಣ್ಣನವರು ಐಕ್ಯರಾದರೆಂದು ಪಂಡಿತಾರಾಧ್ಯರ ಚರಿತ್ರೆಯಿಂದ ತಿಳಿಯಬಹುದಾಗಿದೆ. ತೆಲಂಗಾಣ ಶಾಸನದಲ್ಲಿಯ ಉಲ್ಲೇಖದಿಂದ ಕ್ರಿ. ಶ. 1187ರಲ್ಲಿ ಪಂಡಿತಾರಾಧ್ಯರು ಐಕ್ಯರಾದರು ಎಂದು ತಿಳಿದುಬರುವುದರಿಂದ ಅವರ ಸಮಕಾಲೀನರಾದ ಬಸವಣ್ಣನವರು ಕ್ರಿ. ಶ. 1185-86ರವರೆಗೂ ಬದುಕಿದ್ದರು ಎಂಬುದಾಗಿ ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. ಹೀಗಾಗಿ ಬಸವಣ್ಣನವರ ಜೀವಿತದ ಪರಮಾವಧಿಯ ಕಾಲ ಕ್ರಿ. ಶ. 1167ಕ್ಕೆ ಬದಲಾಗಿ ಕ್ರಿ. ಶ. 1185-86 ಎಂದು ಇಟ್ಟುಕೊಳ್ಳಬಹುದಾಗಿದೆ.[15]

ಅದೇ ರೀತಿ ಹರಿಹರ ಕವಿಯ 'ಮನುಜರ ಮೇಲೆ, ಸಾವವರ ಮೇಲೆ....' ಎಂಬ ಪದ್ಯವು ಕ್ರಿ. ಶ. 1210ರ ಬಳ್ಳಾರಿ ಶಾಸನದ ಮೇಲಾಗಿರುವುದನ್ನು ಗುರುತಿಸಬಹುದಾಗಿದೆ.

*ಶಿವನಿಂದಂ ಪೆರತೊಂದು ದೈವಮಧಿಕಂ ತಾನುಂಟೆ ಸರ್ವೇಶನಂ*
*ಭವನಂ ಪೂಜಿಸಿ ಕೈಗಳಂ ಮುಗಿದು ಮುಕ್ತಿಶ್ರೀಗೆ ಪಕ್ಕಾಗದೇ*
*ಕೆ ವೃಥಾ ಕೆಟ್ಟಪಿರೇಕೆ ಚೋರ ನರಕಂ ಬೋಕಪ್ಪ ನರಕದಂತೆ ಮಾ*
*ನವರೇ ಪೊಯ್ಕನೆ ಪಾಱುಗುಂ ಪಾಱುಗುಂ ಡಮರುಗಧ್ವಾನಂ*[16]

ಹರಿಹರ ಕವಿಯಿಂದ ಈ ಶಾಸನಕವಿ ಪ್ರಭಾವಿತನಾಗಿರುವ ಸಾಧ್ಯತೆ ಇರುವುದರಿಂದ ಹರಿಹರ ಕವಿಯ ಕಾಲವನ್ನು ಈಗಿರುವ ಕಾಲಕ್ಕಿಂತ ಹಿಂದಕ್ಕೆ

---

[15] ಇತಿಹಾಸ ದರ್ಶನ : ಸಂ|| ಎಂ. ಜಿ. ನಾಗರಾಜು, ಪಿ. ವಿ. ಕೃಷ್ಣಮೂರ್ತಿ, ಸಂ-14, ಪುಟ : 212.
[16] ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ - ೧, ಬಳ್ಳಾರಿ - 24, ಪುಟ : 36.

ಹಾಕಬಹುದೇನೋ ಎಂದೆನಿಸುತ್ತದೆ. ವಚನಕಾರರಾದ ಏಕಾಂತದ ರಾಮಯ್ಯ ಮತ್ತು ಆದಯ್ಯರ ಕಾಲವನ್ನು ಬಸವೋತ್ತರ ಯುಗದಲ್ಲಿ ವಿದ್ವಾಂಸರು ಗುರುತಿಸಿದ್ದರು. ಅವರೀರ್ವರಿಗೆ ಸಂಬಂಧಿಸಿದ ಅಬ್ಬಲೂರು, ತಾಳಿಕೋಟೆ, ಕುಡುತಿನಿ, ಬಂದಳಿಕೆ ಹಾಗೂ ಪುಲಿಗೆರೆ ಶಾಸನಗಳಲ್ಲಿಯ ಉಲ್ಲೇಖಗಳಿಂದ ಬಸವ ಪೂರ್ವ ಯುಗದ ಕೊನೆಯ ಭಾಗದಿಂದಲೂ ಜೀವಿಸಿದ್ದು ಬಸವಣ್ಣನವರ ಹಿರಿಯ ಸಮಕಾಲೀನರು ಎಂಬುದಾಗಿ ತಿಳಿದುಬಂದಿದೆ.

ಕೆಲವು ಕವಿಗಳು ಕಾವ್ಯಗಳನ್ನು ಬರೆದಿರುವುದರ ಬಗೆಗೆ ಶಾಸನಗಳಲ್ಲಿ ಉಲ್ಲೇಖ ಇದೆ. ಅವು ಉಪಲಬ್ಧವಿಲ್ಲ. ಗಂಗದೊರೆ ಸೈಗೊಟ್ಟ ಶಿವಮಾರನು ಗಜಮತ ಕಲ್ಪನಾ (ಸಂಸ್ಕೃತ) ಶಿವಮಾರಮತ ಅಥವಾ ಗಜಾಷ್ಟಕ (ಕನ್ನಡ) ಸೇತುಬಂಧ (ಪ್ರಾಕೃತ) ಕೃತಿಗಳನ್ನು ರಚಿಸಿದ್ದಾನೆಂದು ಹುಂಚ ಹಾಗೂ ನೆಲಮಂಗಲ ತಾಲ್ಲೂಕಿನ ಮಣ್ಣೆ ಶಾಸನಗಳಿಂದ ತಿಳಿದು ಬರುತ್ತದೆ. ಸಂಸ್ಕೃತ ಕೃತಿ ಮಾತ್ರ ಉಪಲಬ್ಧ. ಗಜಾಷ್ಟಕವು ಕನ್ನಡದ ಮೊಟ್ಟಮೊದಲ ಅಷ್ಟಕ ಕೃತಿ. ಆದರೆ ಲಭ್ಯವಿಲ್ಲ. ಇಮ್ಮಡಿ ಪ್ರೌಢದೇವರಾಯನ ಮಂತ್ರಿಯಾಗಿದ್ದ ಲಕ್ಷ್ಮೀಧರನು ನೀತಿವಾಕ್ಯಾಮೃತ, ರಾಮಾಯಣ, ಕೃಷ್ಣ ಲೀಲೆಗಳನ್ನು ಬರೆದನೆಂದು ಮಧುರ ಕವಿ ತಾನು ರಚಿಸಿದ ಶಾಸನದಲ್ಲಿ ಹೇಳಿದ್ದಾನೆ. ಇವು ಉಪಲಬ್ಧವಿಲ್ಲ. ಎಷ್ಟೋ ಶಾಸನ ಕವಿಗಳು ಬರೆದಿರಬಹುದಾದ ಕಾವ್ಯಗಳು ದೊರಕದಿದ್ದರೂ ಅವರು ಬರೆದಿರುವ ಪುಟ್ಟ ಕಾವ್ಯಗಳಂತಹ ಶಾಸನಗಳು ದೊರೆತಿವೆ. ಉದಾ॥ ಬೊಪ್ಪಣ್ಣ ಕವಿಯ ಗೊಮ್ಮಟ ಸ್ತುತಿ. ಸಜ್ಜನ ತಿಳಕನ ಶಿರಸಂಗಿ ಶಾಸನ, ಕೇಶವ ಚಮೂಪನ ಅಬ್ಬಲೂರು ಶಾಸನ, ಸೊಲ್ಲಾಪುರ ಜಿಲ್ಲೆಯಲ್ಲಿಯ 40ನೇ ಸಂಖ್ಯೆಯ ಶಾಸನವು 'ವಿವಾಹ ಪುರಾಣ' ಎಂಬ ಹೆಸರಿನ ಶಿವಪಾರ್ವತಿಯರ ವಿವಾಹದ ವರ್ಣನೆ ಇರುವ ಕಾವ್ಯವನ್ನು ಒಳಗೊಂಡಿದೆ. ಇದರ ಕಾಲ ಕ್ರಿ. ಶ. 1200. ಈ ಶಾಸನದಲ್ಲಿ ಉಕ್ತವಾದ ವಿವಾಹ ಪುರಾಣ ಕಾವ್ಯವು ಕನ್ನಡದ ಮೊಟ್ಟ ಮೊದಲ ಅಂಶಷಟ್ಪದ ಕಾವ್ಯ[17]ವಾಗಿದೆ.

ಯಾವುದೇ ಶತಮಾನದ ಸಾಹಿತ್ಯದ ಅಧ್ಯಯನಕ್ಕೆ ಹಿನ್ನಲೆಯಾದ ಸಾಮಾಜಿಕ ಜೀವನವನ್ನು ಅರಿಯಲು ನಮಗೆ ಶಾಸನಗಳು ಇತರೆ ಸಾಧನ ಸಾಮಗ್ರಿಗಳಿಗಿಂತ ಹೆಚ್ಚಾಗಿ ಸಹಾಯ ಮಾಡುತ್ತವೆ. ಹತ್ತನೆಯ ಶತಮಾನದ ಪಂಪ-ರನ್ನರ ಕಾವ್ಯಗಳನ್ನು ಅರ್ಥೈಸಲು ಶಾಸನಗಳ ನೆರವು ಅಗತ್ಯ. ಪಂಪನ ಸಮಕಾಲೀನ ಮೌಲ್ಯಗಳೆಲ್ಲವೂ ಪಂಪನ ನಂತರದ ಶಾಸನಗಳಲ್ಲಿ ಕಂಡು ಬರುತ್ತವೆ. ರನ್ನನ ಗದಾಯುದ್ಧದ

'ತುಱುಗೋಳೊಳ್ ಪೆಣ್ಬುಯ್ಯಲೊ
ಳಿಱಿವೆಸಮೊಳ್ ನಂಟನೆಡಱೊಳೂರಱಿವಿನೊಳಂ

[17] ಸೊಲ್ಲಾಪುರ ಜಿಲ್ಲೆಯ ಶಾಸನಗಳು : ಸಂ॥ ಶ್ರೀನಿವಾಸರಿತ್ತಿ, ಆನಂದ ಕುಂಬಾರ್, ಶಾಸನ ಸಂಖ್ಯೆ 40

*ತಱಿಸಂದು ಗಂಡುತನಮನೆ*
*ನೆಱಿಪದವಂ ಗಂಡನಲ್ಲನೆಂತು ಷಂಡಂ'*

ಈ ಪದ್ಯವನ್ನು ಅರ್ಥೈಸಲು ಸಂಬಂಧಿಸಿದ ನಿದರ್ಶನಗಳು ಆ ಕಾಲದ ಶಾಸನಗಳಲ್ಲಿ ಹೇರಳವಾಗಿ ದೊರೆಯುತ್ತವೆ.

ಕನ್ನಡ ಸಾಹಿತ್ಯದ ಆರಂಭ ಕಾಲದ ಗದ್ಯದ ಬೆಳವಣಿಗೆಯನ್ನು ಆ ಕಾಲದ ಶಾಸನಗಳಲ್ಲಿ ಬಳಕೆಯಾಗಿರುವ ಗದ್ಯದ ಮೂಲಕವೇ ಗುರುತಿಸಬಹುದಾಗಿದೆ. ಕ್ರಿ. ಶ. 450ರ ಹಲ್ಮಿಡಿ ಶಾಸನದ ಗದ್ಯಭಾಗವು ಕನ್ನಡ ಸಾಹಿತ್ಯ ಪ್ರಾರಂಭಿಕ ಗದ್ಯಕ್ಕೆ ಉತ್ಕೃಷ್ಟ ಮಾದರಿಯಾಗಿದೆ ಎಂದು ಹೇಳಬಹುದು. ಶಿರೂರ, ನೀಲಗುಂದ, ಕಳಸ ಶಾಸನಗಳ ಗದ್ಯವು ಸಾಹಿತ್ಯಕ ಲಕ್ಷಣಗಳನ್ನು ಹೊಂದಿದ್ದು ಕನ್ನಡ ಗದ್ಯ ಸಾಹಿತ್ಯದ ಬೆಳವಣಿಗೆಯನ್ನು ಸೂಚಿಸುತ್ತದೆ. ಅದೇ ರೀತಿ 8-9ನೇ ಶತಮಾನದ ಗಡಿಯಲ್ಲಿ ಹುಟ್ಟಿದ ಕುಲಮುದ್ದನ ಮಾವಳಿ ಶಾಸನದಲ್ಲಿ ಶ್ರೇಷ್ಠ ಗದ್ಯದ ಲಕ್ಷಣವನ್ನು ಗುರುತಿಸಬಹುದಾಗಿದೆ. ಈ ಶಾಸನದಲ್ಲಿ 'ಯುದ್ಧದ ವಿವಿಧ ಘಟನಾವಳಿ, ಅವುಗಳ ಬೆಳವಣಿಗೆಗೆ ಕುಲಮುದ್ದನಿಗೆ ಕಾಕರಸನು ಇತ್ತ ಆಜ್ಞೆ, ಆತನ ವೀರಮರಣ ಇವೆಲ್ಲವೂ ಚಿತ್ರವತ್ತಾಗಿ ಮೂಡಿವೆ. ಶೋಕ ಕಾವ್ಯಕ್ಕೆ ಹಿನ್ನೆಲೆಯಾಗಿರುವ ಕರುಣಭಾವದ ಸ್ಪರ್ಶವನ್ನು ಕಂಡುಕೊಳ್ಳಬಹುದಾಗಿದೆ.[18] ಈ ಶಾಸನದ ಗದ್ಯಭಾಗವು ಉತ್ತಮ ಮಟ್ಟದ ಕಲ್ಪನೆ, ಭಾವ, ಭಾಷೆಗಳು ಮುಪ್ಪರಿಗೊಂಡಿರುವಿಕೆಗೆ ನಿದರ್ಶನವಾಗಿದೆ. 11, 12ನೇ ಶತಮಾನದ ಶಾಸನಗಳು ವಿಶಿಷ್ಟವಾದ ಗದ್ಯಶೈಲಿ ಮತ್ತು ವರ್ಣನಾ ವೈಖರಿಯಿಂದ ಕೂಡಿದ್ದು ಕನ್ನಡ ಗದ್ಯ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ.

ಕನ್ನಡ ಭಾಷೆಯ ಚರಿತ್ರೆಯನ್ನು ಅಧ್ಯಯನ ಮಾಡುವಲ್ಲಿ ಶಾಸನಗಳು ತಮ್ಮದೇ ಆದ ನೆರವು ನೀಡಿವೆ. ಕನ್ನಡ ಸಾಹಿತ್ಯದ ಆರಂಭ ಕಾಲದಿಂದ ಪಂಪನವರೆಗೆ ಕನ್ನಡ ಭಾಷೆ ಬೆಳೆದುಕೊಂಡು ಬಂದ ಬಗೆಯನ್ನು ಶಾಸನಗಳ ಸಹಾಯದಿಂದ ತಿಳಿಯಬಹುದಾಗಿದೆ. ಕನ್ನಡಭಾಷಾ ಅವಸ್ಥಾ ಭೇದಗಳಲ್ಲಿ ಒಂದಾದ ಪೂರ್ವದ ಹಳಗನ್ನಡದ ಸ್ವರೂಪವನ್ನು ತಿಳಿಯಲು ಸಂಬಂಧಿಸಿದ ಪ್ರಯೋಗಗಳನ್ನು ಆ ಕಾಲದ ಶಾಸನಗಳಿಂದಲೇ ಗುರುತಿಸಬೇಕಾಗಿದೆ.

ಕನ್ನಡ ಶಾಸನಗಳಲ್ಲಿ ಕಂಡು ಬರುವ ಪೂರ್ವದ ಹಳಗನ್ನಡದ ಕೆಲವು ಲಕ್ಷಣ ಪ್ರಯೋಗಗಳು

**ದ್ವಿತೀಯಾ ವಿಭಕ್ತಿ ಪ್ರತ್ಯಯ - ಆನ್**

ದೇಗುಲಮಾನ್, ಪ್ರಾಸಾದಾನ್ತರಮಾನ್, ವಿಚಿತ್ರ ಕನಕ ಪ್ರಜ್ವಲ್ಯದಿನ್ ಮಿಕ್ಕುದಾನ್, ಸ್ವರ್ಗಾಗ್ರಮಾನ್

---

[18] ಎಂ. ಬಿ. ನೇಗಿನಾಳ : ಪೂರ್ವದ ಹಳಗನ್ನಡ ಶಾಸನಗಳ ಸಾಹಿತ್ಯಕ ಅಧ್ಯಯನ, ಪುಟ - 53.

**ಷಷ್ಠಿ ವಿಭಕ್ತಿ ಪ್ರತ್ಯಯದ ದೀರ್ಘತೆ :**

ಕಲಬೋರನಾ, ಭಟಾರಿಯಾ, ದೇಶದಾ, ಪೆತ್ತಜಯನಾ, ದಕ್ಷಿಣ ಭಾಗದಾ

**ಪ್ರಥಮ ಪುರುಷ ಬಹುವಚನ :**

ಓರ್ : ಅಪ್ಪೋರ್, ಆರ್ ವಿಟ್ಟಾರ್

**ಸಪ್ತಮೀ ಪ್ರತ್ಯಯ :**

ಎ-ಸಮಕ್ಷದೆ, ಉಳ್ - ನಾಡುಳ್, ಅಹವದುಳ್, ದನ್ತಾಗ್ರದುಳ್, ನದಿರಾಷ್ಟ್ರದುಳ್

ಅನುಸ್ವಾರದ ಬದಲು ನ್ : ಸುತನ್ಗೆ, ಅಜೀವೊನ್ಗೆ, ಅರಸನ್ಗೆ

**ನಿಷೇಧ ಪ್ರತ್ಯಯದ ದೀರ್ಘತೆ :** ತಪ್ಪಾದೆ, ವೇಳಿಯಾದೆ

**ಪದಾದಿ ವಕಾರ :** ಅನ್ದುವಟಿಕ್ಕೆ ಅಶನಾದಿವಿಟ್ಟ, ವಟಿಗಿಟ್ಟಾನ್, ವೆಟ್ಟದುಳ್ ಇತ್ಯಾದಿ. ಕವಿರಾಜಮಾರ್ಗದಲ್ಲಿ ಪೂರ್ವದ ಹಳಗನ್ನಡದ ಸ್ವರೂಪವನ್ನು ಕಾಣಲು ಸಾಧ್ಯವಿಲ್ಲ. ಕವಿರಾಜಮಾರ್ಗದ ಪೂರ್ವಕಾಲದ ಹಲ್ಮಿಡಿ ಶಾಸನ, ತಮಟಕಲ್ಲಿನ ಶಾಸನ, ಶ್ರವಣಬೆಳ್ಗೊಳದ ಬಿಡಿಮುಕ್ತಕಗಳ ಶಾಸನ ಪಾಠಗಳಲ್ಲಿ ಪೂರ್ವದ ಹಳಗನ್ನಡದ ಲಕ್ಷಣಗಳನ್ನು ಗುರುತಿಸಬಹುದು. ಪೂರ್ವದ ಹಳಗನ್ನಡ ಲಕ್ಷಣಗಳನ್ನು ಬಿಂಬಿಸುವ ಶಾಸನ ಪದ್ಯಗಳು ಕರ್ನಾಟಕದ ತುಂಬೆಲ್ಲಾ ದೊರೆತಿರುವುದರಿಂದ ಅಂದಿನ ಕನ್ನಡ ಸಾಹಿತ್ಯದ ಪ್ರಮಾಣ ಭಾಷೆಯನ್ನು ಇವು ಒಟ್ಟಿನಲ್ಲಿ ಪ್ರತಿನಿಧಿಸುತ್ತವೆಯೆಂದು ಹೇಳಬಹುದು.[19] ಕವಿರಾಜಮಾರ್ಗದ ಪೂರ್ವದಲ್ಲಿ ಸಾಹಿತ್ಯಾಚಾರ್ಯರಿಂದ ಮಾನ್ಯತೆ ಪಡೆದ ಭಾಷೆಯ ಸ್ವರೂಪ ಹಾಗೂ ಪೂರ್ವದ ಹಳಗನ್ನಡದ ಸಾಹಿತ್ಯ ಕೃತಿಗಳ ಭಾಷಿಕ ಸ್ವರೂಪ ಯಾವ ರೀತಿ ಇದ್ದಿತೆಂಬುದನ್ನು ಈ ಶಾಸನಗಳ ಪದ್ಯಗಳ ಹಿನ್ನೆಲೆಯಲ್ಲಿ ಊಹಿಸಬಹುದಾಗಿದೆ.

ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ಶಾಸನಗಳು ತಮ್ಮದೇ ಆದ ಕೊಡಿಗೆಯನ್ನು ನೀಡಿವೆ. ಸಂಸ್ಕೃತದಿಂದ ಕನ್ನಡಕ್ಕೆ ಹೊಸದಾಗಿ ಅಕ್ಷರ ವೃತ್ತಗಳನ್ನು ಸ್ವೀಕರಿಸಿದಾಗ ಇದ್ದ ಪರಿಸ್ಥಿತಿ ಸ್ವರೂಪವನ್ನು ತಿಳಿಯಲಿಕ್ಕೆ ಶಾಸನಗಳನ್ನೇ ಅವಲಂಬಿಸಬೇಕಾಗಿದೆ. ಆರಂಭಕಾಲದ ಚಂಪೂವಿನ ಛಂದೋ ವೈವಿಧ್ಯತೆಯನ್ನು ತಿಳಿಯುವಲ್ಲಿ ಶಾಸನಗಳ ನೆರವು ಅತ್ಯಗತ್ಯವಾಗಿದೆ. ಕನ್ನಡದಲ್ಲಿ ಪ್ರಥಮ ವರ್ಣವೃತ್ತದ ಬಳಕೆ ಕ್ರಿ. ಶ. ಸುಮಾರು 5ನೇ ಶತಮಾನದ ಚಿತ್ರದುರ್ಗ ಜಿಲ್ಲೆಯ ತಮಟಕಲ್ಲು ಶಾಸನದಲ್ಲಿ ಕಂಡುಬರುತ್ತದೆ. ಈ ಶಾಸನದಲ್ಲಿ ಬಳಕೆಯಾಗಿರುವ ಅಕ್ಷರ ವೃತ್ತವು 17ನೆಯ ಅತ್ಯಷ್ಟಿಯಲ್ಲಿದ್ದು ಕನಕಾಬ್ಜಿನಿ ಅಥವಾ ನರ್ಕುಟಕವಾಗಿದೆ. ಈ ವೃತ್ತವು ಆನಂತರ ಕಾಲದ ನಾಗವರ್ಮ, ನೇಮಿಚಂದ್ರ ಮುಂತಾದ ಚಂಪೂಕವಿಗಳ ಕಾವ್ಯಗಳಲ್ಲಿ ಗೋಚರವಾಗುವುದರಿಂದ ಕನ್ನಡವಲ್ಲಿ ಪಂಪಪೂರ್ವ ಯುಗದಿಂದಲೂ ಬಳಕೆಯಲ್ಲಿ ಇದ್ದಿತೆಂದು ಹೇಳಬಹುದು. 7ನೆಯ

---

[19] ಅದೇ ಪುಟ : 59.

ಶತಮಾನದ ಶ್ರವಣ ಬೆಳ್ಗೊಳದ ಬಿಡಿಮುಕ್ತಕಗಳಲ್ಲಿ ಸುಮಾರು ಮೂವತ್ತರಷ್ಟು ಪದ್ಯ ಶಾಸನಗಳಿವೆ. ಈ ಶಾಸನ ಪದ್ಯಗಳ ಛಂದಸ್ಸು ಅಕ್ಷರ ಛಂದಸ್ಸಾಗಿದೆ. ಬಿಡಿಮುಕ್ತಕಗಳಲ್ಲಿಯ ಛಂದಸ್ಸಿನಲ್ಲಿ ಕೆಲವೆಡೆ ದೋಷಪೂರಿತ ಎಂದೆನಿಸಿದ್ದರೂ, ಪರಿಶುದ್ಧವಾದ ಅಕ್ಷರ ವೃತ್ತದ ವೈವಿಧ್ಯಮಯ ಛಂದಸ್ಸುಳ್ಳ 12 ಪದ್ಯಗಳನ್ನು ಬಿಡಿಮುಕ್ತಕಗಳಲ್ಲಿ ಗುರುತಿಸಬಹುದಾಗಿದೆ. ಶಾರ್ದೂಲ ವಿಕ್ರೀಡಿತ 4 (ಶ್ರವಣಬೆಳ್ಗೊಳದ ಶಾಸನ ಸಂಖ್ಯೆ 13, 22, 27, 116) ಮತ್ತೇಭ ವಿಕ್ರೀಡಿತ 4 (ಶಾಸನ ಸಂಖ್ಯೆ : 76, 77, 97, 98) ಮಲ್ಲಿಕಾ ಮಾಲೆ 1 (ಶಾಸನ ಸಂಖ್ಯೆ 31) ಮಹಾಸ್ರಗ್ಧರೆ 1 (ಶಾಸನ ಸಂಖ್ಯೆ 88) ವಂಶಸ್ಥ 1 (ಶಾಸನ ಸಂಖ್ಯೆ 114), ಉತ್ಪಲಮಾಲೆ 1 (ಶಾಸನ ಸಂಖ್ಯೆ 79) ಹಾಗೂ ಅಲ್ಪಸ್ವಲ್ಪ ದೋಷದೊಡನೆ ಚಂಪಕಮಾಲೆ 2, ಮಂಗಳ 2, ರಥೋದ್ಧತ 1 ಇತ್ಯಾದಿ ವೈವಿಧ್ಯಮಯ ಬಿಡಿಮುಕ್ತಗಳಲ್ಲಿಯ ಅಕ್ಷರ ವೃತ್ತಗಳು ಸಂಸ್ಕೃತ ಛಂದಸ್ಸನ್ನು ಕನ್ನಡವು ವಿಪುಲವಾಗಿ ಬಳಸಿಕೊಂಡುದಕ್ಕೆ ನಿದರ್ಶನವಾಗಿವೆ. ಕವಿರಾಜಮಾರ್ಗದ ಪೂರ್ವದಲ್ಲಿ ತಮಟಕಲ್ಲು, ಶ್ರವಣಬೆಳ್ಗೊಳದ ಬಿಡಿಮುಕ್ತಕಗಳಲ್ಲಿ ಮಾತ್ರವಲ್ಲದೆ ಮಂಗಳೂರು, ಉದಯಾವರ, ಬೆಲವತ್ತೆ, ಪಟ್ಟದಕಲ್ಲು, ಚಿಕ್ಕಬಳ್ಳಾಪುರ ಹಾಗೂ ನರಸಿಂಹರಾಜಪುರ ಶಾಸನಗಳಲ್ಲಿ ಅಕ್ಷರ ವೃತ್ತಗಳು ಬಳಕೆಗೊಂಡಿರುವುದನ್ನು ಗುರುತಿಸಬಹುದು. ಕನ್ನಡದ ಬಹುತೇಕ ಶಾಸನಗಳು ಚಂಪೂವಿನ ಛಂದೋ ವೈವಿಧ್ಯವನ್ನು ಎಲ್ಲಾ ಕಾಲಕ್ಕೂ ಅಳವಡಿಸಿಕೊಂಡಿದ್ದು, ವರ್ಣವೃತ್ತಗಳಲ್ಲಿ ಸಮ, ಅರ್ಧಸಮ, ವಿಷಮವೃತ್ತಗಳಲ್ಲಿ ವೈವಿಧ್ಯವನ್ನು ಗುರುತಿಸಬಹುದಾಗಿದೆ.

ಮಾತ್ರಾವೃತ್ತ ಪ್ರಕಾರವಾದ ಕಂದದ ಬಳಕೆ ಕವಿರಾಜಮಾರ್ಗ ಹಾಗೂ ಅನಂತರದ ಕಾವ್ಯಗಳಲ್ಲಿ ಯಥೇಚ್ಛವಾಗಿದ್ದರೂ ಕವಿರಾಜಮಾರ್ಗದ ಪೂರ್ವದಲ್ಲಿಯೇ ಕಂದದ ಬಳಕೆ ಶಾಸನಗಳಲ್ಲಿ ಉಲ್ಲೇಖಗೊಂಡಿರುವುದನ್ನು ಗುರುತಿಸಬಹುದು. ನರಸಿಂಹರಾಜಪುರದ ಸಿಂಗಣಗದ್ದೆ ಜೈನಮಠದಲ್ಲಿ ದೊರೆತ ಗಂಗದೊರೆ ಶ್ರೀಪುರುಷನ ಕಾಲದ (ಕ್ರಿ. ಶ. 726-788) 'ನಿರ್ಮಲಕೋಶಿಕ ವಂಶಿಕನ್...' 'ಮುಖಮಾಗೆ ತೊಳ್ಗರೊಡೆ...' ಎಂದು ಪ್ರಾರಂಭವಾಗುವ ಎರಡು ಕಂದಗಳು ಹಾಗೂ ಕ್ರಿ. ಶ. 797ರ ಸೊರಬ ಶಾಸನದಲ್ಲಿ ಕಂಡು ಬರುವ ಕಂದಗಳು ಕನ್ನಡದ ಅತ್ಯಂತ ಪ್ರಾಚೀನತಮ ಕಂದಗಳೆನಿಸಿವೆ. ಹಗರಿಬೊಮ್ಮನ ಹಳ್ಳಿ ತಾಲ್ಲೂಕು ಕೋಗಳಿ ಗ್ರಾಮದ ಜೈನ ಬಸದಿಯ ಮುಂದಿರುವ ಕ್ರಿ. ಶ. 1055ರ ಶಾಸನವು 42 ಸಾಲುಗಳ ರಗಳೆ ಛಂದಸ್ಸಿನಲ್ಲಿ ರಚಿತವಾಗಿದೆ.[20] ಈ ಶಾಸನದಲ್ಲಿ ಉಕ್ತವಾದ 'ತೋಮರ ರಗಳೆ' ಎಂಬ ಹೆಸರು ಅಪೂರ್ವವಾದುದು. ಈ ಹೆಸರು ಯಾವ ಛಂದೋ ಲಾಕ್ಷಣಿಕ ಗ್ರಂಥಗಳಲ್ಲಿಯೂ ಉಲ್ಲೇಖಗೊಂಡಿಲ್ಲ. ಈ ಶಾಸನದಲ್ಲಿ ಉಕ್ತವಾದ ತೋಮರ ರಗಳೆ ಎಂಬ ಹೆಸರು ಅಪರಿಚಿತವಾಗಿದ್ದರೂ ರಗಳೆಯ ಲಕ್ಷಣ ಮಾತ್ರ ಪರಿಚಿತವಾದದ್ದೆ. 5.5 ಮಾತ್ರೆಯ ನಾಲ್ಕು ಗಣಗಳಿಂದ ಕೂಡಿ ಇಪ್ಪತ್ತು ಮಾತ್ರೆಗಳು ಆಗಿರುವುದು. ಆನಂತರದ ಕಾಲದಲ್ಲಿ ಹರಿಹರ ಕವಿಯು

[20] S. I. I. Vol. IX-I No. 117

ಪ್ರಯೋಗಿಸಿರುವ ಲಲಿತ ರಗಳೆಯ ಲಕ್ಷಣವನ್ನು ಹೋಲುತ್ತದೆ. ಈ ರಗಳೆಯ ಬಳಕೆಯ ಕಾಲ ಹರಿಹರನಿಗಿಂತ ಎರಡು ಶತಮಾನಗಳಷ್ಟು ಪ್ರಾಚೀನವಾದುದು. ಶಿವಶರಣರನ್ನು ಕುರಿತು ಬರೆಯಲು ಪ್ರಯೋಗಿಸಿದ ಲಲಿತ ರಗಳೆ ಕಾವ್ಯ ಪ್ರಕಾರವು ಹರಿಹರನಿಗಿಂತಲೂ ಪೂರ್ವದಲ್ಲಿ ಅಂದರೆ 2 ಶತಮಾನಗಳಿಗಿಂತಲೂ ಪೂರ್ವದಲ್ಲಿಯೇ ಶಾಸನಗಳಲ್ಲಿ ಬಳಕೆಯಾಗುತ್ತಿತ್ತು ಎಂಬುದು ವ್ಯಕ್ತವಾಗುತ್ತದೆ. ಕನ್ನಡ ಕಾವ್ಯಗಳಿಗಿಂತ ಮೊದಲೇ ಶಾಸನಗಳಲ್ಲಿ ದೇಶೀಯ ಛಂದೋರೂಪವಾದ ತ್ರಿಪದಿಯ ರೂಪದ ಉಲ್ಲೇಖ ದೊರೆಯುತ್ತದೆ.

ಕವಿರಾಜಮಾರ್ಗದ ಪೂರ್ವದಲ್ಲಿಯೇ ಕ್ರಿ. ಶ. 700ರ ಬಾದಾಮಿ ಶಾಸನ, ಹುಂಚ ಹಾಗೂ ಸೊರಬ ಶಾಸನಗಳಲ್ಲಿ ತ್ರಿಪದಿ ರೂಪದ ಪದ್ಯಗಳು ದೊರೆಯುತ್ತವೆ. ಬಾದಾಮಿಯ ಸಮೀಪದಲ್ಲಿ ದೊರೆತ ಶಾಸನದಲ್ಲಿ ಪಿರಿಯಕ್ಕರ ಬಳಕೆಯಾಗಿದೆ. ಮಾತ್ರಾಲಯ ಷಟ್ಪದಿಗಿಂತ ಅಂಶಲಯ ಷಟ್ಪದ ಮೊದಲೇ ರೂಢಿಯಲ್ಲಿತ್ತು ಎಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಕ್ರಿ. ಶ. 1067ರ ಚಿತ್ರದುರ್ಗದ ಶಾಸನ, ಕ್ರಿ. ಶ. 1067ರ ಚಡಚಣ ಶಾಸನ, ಕ್ರಿ. ಶ. 1071ರ ಕಾಲದ ಅಮ್ಮಿನ ಬಾವಿ ಶಾಸನ, ಆಂಧ್ರಪ್ರದೇಶದ ಮೆಹಬೂಬು ನಗರ ಜಿಲ್ಲೆಯ ಗಂಗಾಪುರದ 11ನೇ ಶತಮಾನದ ಕೊನೆಯ ಭಾಗದ ಶಾಸನ, 12ನೇ ಶತಮಾನದ ಸೊಲ್ಲಾಪುರ ಜಿಲ್ಲೆಯ 40ನೇ ಸಂಖ್ಯೆಯ ಶಾಸನಗಳಲ್ಲಿ ಅಂಶಷಟ್ಪದ ರೂಪದ ಪದ್ಯಗಳು ಉಲ್ಲೇಖಗೊಂಡಿವೆ. ಅಂಶ ಷಟ್ಪದದ ಹೆಚ್ಚಿನ ಪ್ರಯೋಗಗಳು ಕಾವ್ಯಗಳಲ್ಲಿಗಿಂತ ಶಾಸನಗಳಲ್ಲೆ ದೊರೆತಿವೆ. ಕರ್ನಾಟಕ ವಿಷಯ ಜಾತಿಗಳ ಕೆಲವು ಪ್ರಕಾರಗಳ ಪ್ರಯೋಗ ಶಾಸನಗಳಲ್ಲಿ ಕಂಡುಬರುತ್ತದೆ.

ಕೆಲವು ಶಾಸನಗಳಲ್ಲಿಯ ಬಿಡಿ ಬಿಡಿ ಪದ್ಯಗಳು ಶ್ರೇಷ್ಠ ಕಾವ್ಯದೊಳಗಿನ ಬಿಡಿ ಭಾಗಗಳೆಂಬಂತೆ ತೋರುವಷ್ಟರ ಮಟ್ಟಿಗೆ ಕವಿತ್ವ ಗುಣದಿಂದ ಕೂಡಿವೆ. ಎಷ್ಟೋ ಪದ್ಯಗಳ ಬಂಧ ಕೇವಲ ಅನುಕರಣೆಗಳೆನ್ನಿಸದೆ ಕುದುರಿದ ಕೈಯ ನಿರ್ಮಿತಿಗಳಂತೆ ತೋರುತ್ತವೆ. ಎಷ್ಟೋ ಶಾಸನಗಳಲ್ಲಿಯ ಪದ್ಯಗಳು ಕನ್ನಡ ಕಾವ್ಯಪರಂಪರೆಯಿಂದ ಬೇರೆಯಾದ ಹೊಸ ಹೊಗರನ್ನು ವ್ಯಕ್ತಪಡಿಸುತ್ತವೆ. ಎಲ್ಲಕ್ಕಿಂತ ಮಿಗಿಲಾಗಿ ಬಿಡಿಬಿಡಿಯಾದ ಹಾಗೂ ಸ್ಫುಟವಾದ ವ್ಯಕ್ತಿ ಚಿತ್ರಗಳನ್ನು ನಿರ್ಮಿಸುವುದರ ಮೂಲಕ ಸಾಂಪ್ರದಾಯಿಕ ಕಾವ್ಯ ಮಾಡದಿದ್ದ ಕೆಲಸವನ್ನು ಮಾಡುತ್ತ ಮುನಿಗಳು, ಆಚಾರ್ಯರು, ರಾಜರು, ಮಂತ್ರಿಗಳು, ದಂಡಾಧೀಶರ ವ್ಯಕ್ತಿತ್ವವನ್ನು ಕಡೆದು ನಿಲ್ಲಿಸುತ್ತವೆ. ಶಾಸನಗಳು ಸಾಹಿತ್ಯಕವಾಗಿ ಹುಟ್ಟಿದವುಗಳಲ್ಲ. ಅವುಗಳ ಉದ್ದೇಶ್ಯವೇ ಬೇರೆಯಾಗಿದೆ. ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯವಿದ್ದರೆ ಅದು ಕೇವಲ ಪ್ರಾಸಂಗಿಕ. ಒಟ್ಟಾರೆ ಸಾಹಿತ್ಯಕ ಮೌಲ್ಯವಿರುವ ಶಾಸನಗಳನ್ನು ಒಟ್ಟಾಗಿ ತೆಗೆದುಕೊಂಡು ಸಾಹಿತ್ಯಕ, ಭಾಷಿಕ, ಛಂದಸ್ಸಿನ ಅಧ್ಯಯನಕ್ಕೆ ಯಾವ ರೀತಿ ಆಕರಗಳಾಗಿವೆ ಎಂಬ ಕಿರುಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ಶಾಸನಗಳನ್ನು ಬಹುಮುಖಗಳಿಂದ ಅಭ್ಯಾಸ ಮಾಡುವುದರ ಜೊತೆಗೆ ಶಾಸನ ಚರಿತ್ರೆ ರೂಪಿಸುವ ಕಾರ್ಯ ತ್ವರಿತವಾಗಿ ಆಗಬೇಕಾಗಿದೆ.



# ಟೀಕೆ ಟಿಪ್ಪಣಿಗಳು

## ೧. ಬಾಹುಬಲಿಯ ಬಣ್ಣ ಯಾವುದು?

ಪಂಪನ ಆದಿಪುರಾಣದಲ್ಲಿ ಬರುವ ಭರತ-ಬಾಹುಬಲಿ ಪ್ರಸಂಗ ಪ್ರಸಿದ್ಧವಾದುದು. ಜೈನಪುರಾಣದ ಪ್ರಸಂಗಗಳಲ್ಲಿ ವರ್ಣರಂಜಿತ ಪ್ರಸಂಗಗಳಲ್ಲಿ ಜೈನರಷ್ಟೇ ಅಲ್ಲದೆ ಜೈನೇತರರೂ ಮೆಚ್ಚಿಕೊಂಡ ಪ್ರಸಂಗ ಅದು.

ಭರತನಿಗೂ ಬಾಹುಬಲಿಗೂ ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧಗಳು ನಡೆಯುತ್ತವೆ. ಈ ಸಂದರ್ಭದಲ್ಲಿ ಭರತ ಬಾಹುಬಲಿಗಳನ್ನು ವರ್ಣಿಸುವಾಗ ಪಂಪನು ಭರತನನ್ನು ಕನಕಾಚಲವರ್ಣದವನನ್ನಾಗಿ ಬಾಹುಬಲಿಯನ್ನು ಮರಕತಶೈಲ ವರ್ಣದವನನ್ನಾಗಿ ವರ್ಣಿಸುತ್ತಾನೆ. ಇದಕ್ಕೆ ಸಂಬಂಧಿಸಿದಂತೆ ಪಂಪನ ಉಲ್ಲೇಖಗಳು ಆದಿಪುರಾಣದಲ್ಲಿ ಹೀಗೆವೆ :

1) ಎರಡು ದೆಸೆಯೊಳಂ ಮಧ್ಯಸ್ಥರಾಗಿ ಮಿಡುಕದೆ ನೋಡುತಿರ್ಪಂತು
ನಿಯಮಿಸಿದಾಗಳಿರ್ಬರುಂ ನೀಲ ನಿಷಧಗಿರಿಗಳೊಂದೊಂದರೊಳ್ ಬಂದು
ಪೊಣರ್ದು ನಿಲ್ವಂತೆ ನಿಂದು... (ಆದಿಪು 14-104 ಗದ್ಯ)

2) ಭರತನ ಮುಖದೊಳ್ ಪರ್ವಿದ
ಖರಕೋಪಾನಳನನೆಯ್ದೆ ನಂದಿಸುವೊಲಾ
ಮರಕತವರ್ಣರ ಕರಿಕರ
ಪರಿಘದಿನೊಡನೊಡನೆ ತುಳುಕಿದಂ ತಿಳಿನೀರಂ (ಆದಿಪು 14-107)

3) ಮಣಿಮಯ ಕಿರೀಟೋದಗ್ರವಿಸ್ಫುರಿತ ಸಂಚುಳಿಕಾ ಕನಕಾಚಲಮೆನೆ
ಪೊಲ್ತು (ಭರತನು) (ಆದಿ 14-108 ಗದ್ಯ)

4) ಕನಕಾಚಲವಾಂ ಪೊತ್ತುದು
ಘನ ಮರಕತಶೈಲಮೆನಿಸಿ ಸರಲಾ
ವನಿ ತಳವಲ್ಲಭನಂ ಭೋಂ
ಕನೆತ್ತಿ ಪೊತ್ತಿರ್ದನಿಕ್ಕಲೊಲ್ಲದೆ ನೆಲದೊಳ್ (ಆದಿಪು 14-111)

ರತ್ನಾಕರನು ಭರತೇಶ ವೈಭವದಲ್ಲಿ "ಕುಂದಣ ದದ್ರಿ ಪಚ್ಚೆಯ ಗಿರಿ ಯೆರದೊದ್ದಿನಿಂದವೊ ಕಳದೊಳು" ಎಂದು ರಾಜೇಂದ್ರಗುಣ ವಾಕ್ಯಸಂಧಿ ೫೯ನೇ ಪದ್ಯದಲ್ಲಿ ವರ್ಣಿಸುತ್ತಾನೆ. ಕರ್ವುಪಿಲ್ಲನು ಮಧ್ಯದೊಳು ನಿಂದನಾ ಪಸುರ್ ಪರ್ವತನಿಂದುದು ಎಂಬಂತೆ ಇತ್ಯಾದಿ ಹಲವಾರು ಪ್ರಯೋಗಗಳು ಭರತೇಶ ವೈಭವದಲ್ಲಿ ಬಾಹುಬಲಿ ಬಣ್ಣದ ಬಗ್ಗೆ ಸಿಗುತ್ತವೆ.

ಪಂಪ-ರತ್ನಾಕರ ಆಗಲಿ ತೀರ್ಥಂಕರರ ಚರಿತ್ರೆಗಳನ್ನು ಕಾವ್ಯಗಳನ್ನಾಗಿ ಬರೆದ ಕನ್ನಡ ಜೈನಕವಿಗಳಾಗಲಿ ಎಲ್ಲರಿಗೂ ಜಿನ ಸೇನಾಚಾರ್ಯ ಮತ್ತು ಗುಣಭದ್ರಾಚಾರ್ಯರ ಪೂರ್ವಪುರಾಣ - ಉತ್ತರಪುರಾಣ ಅರ್ಥಾತ್ ಮಹಾಪುರಾಣವೇ ಆಕರಗ್ರಂಥ ಆಧಾರಗ್ರಂಥ ಎಂಬುದು ಸರ್ವವಿದಿತವಾದ ಸಂಗತಿ ಆಗಿದೆ. ಪ್ರಮಾಣ ಗ್ರಂಥವೂ ಹೌದು, ಶಾಸ್ತ್ರಾಧಾರ ಸಂಗತಿಗಳಿಗೆ.

ಪೂರ್ವಪುರಾಣದಲ್ಲಿ ಭರತ-ಬಾಹುಬಲಿಗಳನ್ನು ವರ್ಣಿಸುವಾಗ

*ಗತೌ ನಿಷಧ-ನೀಲಾದ್ರೀ ಕುಶಶ್ಚಿದಿವ ಸನ್ನಿಧಿಂ ॥ (ಪೂ. ಪು. 36-48)*

ಎಂದೂ

*ಭುಜೋಪರೋಧಮುದ್ಧೃತ್ಯ ಸತಂ ಧತ್ತೇ ಸ್ಮ ದೋರ್ದಲೀ*

*ಹೇಮಾದ್ರಿಮಿವ ನೀಲಾದ್ರಿರ್ಮಹಾಕಟಕಭಾಸ್ವರಂ (ಪೂ.ಪು. 36-61)*

ಎಂದು ವರ್ಣಿಸಿದೆ. ಇದರಿಂದ ಭರತ ಹೇಮವರ್ಣ, ಬಾಹುಬಲಿ ನೀಲವರ್ಣ ಎಂದು ತಿಳಿಯುತ್ತದೆ. ಆದರೆ ಪಂಪ-ರತ್ನಾಕರರು ಪಚ್ಚೆವರ್ಣದವ ಬಾಹುಬಲಿ ಎಂದು ವರ್ಣಿಸಿದ್ದಾರೆ. ಈ ವ್ಯತ್ಯಾಸಕ್ಕೆ ಕಾರಣವೇನು? ಪಂಪರತ್ನಾಕರರಿಗೆ ಆಕರವಾಗಿದ್ದ ಮಹಾಪುರಾಣದಲ್ಲಿ ಮರಕತ ಶೈಲವರ್ಣ ಬಾಹುಬಲಿಯದು ಎಂದಿತ್ತೇ? ಅಥವಾ ಬೇರೆ ಕಾರಣಕ್ಕಾಗಿ ಮೂಲದ ನೀಲಾಂಗವರ್ಣವನ್ನು ಬಾಹುಬಲಿಗೆ ಬದಲಿಸಿದನೇ? ವಿದ್ವಾಂಸರು ವಿಚಾರ ಮಾಡಬೇಕಾಗಿದೆ. ಶಾಂತಿರಾಜ ಶಾಸ್ತ್ರಗಳು ನೋಡದಿರುವ ಮಹಾಪುರಾಣದ ಹಸ್ತಪ್ರತಿಗಳಿವೆಯೇ ಅವುಗಳಲ್ಲಿ ಏನಿದೆ? ಎಂಬುದನ್ನು ಕುರಿತು ಚಿಂತಿಸಬೇಕಲ್ಲವೇ?

**ಪ್ರೊ॥ ಜಿ. ಅಶ್ವತ್ಥನಾರಾಯಣ**



# ೨. ಆಡುಭಾಷೆಯಲ್ಲಿ ಅವಾಂತರ

ಕನ್ನಡಕ್ಕೆ ಸರ್ವಮಾನ್ಯವಾದ, ಸಾಕಷ್ಟು ವಿಸ್ತಾರವಾದ ವ್ಯಾಕರಣವನ್ನು ನೀಡಿದ ಕೇಶಿರಾಜನಿಗೆ ಅದು ಸಮಗ್ರವಾಗಿ ಎಲ್ಲಾ ವಿಚಾರಗಳನ್ನೂ ಒಳಗೊಂಡಿದೆ ಎಂಬ ವಿಶ್ವಾಸವಿರಲಿಲ್ಲ, ಇನ್ನೂ ಏನಾದರೂ ಬಿಟ್ಟಿರಬಹುದು, ಎಲ್ಲವನ್ನೂ ಹೇಳಿ ಮುಗಿಸುವುದು ಸಾಧ್ಯವಿಲ್ಲ ಎಂಬ ಶಂಕೆ ಅವನನ್ನು ಕಾಡಿದೆ. ಸಮಾಸ, ತದ್ಧಿತ, ಧಾತು ಪ್ರಕರಣಗಳ ಕೊನೆಯಲ್ಲಿ ಅವನು ತನ್ನ ನೋವನ್ನು ವ್ಯಕ್ತ ಪಡಿಸಿದ್ದಾನೆ.

ಕವಿಮಾರ್ಗಗತ ಸಮಾಸಮ
ನವನೆನ್ನರಿವನೆಯ್ದೆ ಪೇಳ್ದೆಂ ಲೋಕ-
ವ್ಯವಹಾರದಿಂದಮಿನ್ನುಳಿ
ದುವನರಿವುದು ಶಬ್ದಪಾರಮಾರ್ಗಮಶಕ್ಯಂ

*(ಶ. ದ. ಸೂ. ೨೮೨)*

ಈ ಪದ್ಯದ ಪ್ರತಿಯೊಂದು ಶಬ್ದವೂ ಅರ್ಥಪೂರ್ಣ. "ನಾನು ಕವಿಗಳ ಪ್ರಯೋಗದಲ್ಲಿ ಕಂಡು ಬಂದ ಸಮಾಸಗಳನ್ನು ನನ್ನ ತಿಳಿವಳಿಕೆಯ ಮಿತಿಯಲ್ಲಿ ಹೇಳಿದ್ದೇನೆ. ಲೋಕ ವ್ಯವಹಾರದಿಂದ - ಆಡು ಮಾತಿನ ಆಧಾರದಿಂದ ಉಳಿದವನ್ನು ಸೇರಿಸಿಕೊಳ್ಳಬೇಕು. ಶಬ್ದ ಸಾಗರದ ದಡವನ್ನು ಸೇರುವುದು ಯಾರಿಗೂ ಅಸಾಧ್ಯ" ಎಂಬ ಅವನ ಮಾತಿನಲ್ಲಿ ಭಾಷೆಯ ಆಳ ಅಗಲ ಅನಂತ, ಅದರ ಪೂರ್ಣಜ್ಞಾನ ಅಲಭ್ಯವೆಂದು ತನ್ನ ವಿನಯವನ್ನು ಮೆರೆಯುತ್ತಾನೆ. ಅವನ ಮಾತಿನಲ್ಲಿ ವ್ಯಕ್ತವಾಗುವ ಇನ್ನೊಂದು ಮುಖ್ಯ ವಿಚಾರವೆಂದರೆ ಲೋಕ ವ್ಯವಹಾರದಿಂದ - ಆಡು ಮಾತಿನಿಂದ ಉಳಿದವುಗಳನ್ನು ಸೇರಿಸಿಕೊಳ್ಳಬೇಕು ಎಂಬುದು. ಭಾಷೆಯ ಮೂಲ ಸತ್ವವಿರುವುದು ಅದರ ವ್ಯವಹಾರ ರೂಪ ಎಂದರೆ ಆಡು ಮಾತಿನಲ್ಲಿ, ಅದನ್ನು ಪರಿಶೀಲಿಸಿ ತಿಳಿಯಬೇಕು. ತಾನು ಕೇವಲ ಕವಿಪ್ರಯೋಗ - ಗ್ರಾಂಥಿಕ ರೂಪವನ್ನು ಮಾತ್ರ ಆಧರಿಸಿದ್ದೇನೆ. ಇದು ಪೂರ್ಣವಲ್ಲ ಎನ್ನುವಲ್ಲಿ ಅವನ ಭಾಷಾ ವಿಜ್ಞಾನಿ ಗುಣ ವ್ಯಕ್ತವಾಗುತ್ತದೆ.

ವ್ಯಾಕರಣದಲ್ಲಿ ಹೇಳದ, ಆದರೆ ಆಡುಭಾಷೆಯಲ್ಲಿ ಕಂಡು ಬರುವ ಕೆಲ ವಿಚಾರಗಳನ್ನು "ಹೊಸಗನ್ನಡದಲ್ಲಿ ಇತ್ತೀಚಿನ ಕೆಲವು ಪ್ರಯೋಗಗಳು" ಎಂಬ 'ಕವಿಮಾರ್ಗ' ಎಂಬ ಕೃತಿಯಲ್ಲಿ ಪ್ರಕಟವಾದ ಲೇಖನದಲ್ಲಿ ಹೇಳಿಕೊಂಡಿದ್ದೇನೆ", ಇನ್ನುಳಿದವನ್ನಿಲ್ಲಿ ಪ್ರಸ್ತಾವಿಸಬಯಸುತ್ತೇನೆ.

'ಅಲ್ಲಿ, ಒಳ್' ಸಪ್ತಮೀ ವಿಭಕ್ತಿ ಪ್ರತ್ಯಯಗಳೆಂದು ವ್ಯಾಕರಣಕಾರ ವಿವರಿಸಿದ್ದಾನೆ. ಆದರೆ ಉತ್ತರ ಕರ್ನಾಟಕದ, ಧಾರವಾಡ ಮೊದಲಾದೆಡೆಯ ಆಡುಮಾತಿನಲ್ಲಿ 'ಆಗ, ಒಳಗೆ' ಪ್ರತ್ಯಯಗಳು ಪ್ರಯೋಗವಾಗುತ್ತಿವೆ. ಇವೆರಡೂ ಸ್ಥಳ ವಾಚಕಗಳು. ಅಲ್ಲಿ, ಒಳ್(ಉಳ್) ಎಂಬವೂ ಸ್ಥಳವಾಚಕಗಳು. ಅಧಿಕರಣಕಾರಕದ ಸಪ್ತಮಿಯಲ್ಲಿ ಸ್ಥಳವಾಚಕ

ಶಬ್ದಗಳೇ ಪ್ರತ್ಯಯ ರೂಪದಲ್ಲೂ ಪ್ರಯೋಗವಾಗುತ್ತವೆಂಬುದು ಸ್ಪಷ್ಟ. 'ಅಲ್ಲಿ' ಎಂಬುದು ಇದ್ದಂತೆಯೇ, 'ಉಳ್' ಎಂಬುದು ಬಿಳ್, ಬಿಳು, ಒಳ ಎಂಬ ರೂಪದಲ್ಲಿದೆ. ಹವ್ಯಕದಲ್ಲಿ 'ಒಳ' ಎಂಬ ರೂಪದಲ್ಲೇ ಇದೆ. ಉದಾ - ದೇವರೊಳ (ದೇವರು ಒಳ, ಅಟ್ಟುಂಬೊಳ - ಅಟ್ಟುಂಬಳ= ಅಟ್ಟು+ಉಂಬ+ಒಳ). 'ಆಗ' ಎಂಬುದಿಲ್ಲಿ ಕಾಲವಾಚಕವಲ್ಲ - ಮನೆಯಾಗ (ಮನೆಯಲ್ಲಿ), ಅದರಾಗ (ಅದರಲ್ಲಿ) 'ಅಗ' ಎಂಬ ಸ್ಥಳವಾಚಕವೇ 'ಆಗ' ರೂಪ ಪಡೆದಿದೆ. ತಮಿಳು ಮಲಯಾಳಗಳಲ್ಲಿ ಈಗಲೂ ಅಗಂ, ಅಗ ಸ್ಥಳವಾಚಕವಾಗಿ 'ಒಳಗೆ' ಎಂಬರ್ಥ. ಉದಾ- ಅಗತ್ತ್ (ಒಳಗೆ-ಮ.) ಕನ್ನಡದಲ್ಲಿ ಈ ಮೂಲರೂಪ ಈಗ ಹೆಚ್ಚಾಗಿ ಕಂಡು ಬರುವುದಿಲ್ಲ. 'ಅಂಗೈ' ಎಂಬ ಶಬ್ದವು 'ಅಗಂ ಕೈ' ಎಂಬ ಮೂಲದಿಂದ ಬಂದಿರಬಹುದಾದರೆ ಇಲ್ಲಿ 'ಅಗಂ' ಎಂಬ ರೂಪವಿದೆ. ಉತ್ತರ ಕರ್ನಾಟಕದ ಜನರು 'ಅಗ' ಎಂಬ ಮೂಲ ಸ್ಥಳವಾಚಕವನ್ನು ಸಪ್ತಮೀ ವಿಭಕ್ತಿ ಪ್ರತ್ಯಯವಾಗಿ ಈಗಲೂ ಬಳಸುತ್ತಿರುವುದು, ಹೊಸಗನ್ನಡ ಅದನ್ನು ಬಿಟ್ಟಿರುವುದು ಸೋಜಿಗ.

'ಒಳಗೆ' ಎಂಬಲ್ಲಿ ಒಳ್+ಅಗೆ ಎರಡೂ ಸ್ಥಳವಾಚಕಗಳೂ ಸೇರಿದಂತೆ ಕಾಣುತ್ತದೆ. 'ಅಗ' ಎಂಬುದು 'ಅಗೆ' ಆಗಿರುವುದು ವಿಶೇಷ. 'ಎ' ಪ್ರತ್ಯಯವೂ ಸಪ್ತಮಿ ಅರ್ಥದಲ್ಲಿ ಪ್ರತ್ಯಯವಾಗಿ ಬರುತ್ತದೆ. ಈ ಕುರಿತು ಬೇರೊಂದು ಲೇಖನದಲ್ಲಿ ಚರ್ಚಿಸಲಾಗಿದೆ. (ಸಾಧನೆ-ಸಂಪುಟ 14, ಸಂಚಿಕೆ 3-4, ಜುಲೈ-ಸೆಪ್ಟೆಂಬರ್-1985) ಮೇಲ್+ಎ=ಮೇಲೆ, ಕೆಳ+ಅಗ+ಎ=ಕೆಳಗೆ ಆಗಿರಬೇಕು.

'ಒಳಗೆ (ಒಳ್+ಅಗ+ಎ), ಕೆಳಗೆ ಗಳಲ್ಲಿ ಈ ದೃಷ್ಟಿಯಲ್ಲಿ ಮೂರು ಸ್ಥಳ ವಾಚಕಗಳು ಸೇರಿದಂತೆ ತೋರುತ್ತದೆ. ಸ್ಪಷ್ಟತೆಗಾಗಿ ಭಾಷೆಯಲ್ಲಿ ದ್ವಿರುಕ್ತಿ, ತ್ರಿಉಕ್ತಿಗಳಾಗುವುದು ಸಾಮಾನ್ಯವಷ್ಟೆ? - ಹಣ್ಣು ಹಂಪಲು, ಸಹ್ಯಾದ್ರಿ ಪರ್ವತ ಎಂದಂತೆ.

'ಹತ್ತಿರ' ಸ್ಥಳವಾಚಕವು ಅತ್ತಿರ, ಅತ್ರ ರೂಪದಲ್ಲಿ ಸಪ್ತಮಿಯ ಪ್ರತ್ಯಯವಾಗಿ ಹೊಸಗನ್ನಡದ ಆಡುಮಾತಿನಲ್ಲಿ ಬಳಕೆಯಾಗತೊಡಗಿದೆ. - "ರಾಮನ ಹತ್ತಿರ, ರಾಮನತ್ರ ಹಣ ಇದೆ". 'ರಾಮನ ಕೈಯಲ್ಲಿ' ಎಂಬಂತೆಯೂ ಬಳಕೆ ಇದೆ. ಸ್ವರಲೋಪ ಸಂಧಿ ಕನ್ನಡದಲ್ಲಿ ಸಾಮಾನ್ಯ - ಉದಾ : ತವರು + ಊರು = ತವರೂರು. ಇಲ್ಲಿ ಮೊದಲಿನ ಸ್ವರವು ಲೋಪವಾಗಿ ಮುಂದಿನ ಸ್ವರವು ಆ ಸ್ವರದ ವ್ಯಂಜನದೊಂದಿಗೆ ಸೇರಿ ಸಂಧಿಯಾಗುವುದು ವ್ಯಾಕರಣೋಕ್ತ, ಪ್ರಯೋಗಸಿದ್ಧ. ಈಗೀಗ ಆಡುಮಾತಿನಲ್ಲಿ ಆ ಮೊದಲ ಸ್ವರಲೋಪವಾಗದೆ ತಾನೇ ದೀರ್ಘವಾಗಿ ಪರದ ಸ್ವರವೇ ಲೋಪವಾಗಿ ಸಂಧಿಯಾಗುವ ಉದಾಹರಣೆಗಳಿಗೆ. - ಬೇಕು + ಅಂತ = ಬೇಕೂಂತ, ಹೇಗೆ + ಅಂತ = ಹೇಗೇಂತ. ಇವನ್ನು 'ಬೇಕಂತ', 'ಹೇಗಂತ' ಎಂದು ಪ್ರಯೋಗಿಸುವುದಿಲ್ಲವೆಂದಿಲ್ಲ. ಇದೇ ರೀತಿ 'ಹೇಗೇಂದ್ರೆ', 'ಹೋಗೂಂದ್ರೆ', ಇತ್ಯಾದಿ ಪ್ರಯೋಗಗಳಿವೆ. ಇಲ್ಲಿ ಹಿಂದಿನ ವ್ಯಾಕರಣ ನಿಯಮಕ್ಕೆ ಭಿನ್ನವಾಗಿ ಪರದ ಸ್ವರವೇ ಲೋಪವಾಗಿ ಪೂರ್ವದ ಸ್ವರದ ದೀರ್ಘವು ಏಕಾದೇಶವಾಗುವುದರಿಂದ ಇವನ್ನು

"ಪೂರ್ವಸ್ವರ ದೀರ್ಘ ಏಕಾದೇಶ ಸಂಧಿ" ಎನ್ನಬಹುದಷ್ಟೆ? ಭಾಷಾ ಶಾಸ್ತ್ರದಲ್ಲಿ, (ಭಾಷಾ ವಿಜ್ಞಾನ) 'ಪರಿಹಾರದೀರ್ಘೀಕರಣ' (Compensatory ting the ning) ಎಂದು ಇಂತಹದನ್ನೇ ಕರೆಯಲಾಗುತ್ತದೆ.

ಸಂಸ್ಕೃತದಲ್ಲಿ ಇಂತಹ ಸಂಧಿಗೆ ಪೂರ್ವಸ್ವರ ದೀರ್ಘ ಏಕಾದೇಶಸಂಧಿ ಎನ್ನಲಾಗುತ್ತದೆ. ಉದಾ : ಹರೇ+ಅವ= ಹರೇವ ಇದನ್ನು ಹರೇಽವ ಎಂದೂ ವಿಷ್ಣೋ+ಅವ=ವಿಷ್ಣೋಽವ ಎಂದೂ ಬರೆಯಲಾಗುತ್ತದೆ.

ಕೆಲವೊಮ್ಮೆ ಪೂರ್ವಸ್ವರವನ್ನು ದೀರ್ಘ ಮಾಡದೆ, ಪೂರ್ವ ಶಬ್ದದ ರೂಪವನ್ನು ಇದ್ದಂತೆ ಕಾಯ್ದುಕೊಳ್ಳುವುದಕ್ಕಾಗಿ ಸ್ಪಷ್ಟತೆಗಾಗಿ ಇರಿಸಿಕೊಳ್ಳುವುದುಂಟು. ಉದಾ : (ಶಂಭು >ಸಂಬು+ಅಣ್ಣ=ಸಂಬುಣ್ಣ).

ಸಂಸ್ಕೃತದಲ್ಲಿ ಈ ಎರಡು ಸ್ವರಗಳು ಎದುರಾದಾಗ ಸವರ್ಣ ದೀರ್ಘ ಸಂಧಿಯಾಗುವುದು. ಉದಾ : ಸುರ+ಅಸುರ-ಸುರಾಸುರ.

ಕನ್ನಡದಲ್ಲಿ ಎರಡು ಸ್ವರಗಳು ಎದುರಾದಾಗ ಮೊದಲಿನ ಸ್ವರವು ಲೋಪವಾಗುವುದೇ ಸಾಮಾನ್ಯ. ಉದಾ : ಆರು+ಏಳು - ಆರೇಳು. ಆದರೆ ಹೊಸಗನ್ನಡದಲ್ಲಿ, ಆಡುಮಾತಿನಲ್ಲಿ, ಸಂಸ್ಕೃತದಂತೆ ಮೊದಲಿನ ಸ್ವರವು ದೀರ್ಘವಾಗುವ ಉದಾಹರಣೆಗಳಿವೆ.

ಹೋಗು+ಉದು= ಹೋಗೂದು (ಇದನ್ನು ಕೆಲವರು ಹೋಗೋದು ಎನ್ನುವುದುಂಟು).

ಬರು+ಉದು=ಬರೂದು (ಬರೋದು ಎನ್ನುವದೂ ಉಂಟು). ಹೀಗೆಯೇ ಹೋಗೂಕೆ (ಹೋಗೋಕೆ) ಬರೂಕೆ (ಬರೋಕೆ).

ಅದು, ಇದು, ಉದು ಸರ್ವನಾಮಗಳು ಧಾತುಗಳಿಗೆ ಸೇರಿ ಕೃದಂತ ನಾಮಗಳಾಗುತ್ತವೆ, ಹೆಚ್ಚಾಗಿ ಅದು, ಉದುಗಳು ಹೀಗೆ ಪ್ರತ್ಯಯಗಳಾಗುತ್ತವೆ.

ನೋಡು+ಉದು, ಅದು - ನೋಡುವುದು, ನೋಡುವದು

ಬೇಡು+ಉದು, ಅದು - ಬೇಡುವುದು, ಬೇಡುವದು,

ಹವ್ಯಕದಲ್ಲಿ ನೋಡುವುದು, ಬೇಡುವುದು ಎಂಬಂತೆಯೇ ಪ್ರಯೋಗ. ಇವುಗಳ ಬಹುವಚನದಲ್ಲಿ - ನೋಡುವುವು, ನೋಡುವವು, ಬೇಡುವುವು, ಬೇಡುವವು. 'ಇದು' ಸೇರಿದಾಗ ನೋಡಿದುದು (ನೋಡಿದ್ದು) ಬೇಡಿದುದು (ಬೇಡಿದ್ದು) 'ಇದು' ಸೇರಿದಾಗ ಅಪೂರ್ಣ ಭೂತ ಕ್ರಿಯೆಯ ಸೂಚಕವೂ ಆಗುತ್ತದೆ. ಆದ್ದರಿಂದ ನೋಡಿದ್ದು, ಬೇಡಿದ್ದು ಎಂಬರ್ಥವನ್ನು ಕೃದಂತನಾಮವಾಗಿ ಬಳಸುವುದು ಕಡಿಮೆ. ಹಾಗೆ ಬಳಸಿದರೆ ಅದು ಕೃದಂತ ನಾಮವೇ! ಅಪೂರ್ಣ ಕ್ರಿಯಾಸೂಚಿಯೇ? ಎಂಬುದು ಸ್ಪಷ್ಟವಾಗುವುದಿಲ್ಲ.

ಇಲ್ಲಿಗೆ ಬಂದದ್ದು ಯಾರು' (ಕೃದಂತನಾಮ) ಬಂದ+ಅದು - ಬಂದುದು-ಬಂದದ್ದು. ಅವನು ಬಂದಿದ್ದು ಎಲ್ಲಿಗೆ ಹೋದ? (ಅಪೂರ್ಣ ಭೂತ) ಬಂದ+ಇದು-ಬಂದಿದು-ಬಂದಿದ್ದು.

ಈಗಿನ ಆಡುಮಾತಿನಲ್ಲಿ ಬಂದಿದ್ದು ಎಂಬುದನ್ನೇ ಎರಡೂ ಅರ್ಥಗಳಲ್ಲಿ ಬಳಸುತ್ತಾರೆ. ಇದು ಸಂದೇಹಕ್ಕೆ ಆಸ್ಪದವಾಗುತ್ತದೆ.

'ಅದು' ಎಂಬುದು ಕೆಲವೊಮ್ಮೆ ನಿಷೇಧದಲ್ಲೂ ಬಳಕೆಯಾಗುತ್ತದೆ - ನೋಡದ್ದು (ನೋಡದೆ ಇರುವುದು) ಮಾಡದ್ದು (ಮಾಡದೆ ಇರುವುದು).

ಇಂತಹ ಕೆಲವು ಕಡೆ ಮಾತ್ರ - ನೋಡಿದ್ದು, ಮಾಡಿದ್ದು, ಕೃದಂತನಾಮ ಮತ್ತು ಅಪೂರ್ಣಭೂತ ಅರ್ಥಗಳು ಒಂದೊಂದೇ ರೂಪದಲ್ಲಿ ವ್ಯಕ್ತ.

ಅವನು ನೋಡಿದ್ದು ಆ ಮನೆಯನ್ನು (ಕೃದಂತನಾಮ)

ಅವನು ಮನೆಯನ್ನು ನೋಡಿದ್ದು, ಏನೂ ಹೇಳಲಿಲ್ಲ. (ಅಪೂರ್ಣಭೂತ)

ಅನು ಬಂದದ್ದು ನನ್ನನ್ನು ನೋಡುವುದಕ್ಕೆ (ಕೃದಂತನಾಮ)

ಅವನು ಬಂದಿದ್ದು, ನನ್ನನ್ನು ನೋಡದೆ ಹೋದ. (ಅಪೂರ್ಣಭೂತ)

ಹೊಸಗನ್ನಡದ ಆಡುಮಾತಿನಲ್ಲಿ ಕೆಲವರು 'ಬಂದಿದ್ದು' ಎಂಬುದನ್ನೇ ಎರಡೂ ಅರ್ಥಗಳಲ್ಲಿ ಒಂದು ಶೋಕಿಯಾಗಿ ಬಳಸುವುದು ಕಂಡು ಬರುತ್ತದೆ. ಇದರಿಂದ ಸ್ಪಷ್ಟತೆಗೆ ಭಂಗವಾಗುತ್ತದೆ.

ಭಾಷೆ ಒಂದು ಜೀವಂತ ಶಕ್ತಿಯಾದುದರಿಂದ ಅದರಲ್ಲಿ ಕೊಳು, ಕೊಡು, ಇಡು, ಬಿಡು ಕಾಲದಿಂದ ಕಾಲಕ್ಕೆ ಆಗುತ್ತಲೇ ಇರುತ್ತವೆ. ಹೀಗೆಯೇ ಆಗಬೇಕು, ಹಾಗೆ ಆಗಬಾರದೆಂಬ ನಿಷೇಧಕ್ಕೆ ಅಲ್ಲಿ ಅವಕಾಶವಿಲ್ಲ. ಅಭಿಪ್ರಾಯ ವಿನಿಮಯ ಅದರ ಉದ್ದೇಶವಾದುದರಿಂದ ಅದಕ್ಕೆ ಭಂಗ ಬರಬಾರದು. ಅರ್ಥ ಸಂದೇಹವನ್ನುಂಟು ಮಾಡುವ ಪ್ರಯೋಗಗಳು ಅನರ್ಥಕ್ಕೆ ಕಾರಣವಾಗುತ್ತವೆ. ಆಡುಮಾತಿನಲ್ಲಿ, ಆಡುವವರು ಪ್ರತ್ಯಕ್ಷವಾಗಿರುವುದರಿಂದ ಸಂದೇಹ ಬಂದಲ್ಲಿ ಕೂಡಲೇ ಪರಿಹರಿಸಿಕೊಳ್ಳಲು ಸಾಧ್ಯವಿಲ್ಲದೆ. ಆದರೆ ಬರಹದಲ್ಲಿ ವ್ಯಕ್ತಿಯು ಎದುರಲ್ಲಿಲ್ಲದಿರುವುದರಿಂದ ಸ್ಪಷ್ಟತೆಯು ಅನಿವಾರ್ಯ, ಅಪಾರ್ಥಕ್ಕೆ ಅವಕಾಶವಾಗಲೇಬಾರದು. ಭಾಷೆ ಸರಿಯಾದರೆ ಸರ್ವೋದ್ದೇಶ ಸಾಧಕವೂ ಹೌದು, ಅಲ್ಲದಿದ್ದರೆ ಮಾರಕವೂ ಆಗಬಹುದು. ಇದು, ಅದನ್ನು ಬಳಸುವವವನ ನೈಪುಣ್ಯವನ್ನು ಹೊಂದಿರುತ್ತದೆ. ಭಾಷೆಯಲ್ಲಿ ಮಡಿವಂತಿಕೆಗೆ ಅವಕಾಶವಿಲ್ಲದಿದ್ದರೂ ಅದರ ಉದ್ದೇಶ ಸಾರ್ಥಕವಾಗಬೇಕೆಂಬ ಕಳಕಳಿ ಆ ಭಾಷೆಯನ್ನು ಬಳಸುವವರೆಲ್ಲರಲ್ಲೂ ಇರಬೇಕಾಗುತ್ತದೆ. ಭಾಷೆ ಒಬ್ಬೊಬ್ಬನದಲ್ಲ. ಅದು ಸಮಾಜದ ಸಂಪತ್ತು. ಪಚ್ಚೆ ಪೈರು ಆಹಾರ ಸಂಪತ್ತನ್ನು ಬೆಳೆಸುವ ಜೀವನದಿ ಭಾಷೆ, ತುಬ್ಬಾಗಿ ದಡ ಮೀರಿ ಹರಿದರೆ ತಾನು ಬೆಳೆಸಿದುದನ್ನೇ ಅದು ಕೊಚ್ಚಿಕೊಂಡು ಹೋಗಬಹುದು. ಈ ವಿಜ್ಞಾನ ಯುಗದಲ್ಲಿ, ವಿಜ್ಞಾನ ಮತ್ತಿತರ ಎಲ್ಲಾ ವಿಷಯಗಳ ವಾಹಕವಾದ ಭಾಷೆ ಅವುಗಳಷ್ಟೇ ಮುಖ್ಯವಲ್ಲವೇ?

**ಡಾ॥ ಉಪ್ಪಂಗಳ ರಾಮಭಟ್ಟ**

# ಗ್ರಂಥಾವಲೋಕನ

## ತಮಿಳುನಾಡಿನ ಕನ್ನಡ ಶಾಸನಗಳು*

ಇತಿಹಾಸ ಲೇಖನ ಕಾರ್ಯದಲ್ಲಿ ಶಾಸನಗಳು ಅತ್ಯಂತ ಪ್ರಮುಖ ಆಕರಗಳು. ಕರ್ನಾಟಕದಲ್ಲಿ ಒಂದೂವರೆ ಶತಕದಷ್ಟು ಹಿಂದೆಯೇ ಆರಂಭವಾದ ಶಾಸನಗಳ ಸಂಗ್ರಹಣೆ, ವಿಶ್ಲೇಷಣೆ ಹಾಗೂ ಪ್ರಕಟಣೆಯ ಕಾರ್ಯ ಇಂದಿಗೂ ನಿರಂತರವಾಗಿ ಮುಂದುವರೆದಿರುವುದು ನಾಡಿನ ಈ ಐತಿಹಾಸಿಕ ಸಂಪತ್ತಿನ ಅಗಾಧತೆಗೆ ಹಿಡಿದ ಕನ್ನಡಿ. ಪ್ರಸ್ತುತ ಈ ಕ್ಷೇತ್ರದಲ್ಲಿ ಅಧ್ಯಯನ ಎರಡು ರೂಪಗಳಲ್ಲಿ ನಡೆಯುತ್ತಿದೆ. ಮೊದಲನೆಯದು ಅಪ್ರಕಟಿತ ಶಾಸನಗಳ ಶೋಧನೆ ಹಾಗೂ ಪ್ರಕಟಣೆ. ಎರಡನೆಯದು ಈಗಾಗಲೇ ಪ್ರಕಟವಾಗಿರುವ ಶಾಸನಗಳ ಪುನರ್ಪರಿಶೀಲನೆ ಹಾಗೂ ವಿಶ್ಲೇಷಣೆ. ಇತ್ತೀಚೆಗೆ ಪ್ರಕಟವಾಗಿರುವ ಶ್ರೀ ಪಿ.ವಿ. ಕೃಷ್ಣಮೂರ್ತಿಯವರ 'ತಮಿಳುನಾಡಿನ ಕನ್ನಡ ಶಾಸನಗಳು' ಎರಡನೆ ಪ್ರಕಾರಕ್ಕೆ ಸೇರುವ ಮೌಲಿಕ ಕೃತಿಗಳಲ್ಲಿ ಒಂದು. ವೃತ್ತಿಯಲ್ಲಿ ಎಂಜಿನೀಯರರಾಗಿದ್ದೂ ಅಧ್ಯಯನ, ಅಧ್ಯಾಪನಗಳಿಂದ ಶಾಸನ ಶಾಸ್ತ್ರ ಕ್ಷೇತ್ರದಲ್ಲಿ ಅಧಿಕೃತತೆಯನ್ನು ಗಳಿಸಿರುವ ಕೃಷ್ಣಮೂರ್ತಿಯವರ ಅನೇಕ ವರ್ಷಗಳ ಪರಿಶ್ರಮದ ಫಲವಾದ ಈ ಪುಸ್ತಕ ಇತಿಹಾಸಕರ್ತರನ್ನು ಆಕರ್ಷಿಸಿದೆ.

ಪ್ರಾಚೀನ ಕರ್ನಾಟಕದ ಭಾಗಗಳಾಗಿದ್ದು ಈಗ ತಮಿಳುನಾಡಿಗೆ ಸೇರಿಹೋಗಿರುವ ಧರ್ಮಪುರಿ, ಸೇಲಂ, ಮಧುರೆ, ತಿರುನಲ್ವೇಲಿ, ತಂಜಾರೂರು ಮುಂತಾದ ಸ್ಥಳಗಳಲ್ಲಿ ಹರಡಿದ್ದು ಪುರಾತತ್ವ ಇಲಾಖೆಯ ವಾರ್ಷಿಕ ವರದಿಗಳು, ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ ಸಂಪುಟಗಳು ಹಾಗೂ ರಾಬರ್ಟ್ ಸಿವೆಲ್, ವಿ. ರಂಗಾಚಾರ್ಯ ಮುಂತಾದ ಲೇಖಕರ ಗ್ರಂಥಗಳಲ್ಲಿ ದಾಖಲಾಗಿರುವ ಸುಮಾರು ಎರಡುನೂರು ಕನ್ನಡ ಶಾಸನಗಳನ್ನು ಇಲ್ಲಿ ರಾಜಕೀಯ ಮಹತ್ವ; ಧಾರ್ಮಿಕ ಮಹತ್ವ; ಪ್ರಾದೇಶಿಕ ಆಡಳಿತ ವಿಭಾಗ; ಕೃಷಿ-ನೀರಾವರಿ; ವಾಣಿಜ್ಯ; ವ್ಯಕ್ತಿ; ಸ್ಥಳನಾಮ; ಸಾಹಿತ್ಯ, ಭಾಷೆ ಹಾಗೂ ಲಿಪಿ ಎಂಬ ಶೀರ್ಷಿಕೆಗಳ ಅಡಿಯಲ್ಲಿ ವಿಸ್ತೃತವಾಗಿ ಅಭ್ಯಸಿಸಲಾಗಿದೆ. ಸಂಖ್ಯಾದೃಷ್ಟಿಯಿಂದ ಇದೇನೂ ಹಿರಿದಲ್ಲವೆಂದು ತೋರಿದರೂ ೧೩೮ ಪುಟಗಳ ಈ ಕೃತಿಯ ರಚನೆಯ ಹಿಂದೆ ಎಷ್ಟು ಪರಿಶ್ರಮವಿದೆ ಎಂಬುದನ್ನು ಗುರುತಿಸಬಹುದಾಗಿದೆ. "(ತಮಿಳುನಾಡಿನಲ್ಲಿ) ಪತ್ತೆಯಾಗಿರುವ (ಕನ್ನಡ) ಶಾಸನಗಳ ಸಂಖ್ಯೆ ಸುಮಾರು 200. ಅವುಗಳಲ್ಲಿ ಪೂರ್ಣ ಪಾಠಗಳು ಪ್ರಕಟವಾಗಿರುವುದು ಕೇವಲ 95ಕ್ಕೆ ಮಾತ್ರ....ನೀಲಗಿರಿ, ಪೆರಿಯಾರ್ ಕೊಯಮತ್ತೂರು, ಧರ್ಮಪುರಿ, ಸೇಲಂ ಜಿಲ್ಲಾ ಪ್ರದೇಶಗಳಲ್ಲಿನ ಶಾಸನಗಳ ಪರಿವೀಕ್ಷಣೆ....ಸಮರ್ಪಕವಾಗಿ ನಡೆದೇ ಇಲ್ಲವೆಂಬುದು, ಈವರೆಗೆ ಪ್ರಕಟವಾಗಿರುವ

* ಲೇ : ಪಿ. ವಿ. ಕೃಷ್ಣಮೂರ್ತಿ. ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ : 138, ಬೆಲೆ : 28-00, 1997.

ಶಾಸನ ಸಂಪುಟಗಳು ಮತ್ತು ವಾರ್ಷಿಕ ವರದಿಗಳನ್ನು ಗಮನಿಸಿದರೆ ಮನಗಾಣಬಹುದಾಗಿದೆ....ತಮಿಳುನಾಡಿನ ಎಲ್ಲ ಕನ್ನಡ ಶಾಸನಗಳು ಶೋಧವಾಗದೆಯಿರುವುದು, ಶೋಧವಾಗಿರುವ ಶಾಸನಗಳ ಪೂರ್ಣಪಾಠಗಳು ಅಲಭ್ಯವಾಗಿರುವುದು, ಪೂರ್ಣಪಾಠ ಲಭ್ಯವಿರುವ ಶಾಸನಗಳ ಪ್ರಮಾಣ ಅಲ್ಪವಾಗಿರುವದು ಈ ದಿಸೆಯಲ್ಲಿ ಅಧ್ಯಯನ ಕೈಗೊಳ್ಳಲು ಎದುರಾಗುವ ಸವಾಲುಗಳಾಗಿರುತ್ತವೆ." ಎಂಬ ಲೇಖಕರ ಮಾತುಗಳಿಂದ ತಿಳಿಯಬಹುದು.

ತಮಿಳುನಾಡಿನಲ್ಲಿರುವ ಕನ್ನಡ ಶಾಸನಗಳನ್ನು ಅವುಗಳ ಹರಹು, ಸ್ವರೂಪ ಹಾಗೂ ಭಾಷಿಕ ಹಿನ್ನೆಲೆಯಲ್ಲಿ 1) ಸಹಜ ಕನ್ನಡ ಪ್ರದೇಶದ ಶಾಸನಗಳು. 2) ಕನ್ನಡ ಅರಸು ಮನೆತನಗಳ ರಾಜಭಾಷಾ ಶಾಸನಗಳು ಹಾಗೂ 3) ದಿಗ್ವಿಜಯದ ಸ್ಮಾರಕಗಳು ಎಂದು ಮೂರು ವಿಭಾಗಗಳಾಗಿ ವಿಂಗಡಿಸುವ ಲೇಖಕರು ಕಾವೇರಿ ತೀರದ ಧರ್ಮಪುರಿ, ಸೇಲಂ ಹಾಗೂ ಪೆರಿಯಾರ್ ಜಿಲ್ಲೆಗಳಲ್ಲಿ ರಾಜ್ಯದ ಒಟ್ಟು ಕನ್ನಡ ಶಾಸನಗಳಲ್ಲಿ ಶೇಕಜಾ ೬0ಕ್ಕೂ ಹೆಚ್ಚಿನವು ಹರಡಿಕೊಂಡಿವೆ ಎಂಬುದನ್ನು ಸಾಧಾರವಾಗಿ ತೋರಿಸಿ "ಕಾವೇರಿಯಿಂದ ಮಾ...." ಎಂಬ ಕವಿರಾಜಮಾರ್ಗಕಾರನ ಮಾತುಗಳು ಕೇವಲ ಉತ್ಪ್ರೇಕ್ಷೆಯಲ್ಲ ಎಂಬುದನ್ನು ಸಾಬೀತು ಪಡಿಸಿದ್ದಾರೆ. ಜನ್ಮತಃ ತಮಿಳರಾದ ಚೋಳ ಅರಸರೂ ತಮ್ಮ ಆಳ್ವಿಕೆಯ ಮೊದಲ ಐವತ್ತು ವರ್ಷಗಳ ಕಾಲ ಕನ್ನಡವೇ ಆಡು ನುಡಿಯಾಗಿದ್ದ ಈ ಪ್ರದೇಶದಲ್ಲಿ ಕನ್ನಡದಲ್ಲಿಯೇ ಶಾಸನಗಳನ್ನು ಹಾಕಿಸಿದ್ದಾರೆಂಬ ಗಮನಾರ್ಹ ಅಂಶವನ್ನು ಅವರು ಇಲ್ಲಿ ಎತ್ತಿ ಹಿಡಿದಿದ್ದಾರೆ. ಇವಲ್ಲದೆ ಶಾಸನೋಕ್ತವಾದ ಸ್ಥಳನಾಮಗಳು ಹಾಗೂ ವ್ಯಕ್ತಿ ನಾಮಗಳನ್ನು ವಿಶ್ಲೇಷಿಸಿ ಈ ಪ್ರಾಂತ್ಯ ನಿಸ್ಸಂದಿಗ್ಧವಾಗಿ ಪ್ರಾಚೀನ ಕರ್ನಾಟಕದ ಒಂದು ಭಾಗವಾಗಿತ್ತೆಂಬುದನ್ನು ರುಜುವಾತು ಪಡಿಸಿದ್ದಾರೆ.

ಪ್ರಾಚೀನ ಆಡಳಿತ ವಿಭಾಗಗಳ ಬಗೆಗೆ ಅನೇಕ ವರ್ಷಗಳಿಂದ ವಿಶೇಷವಾಗಿ ಅಧ್ಯಯನವನ್ನು ನಡೆಸುತ್ತಾ ಬಂದಿರುವ ಲೇಖಕರು ಪ್ರಸ್ತುತ ಗ್ರಂಥದಲ್ಲಿ ಅದರ ವ್ಯಾಪ್ತಿಯನ್ನು ತಮಿಳುನಾಡಿಗೂ ವಿಸ್ತರಿಸಿದ್ದಾರೆ. ಒಂದೇ ಪ್ರದೇಶವು ಅನೇಕ ರಾಜರ ಆಳ್ವಿಕೆಯ ಕಾಲದಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟುದುದರಿಂದ ಈಗ ಅವುಗಳ ಗುರುತಿಸುರಿಕೆ ಹಾಗೂ ಎಲ್ಲೆಗಳ ನಿಷ್ಕರ್ಷೆ ಒಂದು ಜಟಿಲ ಸಮಸ್ಯೆಯಾಗಿದೆ. ಅನೇಕ ಸಂದರ್ಭಗಳಲ್ಲಿ ಈ ಸಂಬಂಧಿತ ಮಾಹಿತಿ ಸಮಗ್ರವಾಗಿ ಒಂದೇ ಕಡೆ ಸಿಗುವುದೂ ದುರ್ಲಭವಾಗಿತ್ತು. ಈ ಕೃತಿಯು ಆ ಸಮಸ್ಯೆಯನ್ನು ಸ್ವಲ್ಪ ಮಟ್ಟಿಗಾದರೂ ಬಗೆಹರಿಸಿದೆ ಎನ್ನಬಹುದು.

ಶಾಸನಗಳೆಂದರೆ ಕೇವಲ ಯುದ್ಧದ ಅಥವಾ ದಾನದ ಮಾಹಿತಿಯನ್ನು ತುಂಬಿಕೊಂಡ ಜಡಕಲ್ಲುಗಳೆಂಬ ಬಹುಜನಾಭಿಪ್ರಾಯವನ್ನು ಯಶಸ್ವಿಯಾಗಿ ದೂರಗೊಳಿಸುವ ಈ ಪುಸ್ತಕವು ಪ್ರಾಚೀನ ಕರ್ನಾಟಕದ ಸಾಂಸ್ಕೃತಿಕ ಸ್ವರೂಪದ ವಿವಿಧ ಮುಖಗಳನ್ನು ಓದುಗರಿಗೆ ಪರಿಚಯಿಸುತ್ತವೆ. ಉದಾಹರಣೆಗೆ, ಪುಲಿಕೇಶಿಯ ಮಗನಾದ ವಿಕ್ರಮಾದಿತ್ಯನು ಕ್ರಿ.ಶ. ೬[illegible]ರಲ್ಲಿ ಪಲ್ಲವರ ರಾಜಧಾನಿಯಾದ ಕಂಚಿಯನ್ನು ಗೆದ್ದಾಗ

ಇತರರಂತೆ ಸೋತರಾಜನ ರಾಜ್ಯದ ಸಂಪತ್ತನ್ನು ಕಬಳಿಸದೆ ಕಂಚಿಯ ರಾಜಸಿಂಘೇಶ್ವರ ದೇವಾಲಯದ ದತ್ತಿಗಳನ್ನು ಮರಳಿ ಆ ದೇವರಿಗೇ ನೀಡಿದ ಅಪೂರ್ವ ಪ್ರಸಂಗ ಒಂದು ಕಡೆ ಉಲ್ಲೇಖಿತವಾಗಿದ್ದರೆ ಮತ್ತೊಂದೆಡೆ ಕಳೆದ ಶತಮಾನದಲ್ಲಿ ಜೂಜು, ವ್ಯಭಿಚಾರ, ಅನಾಚಾರಗಳಿಗೆ ಪ್ರಸಿದ್ಧವಾಗಿದ್ದ ಹನುಮಂತ ಎಂಬಾತ ಕ್ರಿ.ಶ. 1910ರಲ್ಲಿ ಧರ್ಮಪುರಿ ಜಿಲ್ಲೆಯ ಗುಮ್ಮಳಾಪುರದಲ್ಲಿ ಕುದುರೆಯೇರಿ ವೇಗವಾಗಿ ಬಂದು ಅಲ್ಲಿನ ಮಾರಮ್ಮನ ಗುಡಿಯ ಸಮೀಪದ ಸಿಡಿಗಂಬಕ್ಕೆ ಡಿಕ್ಕಿ ಹೊಡೆದು ಸ್ಥಳದಲ್ಲೇ ಸತ್ತ ವಿವರಗಳನ್ನು ತಿಳಿಸುವ ವೀರಗಲ್ಲು ಪ್ರಸ್ತಾಪಗೊಂಡಿದೆ!

ಒಟ್ಟಿನಲ್ಲಿ ತಮಿಳುನಾಡಿನ ಕನ್ನಡ ಶಾಸನಗಳನ್ನು ಅನುಲಕ್ಷಿಸದೆ ಕರ್ನಾಟಕದ ಇತಿಹಾಸವನ್ನು ಸಮಗ್ರವಾಗಿ ರಚಿಸುವುದು ಅಸಾಧ್ಯ ಎಂಬ ಭಾವನೆಯನ್ನು ಹುಟ್ಟಿಸುವಲ್ಲಿ ಶ್ರೀ ಕೃಷ್ಣಮೂರ್ತಿಯವರ ಈ ಕೃತಿ ಸಫಲವಾಗಿದೆ. ತಮಿಳುನಾಡೂ ಸೇರಿದಂತೆ ಕರ್ನಾಟಕದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನಡೆಯಬೇಕಿರುವ ವ್ಯಾಪಕವಾದ ಕ್ಷೇತ್ರ ಕಾರ್ಯ, ವೈಜ್ಞಾನಿಕವಾದ ವರ್ಗೀಕರಣ ಹಾಗೂ ಮಾಹಿತಿ ಆಧಾರಿತ ವಿಶ್ಲೇಷಣೆಗಳ ಅಗತ್ಯತೆಯನ್ನು ಬೆಟ್ಟು ಮಾಡಿ ತೋರಿಸುವ ಈ ಹೊತ್ತಿಗೆ ಈ ದಿಸೆಯಲ್ಲಿ ಇಟ್ಟ ಒಂದು ಪ್ರಾಮಾಣಿಕವಾದ ಹೆಜ್ಜೆಯಾಗಿದೆ.

ಎಸ್. ಎಲ್. ಶ್ರೀನಿವಾಸಮೂರ್ತಿ

---

## ಭೀಮಸೇನ ವಿಜಯ

"ಭೀಮಸೇನ ವಿಜಯ"ವು ವಾರ್ಧಕ ಷಟ್ಪದಿಯಲ್ಲಿ ರಚಿತವಾದ ಒಂದು ಮಹಾ ಕಾವ್ಯವಾಗಿದೆ. ಗಮಕಿ ಶ್ರೀ ಆರ್. ಶಂಕರನಾರಾಯಣರಾಯರು ಈ ಕೃತಿಯ ಲೇಖಕರು. ಅವರು ಭೀಮಸೇನನ ಕುರಿತಾಗಿ ಬರೆಯುತ್ತಾ ಇಡೀ ಮಹಾಭಾರತದ ಕತೆಯನ್ನು ಇದರಲ್ಲಿ ಅಳವಡಿಸಿದ್ದಾರೆ. ಪ್ರಾಸ, ಯತಿ, ಗಣ, ಮಾತ್ರೆಗಳೇ ಮುಂತಾದ ನಿಯಮಗಳಿಂದ ಕೂಡಿದ ಕಾವ್ಯ ರಚನೆಯೇ ಕಾಣದಾಗಿರುವ ಇಂದಿನ ಪರಿಸ್ಥಿತಿಯಲ್ಲಿ ಲೇಖಕರು ಈ ಎಲ್ಲ ಕಾವ್ಯಗುಣಗಳನ್ನು ಸಮನ್ವಯ ಗೊಳಿಸಿರುವುದು ಸ್ತುತ್ಯವೇ ಆಗಿದೆ.

ಈ ಕಾವ್ಯದ ಕುರಿತು ಅನೇಕ ವಿದ್ವಾಂಸರು ಈಗಾಗಲೇ ಮೆಚ್ಚು ನುಡಿಗಳನ್ನು ಬರೆದಿದ್ದಾರೆ. ಅದರ ವಿವಿಧ ಮಗ್ಗುಲುಗಳ ವಿಶ್ಲೇಷಣೆಯನ್ನು ನಡೆಸಿದ್ದಾರೆ. ಅವರೆಲ್ಲ ಹೇಳಿದೆ ಬಿಟ್ಟಿರುವ ವಿಷಯಗಳನ್ನು ನೋಡಿದಾಗ, ಈ ಗ್ರಂಥದಲ್ಲಿ ಕತೆಯ ಓಟವು ಹೇಗೆ ಸಾಗಿದೆ ಎನ್ನುವುದರ ಬಗೆಗೆ ನಾಲ್ಕು ಸಾಲುಗಳನ್ನು ಬರೆಯಬಹುದೆನಿಸುತ್ತದೆ.

ಮಹಾಭಾರತದ ಕಥೆಯು ಹಲವು ವ್ಯಕ್ತಿಗಳ ಸಮೂಹವನ್ನು ಕೇಂದ್ರವಾಗಿ ಇಟ್ಟುಕೊಂಡಿದೆ. ಅವರೆಲ್ಲರ ಜನನ, ಕಾರ್ಯಕೌಶಲ, ಒಟ್ಟಾರೆಯಾದ ಕಥಾಸಂವಿಧಾನದಲ್ಲಿ ಅವರ ಪಾತ್ರಗಳ ವರ್ತನೆಯು ಕ್ಲಿಷ್ಟವೇ ಆಗಿದ್ದರೂ ಶ್ರೀ ರಾಯರು

ಜಾಣ್ಮೆಯಿಂದ, ಸೂಕ್ಷ್ಮವಾಗಿ ಅವೆಲ್ಲವುಗಳಿಗೂ ನ್ಯಾಯವನ್ನು ಸಲ್ಲಿಸಿದ್ದಾರೆ. ಹೀಗಾಗಿ ಕಥೆಯು ವೇಗವಾಗಿ ಮುಂದುವರೆಯುತ್ತದೆ.

ಇದರ ಸೋಪಾನ ಹದಿನಾಲ್ಕರಲ್ಲಿ ಶ್ರೀ ಕೃಷ್ಣನು ಪಾಂಡವರ ರಾಯಭಾರಿಯಾಗಿ ಕೌರವರಲ್ಲಿಗೆ ಹೊರಡುವ ಸಮಯದಲ್ಲಿ ಸಂದಿಯೋ, ಸಂಗ್ರಾಮವೋ ಎನ್ನುವ ಚರ್ಚೆ ಬಂದಾಗ, ಭೀಮಸೇನನು ಆವರೆಗೆ ತಾನು ಅನುಭವಿಸಿದ ಕಷ್ಟ ಮತ್ತು ಅದರ ನಿವಾರಣೆಗಾಗಿ ಮಾಡಿದ ಸಾಹಸ ಕಾರ್ಯಗಳು, ಅವುಗಳಲ್ಲೂ ಮುಖ್ಯವಾಗಿ ಹಿಡಂಬಿ, ಬಕಾ, ಕಿಮ್ಮೀರಾದಿ ರಾಕ್ಷಸರ ವಧೆಗಳ ಬಗೆಗೆ ಹೇಳಿಕೊಳ್ಳುತ್ತಾನೆ. ಈ ಪ್ರಸಂಗಗಳೆಲ್ಲ ಓದುಗರಿಗೆ ತಿಳಿದವುಗಳೇ ಆಗಿರುವುದರಿಂದ ಹಲವಾರು ಕಡೆಗಳಲ್ಲಿ ಪುನರುಕ್ತಿ ಎನಿಸಲೂ ಬಹುದು. ಆದರೆ ಇದನ್ನ ಕವಿಯ ಸೋಲು ಎನ್ನುವಂತಿಲ್ಲ. ಕೃಷ್ಣನು ಸಂಧಾನಕ್ಕೆ ಬರುವದರ ಮೊದಲೇ ಹಸ್ತಿನಾವತಿಯಲ್ಲೂ ಪಾಂಡವರಿಗೆ ರಾಜ್ಯವನ್ನ ಕೊಡಬೇಕೋ ಬೇಡವೋ ಎನ್ನುವ ಚರ್ಚೆಯು ನಡೆದಿರುತ್ತದೆ. ಈಗಿನ ಅಸೆಂಬ್ಲಿಯಲ್ಲಿ ನಡೆಯುವಂತೆ ಮತ ಚಲಾವಣೆಯೂ ಆಗಿ ಕೌರವನ ಪಕ್ಷದವರಿಗೆ ಬಹುಮತವೂ ದೊರೆತುದು ವಿದಿತವೇ ಇದೆ. ಈ ಮೂಲಕ ಕೃತಿಯು ಸಮಕಾಲೀನ ಮೌಲ್ಯವನ್ನು ಪಡೆಯುತ್ತದೆ.

ಕಾವ್ಯದ ರಭಸವು ಹದಿನೇಳನೇ ಸೋಪಾನದಿಂದ ವಿಜೃಂಭಿಸಿದೆ. ಕುರುಕ್ಷೇತ್ರ ಯುದ್ಧದಲ್ಲಿ ಭೀಮಸೇನನು ಮಹಾ ಮಹಾ ಯೋಧರನ್ನು ಕೆಡಹಾಕಿದುದು ಇಲ್ಲಿ ಮನೋಜ್ಞವಾಗಿ ಚಿತ್ರಿತವಾಗಿದೆ. ಭಾಗದತ್ತನ ಆನೆ ಸುಪ್ರತೀತದೊಡನೆ ಕಾದಾಡುತ್ತ ಭೀಮನು ಆಯಾಸ ಪಟ್ಟಾಗ, ಅದರ ಘಂಟಾಮಣಿಯಲ್ಲಿ ನೇತಾಡಿ ಆಯಾಸವನ್ನು ಪರಿಹರಿಸಿಕೊಂಡು, ಯುದ್ಧವನ್ನು ಮುಂದುವರೆಸುತ್ತಿದ್ದ ಎನ್ನುವದನ್ನ ಎರಡು ಪದ್ಯಗಳಲ್ಲಿ ಹೇಳಬಹುದಿತ್ತು.

ಹಿಂದಿನ ಕವಿಗಳು ಹೇಳಿದ "ಮದಗಜವೆರಡರ ಬಾಲದ....ತಿದಿಯೊತ್ತುವ...." ಇವೆಲ್ಲ ಭಾಷಾಂತರವೆನ್ನುವಂತೆ ಇಲ್ಲ. ಪಾಂಡವ ಸಭೆಯಲ್ಲಿ ಕೃಷ್ಣ-ಭೀಮ ಸಂವಾದದ ಸಾರವು ಬೇರೆ ಭಾರತ ಕಥೆಗಳಲ್ಲಿ ಪಾಂಚಾಲೆ-ಭೀಮ ಸಂವಾದವಾಗಿ ಬಂದಿದೆ. ಇದನ್ನ ಕವಿ ಭೀಮ-ಕೃಷ್ಣ ಸಂವಾದವಾಗಿರುವುದರಿಂದ ಅದು ದ್ವಿರುಕ್ತಿಯೆನಿಸುತ್ತದೆ.

ಶ್ರೀ ಶಂಕರನಾರಾಯಣರಾಯರಿಗೆ ಪ್ರತಿಭೆ, ಅಭ್ಯಾಸ, ಕೃತಿ ಪರಿಚಯ ಅಲ್ಲದೆ ಪ್ರಸ್ತುತ ಕಾಲದ ಸಾಮಾಜಿಕ, ಅಧ್ಯಾತ್ಮಿಕ ಕ್ಷೇತ್ರಗಳ ಅನುಭವಗಳೂ ಇರುವುದರಿಂದ ಅವರು ಸರ್ವಹೃದ್ಯವಾಗಿ ಕಥೆ ಹೇಳಬಲ್ಲರು ಎಂಬುದನ್ನ ಈ ಕೃತಿಯು ತೋರಿಸಿ ಕೊಟ್ಟಿದೆ. ಷಟ್ಪದಿಗಳಲ್ಲಿ ವಾರ್ಧಕ ಷಟ್ಪದಿಯು ಕ್ಲಿಷ್ಟವಾದುದು. ಒಂದನೆಯದಾಗಿ ಪದ್ಯವು ವಿಸ್ತಾರವಾಗಿರುವುದರಿಂದ ಅದನ್ನಿಡೀ ತುಂಬುವುದಕ್ಕೆ ವಿಷಯ ಸಾಂದ್ರತೆಯು ಬೇಕಾಗುತ್ತದೆ. ರಾಘವಾಂಕ, ಲಕ್ಷ್ಮೀಶರಂತೆ ವಿಷಯ ಸಂಗ್ರಹ ಹಾಗೂ ಪದ ಸಂಪತ್ತುಗಳು ಇರಬೇಕಾಗುತ್ತವೆ. ಕೇವಲ ಮಾತ್ರಾಗಣಗಳಿಂದೇ ಭಾವಿಸಲ್ಪಡುವ ಷಟ್ಪದಿಗಳಲ್ಲಿಯೂ ವಿಷಮಸ್ಥಾನಗಳಲ್ಲಿ ಜಗಣ ಬಂದಾಗ ಅದು ಕೆಡುತ್ತದೆ. ಇಂಥವು ಕೆಲವು ಇದ್ದರೂ

ಅವು ಮುದ್ರಣ ದೋಷಗಳೆಂದು ನಾನು ಪರಿಗಣಿಸಿದ್ದೇನೆ. 'ನಡೆವರೆಡಹದೆ ಕುಳಿತವರೆಡಹುವರೆ' ಎಂಬ ಕವಿ ವಾಣಿಯಂತೆ ಕಾವ್ಯ ರಚನೆಯಲ್ಲಿ ಒಂದೆರಡು ತಪ್ಪುಗಳು ಬಂದರೆ ಅವುಗಳನ್ನು ತಿಳಿದವರು ತಿದ್ದಿಕೊಳ್ಳಬೇಕಲ್ಲದೆ ದೋಷಿಸಬಾರದು. ಶ್ರೀಯುತ ಶಂಕರನಾರಾಯಣರಾಯರು ಒಬ್ಬ ವರಕವಿ. ಅವರ ಪದ್ಯಗಳು ಮಾತಾಡಿದಂತೆ ಸುಲಲಿತವಾಗಿ ಹೊರ ಹೊಮ್ಮಿವೆ.

**- ಟಿ. ಕೃಷ್ಣಭಟ್ಟ, ವಿದ್ವಾನ್**

---

## ಮಹಾಶಿವಶರಣೆ ಅಕ್ಕಮಹಾದೇವಿ

ಕನ್ನಡ ಸಾಹಿತ್ಯ ಲೋಕದ ಪ್ರಪ್ರಥಮ ಕವಿಯತ್ರಿ ಎಂಬ ಹೆಗಳಿಕೆ ಪಡೆದ ಅಕ್ಕಮಹಾದೇವಿಯ ವ್ಯಕ್ತಿ ಚಿತ್ರಣ ಲೇಖಕಿ ಎ. ವಿಜಯಲಕ್ಷ್ಮಿಯವರ ಲೇಖನಿಯಿಂದ ಹರಿದ ಬಂದ ರೀತಿ ವಿಶಿಷ್ಟವಾದುದಾಗಿದೆ.

ಅಕ್ಕನ ವಚನಗಳ ಆಧಾರದಿಂದಲೇ ಆಕೆಯ ಜೀವನದ ಅನೇಕ ಘಟ್ಟಗಳ ಪರಿಚಯವನ್ನಿಲ್ಲಿ ಕಾಣಬಹುದು.

ಮೋಕ್ಷಕ್ಕೆ ಸಾಧನವಾಗುವ ಹಾದಿಗಳಲ್ಲಿ ಒಂದಾದದ್ದು ಭಕ್ತಿಭಾವ, ಈ ಭಕ್ತಿಯಲ್ಲೇ ಅನೇಕ ಮಜಲುಗಳನ್ನು ಕಾಣಬಹುದು. ಪರಮಾತ್ಮನೊಂದಿಗೆ ಗುರು-ಶಿಷ್ಯ ಸಂಬಂಧ ಒಡೆಯ-ಸೇವಕನ ಭಾವದ ಗೀತೆ, ಕೀರ್ತನೆ, ವಚನಗಳನ್ನು ಸಾಹಿತ್ಯ ಕ್ಷೇತ್ರದಲ್ಲಿ ಹೇರಳವಾಗಿ ಕಾಣುತ್ತೇವೆ.

ಕನ್ನಡದಲ್ಲಿ ಮೊಟ್ಟಮೊದಲಬಾರಿ ಸತಿ-ಪತಿ ಭಾವದ ವಚನಗಳನ್ನು ರಚಿಸಿದ ಕೀರ್ತಿ ಅಕ್ಕನಿಗೆ ಸಲ್ಲಬೇಕು. ಅದನ್ನು ಸವಿಸ್ತಾರವಾಗಿ ಲೇಖಕಿ ಬಣ್ಣಿಸಿದ್ದಾರೆ.

ಮನುಷ್ಯನನ್ನು ಪ್ರೀತಿಸಿದರೆ ಬರೀ ದುಃಖ ಮಾತ್ರ ದೊರೆಯುತ್ತದೆ. ಆದರೆ ಭಗವಂತನನ್ನು ಪ್ರೀತಿಸಿದರೆ ಅನಂತ ಸುಖ ನಮ್ಮದಾಗುತ್ತದೆ ಎಂಬ ಸಂದೇಶವನ್ನು ಸಾರುತ್ತದೆ ಈ ಗ್ರಂಥ. ಆದರೆ ಅಕ್ಕನ ಪ್ರತಿಯೊಂದು ವಚನಕ್ಕೂ ವಿವರಣೆ ನೀಡಬೇಕಾದ ಅಗತ್ಯವಿರಲಿಲ್ಲ ಎನಿಸುತ್ತದೆ. ಅಕ್ಕನ ವಚನಗಳೇ ಅವಳ ವಿರಹದ ತೀವ್ರತೆಯನ್ನು ಸಮರ್ಥವಾಗಿ ಮನಮುಟ್ಟುವಂತೆ ಅಭಿವ್ಯಕ್ತಿಗೊಳಿಸುತ್ತದೆ. ಒಂದು ವಚನ ತನ್ನ ವಚನದ ಮೂಲಕವೇ ಅಪಾರ ಅರ್ಥ ವಿಸ್ತಾರವನ್ನು ಒಳಗೊಳ್ಳುತ್ತಾ ಹೋಗುತ್ತದೆ. ಅದನ್ನು ವಾಚ್ಯವಾಗಿಸದೆ ಓದುಗರ ಊಹೆಗೆ ಬಿಡುವುದು ಒಳ್ಳೆಯದಲ್ಲವೆ? ಅಕ್ಕನ ವಚನಗಳ ಭಾವ ತೀವ್ರತೆ, ವಿರಹ, ಏಕಾಂಗಿತನ, ಚನ್ನಮಲ್ಲಿಕಾರ್ಜುನನಿಗಾಗಿ ನಿರೀಕ್ಷಿಸುವ ಪರಿ, ಆಸೆ-ನಿರಾಸೆಗಳ ನಡುವೆ ತೂಗುವ ಮನಸ್ಥಿತಿ, ಸದ್ದೇ ಮಾಡದೆ ಒಲವು ಒಳಗೊಳಗೆ ಗರಗಸದಂತೆ ಅಕ್ಕನನ್ನು ಕತ್ತರಿಸುತ್ತ ಸಾಗುವ ರೀತಿಯನ್ನು ವಿವರಿಸುವ ಲೇಖಕಿ ಸಾಧನೆಯ ಹಾದಿಯಲ್ಲಿ ಉಂಟಾಗುವ ಅಡೆತಡೆಗಳು, ಅಕ್ಕ ಅದನ್ನು ಎದುರಿಸುವ ರೀತಿಯನ್ನು ಸಮರ್ಥವಾಗಿ ಅಭಿವ್ಯಕ್ತಿಸಿದ್ದಾರೆ.

ತರಣಿಯ ಹುಳು ತನ್ನ ಸ್ನೇಹದಿಂದ
ಮನೆಯ ಮಾಡಿ ತನ್ನ ನೂಲು ತನ್ನನೆ
ಸುತ್ತಿ ಸಾವಂತೆ ಮನ ಬಂದುದ ಬಯಸಿ ಬೇವುತ್ತಿದ್ದೆನಯ್ಯ.

ಈ ವಚನದಲ್ಲಿ ಸಾಧಕನ ಸಾಧನೆಯ ಹಾದಿಯಲ್ಲಿ ಎದುರಾಗುವ ಅಡೆತಡೆಗಳ ಅಪಾಯದ ಚಿತ್ರಣವಿದೆ. ಎಲ್ಲವನ್ನು ತ್ಯಜಿಸಬೇಕಾದರೆ ಎಂತಹ ದಿಟ್ಟ ನಿಲುವಿನ ವ್ಯಕ್ತಿಯಾದರೂ, ಮಾನಸಿಕ ತೊಯ್ದಾಟವನ್ನು ಅನುಭವಿಸಲೇ ಬೇಕಾಗುತ್ತದೆ. ಅದು ಪ್ರತಿಯೊಬ್ಬ ಸಾಧಕನೂ ಹಾದುಹೋಗಬೇಕಾದ ಅನಿವಾರ್ಯ ಹಾದಿಯಾಗಿದೆ.

ಹುಟ್ಟಿದಾಗಿನಿಂದ ವೈರಾಗ್ಯಭಾವವನ್ನು ಅಕ್ಕ ಹೊಂದಿದ್ದಳು. ಎಂಬ ಆಲೋಚನೆಯು ತಪ್ಪೆನಿಸುತ್ತದೆ. ಜನ್ಮತಃ ವಿರಾಗಿಣಿ ಅವಳಾಗಿದ್ದರೆ ಅವಳಲ್ಲಿ ಈ ರೀತಿಯ ತಳಮಳ, ತಲ್ಲಣ, ವಿಷಾದ ಭಾವಗಳು ಮೂಡುತ್ತಿರಲಿಲ್ಲ.

"ಪ್ರೇಮವೊಂದೇ ನಿನ್ನನ್ನು ಉದ್ಧರಿಸಬಲ್ಲದು, ಅದು
ಮರ್ತ್ಯ ಪ್ರೇಮವಾದರೂ ಹಿಂದೆಗೆಯ ಬೇಡ. ಏಕೆಂದರೆ
ಮರ್ತ್ಯ ಪ್ರೇಮವೇ ನಿನ್ನನ್ನು ಮೇಲಕ್ಕೆತ್ತಬಲ್ಲದು"
ಎನ್ನುವ ಜಿಮಿಯ ಮಾತನ್ನಿಲ್ಲಿ ಸ್ಮರಿಸಬೇಕು.

ಸೂಫಿಗಳು ಮರ್ತ್ಯ ಪ್ರೇಮವೇ ಕೊನೆಗೆ ಸಾಧಕನನ್ನು ದೈವ ಪ್ರೇಮದ ಕಡೆಗೆ ಸಾಗಿಸುವ ಸೇತುವೆ ಎಂದು ಪ್ರತಿಪಾದಿಸಿದ್ದಾರೆ.

ತರಣಿಯಹುಳು....ಈ ವಚನ ಕೌಶಿಕನ ಮೇಲೆ ಅಕ್ಕನಿಗೆ ಯಾವುದೋ ಒಂದು ಘಳಿಗೆಯಲ್ಲಿ ಕ್ಷಣಿಕವಾಗಿಯಾದರೂ ಒಲವು ಮೂಡಿರಬಹುದಲ್ಲವೇ? ಎಂದು ನಿರಂತರವಾಗಿ ಪ್ರಶ್ನಿಸಿಕೊಳ್ಳುವಂತೆ ಮಾಡುತ್ತದೆ. ಪ್ರಾರಂಭದಲ್ಲಿ ಅವಳು ಪ್ರೇಮ, ಸ್ನೇಹ, ಮೋಹಗಳ ಸಂಕೋಲೆಯ ನಡುವೆ ಬಂಧಿಯಾಗಿದ್ದಳು. ಹೊರಬರುವ ಪ್ರಯತ್ನದಲ್ಲಿ ಜಯಶೀಲಳಾದಳೆಂದು ನಂತರದ ಅವಳ ಕೆಲವು ವಚನಗಳಿಂದ ಅರಿಯಬಹುದು. ಲೇಖಕಿ ಇಂತಹ ವಚನಗಳನ್ನು ಬರೀ ಅದರ ಅರ್ಥವನ್ನು ಹೇಳುವುದಕ್ಕೆ ಮಾತ್ರ ಬಳಸಿಕೊಳ್ಳದೆ ಸೂಕ್ಷ್ಮವಾಗಿ ಗಮನಿಸಿದ್ದರೆ ಅದರ ವ್ಯಾಖ್ಯಾನವೇ ಬೇರೆಯಾಗುತ್ತಿತ್ತು ಎನಿಸುತ್ತದೆ.

"ಮಹಾದೇವಿಯಕ್ಕ ಕೌಶಿಕರಾಜನು ತಾನು ಜೈನ ಧರ್ಮವನ್ನು ಬಿಟ್ಟುಕೊಟ್ಟು ವೀರಶೈವ ಧರ್ಮವನ್ನು ಸ್ವೀಕರಿಸಿದರೆ ಮಾತ್ರ ಅವನನ್ನು ವರಿಸುವೆನು ಇಲ್ಲದಿದ್ದರೆ ಇಲ್ಲ" ಎಂದು ಮಂತ್ರಿಗಳ ಮೂಲಕ ಹೇಳಿಕಳಿಸುತ್ತಾಳೆ ಎಂಬ ಮಾತನ್ನು ಡಾ. ಫ. ಗು. ಹಳಕಟ್ಟಿಯವರು 'ಶಿವಶರಣರ ಚರಿತ್ರೆಗಳು' ಎಂಬ ಲೇಖನವೊಂದರಲ್ಲಿ ಹೇಳಿರುವುದನ್ನು ಸ್ಮರಿಸಬಹುದು.[1]

---

[1] ಬಸವ ಪಥ - ಸಂಪುಟ-20 ಮೇ-1998

ಇದರ ಜೊತೆಗೆ ಸುಜನ ಅವರು 'ಹೃದಯ ಸಂವಾದ'ದಲ್ಲಿ ಹೇಳುವ ಮಾತನ್ನಿಲ್ಲಿ ನೆನೆಯಬಹುದು. ಅಂತರ್ಮುಖತೆಯ ಪ್ರಾರಂಭ ವ್ಯವಸ್ಥೆಯಲ್ಲಿ ಸಾಧಕನಿಗೆ ಅನಿಸುತ್ತದೆ. ಈ ಎಲ್ಲ ನನ್ನೊಳಗಿದ್ದವರೆ? ಎಂದು. ಅಲ್ಲಿ ಸುಪ್ತ ಆಕಾಂಕ್ಷೆಗಳು ಆತಾಶೆಗಳು ವಿವಿಧ ರಾಗಗಳು ಎಲ್ಲ ಬೆದರಿಸುತ್ತವೆ. ಅವುಗಳಿಗೆ ಬಲಿಯಾಗುವ ಭಯವೂ ಉಂಟು'.

ಈ ಭಯ ಅಕ್ಕನನ್ನು ಕಾಡಿರಬಾರದೇಕೆ?

ಅಕ್ಕನ ಭಕ್ತಿ, ಸತಿ-ಪತಿ ಭಾವವನ್ನು ಒಂದು ಹಂತದವರೆಗೂ ವಿವರಿಸುವ ಲೇಖಕಿ ಅಲ್ಲಮ-ಅಕ್ಕನ ಸಂವಾದವನ್ನು ಅತ್ಯುತ್ತಮವಾಗಿ ಚಿತ್ರಿಸಿದ್ದಾರೆ.

ನಿಜವಾದ ಅನುಭಾವ ಕ್ಷಣಿಕವಾದುದಲ್ಲ, ಬಾಳಿನ ಎಲ್ಲ ಕಷ್ಟ ನಷ್ಟ, ನೋವು, ಸಂಶಯಗಳಿಗೆಲ್ಲ ಪರಿಹಾರ ಒದಗಿಸಬಲ್ಲ ಶಾಶ್ವತ ಬೆಳಕು ಎಂಬ ಸತ್ಯ ಸಂಗತಿ ಗೋಚರಿಸುತ್ತದೆ.

ಪ್ರಾರಂಭದಲ್ಲಿ ದ್ವೈತ ಭಾವನೆಯಿಂದ ಕೂಡಿದ ಅಕ್ಕನ ವಚನಗಳು ಕೊನೆಗೆ ಅದ್ವೈತದಲ್ಲಿ ಕೊನೆಗೊಳ್ಳುವುದನ್ನು ಕಾಣಬಹುದು. ಜ್ಞಾನ ನಿಧಿಯು, ಅದ್ವೈತೆಯೂ ಆದ ಅಲ್ಲಮನ ಪರೀಕ್ಷೆಗಳನ್ನು ಸಮರ್ಥವಾಗಿ ಎದುರಿಸಿದ ಅಕ್ಕ ತಾನು ಅನುಭಾವಿ ಎಂಬುದನ್ನು ನಿರೂಪಿಸುವ ಚಿತ್ರಣ ಮನೋಜ್ಞನವಾಗಿ ಮೂಡಿಬಂದಿದೆ. ಅಕ್ಕನ ಬಗ್ಗೆ ಬಸವಣ್ಣ, ಅಲ್ಲಮ, ಸಿದ್ದರಾಮರ ಮೆಚ್ಚುಗೆಯ ವಚನಗಳು, ಅವಳ ಸಾಧನೆಗೆ ದಿಟ್ಟ ನಿಲುವಿಗೆ, ಉನ್ನತ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಗಳಾಗಿವೆ.

ಒಟ್ಟಿನಲ್ಲಿ ಇಡೀ ಕೃತಿ ನಾವು ಮರೆತ ಅಕ್ಕನ ವಚನಗಳನ್ನು ಮತ್ತೆ ನಮ್ಮ ನೆನಪಿನ ಅಂಗಳಕ್ಕೆ ತಂದು ನಿಲ್ಲಿಸಿ, ತಮ್ಮ ಮನಸ್ಸಿಗೆ ತಂಪನ್ನೆರೆಯುತ್ತದೆ. ಜೊತೆಗೆ ಆಗಾಗ ಮಿಂಚಿನಂತೆ ಹೊಳೆದು ನಮ್ಮನ್ನು ಚಿಂತನೆಗೆ ಹಚ್ಚುತ್ತವೆ.

ಅಕ್ಕನನ್ನು ಪ್ರಾರಂಭಿಕ ಹಂತದಲ್ಲಿ ಅರ್ಥ ಮಾಡಿಕೊಳ್ಳುವವರು ಈ ಪುಸ್ತಕವನ್ನಂತೂ ಓದಲೇಬೇಕು. ಸಾಮಾನ್ಯರಿಗಾಗಿ ಬರೆದ ಈ ಕೃತಿ ಅವರನ್ನು ತಲುಪುವುದರಲ್ಲಿ ಸಂದೇಹವೇ ಇಲ್ಲ.

**– ಎ. ವಿಜಯಲಕ್ಷ್ಮಿ**

---

## ಚಂದ್ರ ಕೊಡೆ

'ಚಂದ್ರಕೊಡೆ' ಕನ್ನಡ ಸಂಶೋಧನ ಕ್ಷೇತ್ರದಲ್ಲಿ ಒಂದು ವಿಶಿಷ್ಟ ಹಾಗೂ ವೈವಿಧ್ಯಪೂರ್ಣ ಕೃತಿ. ನಮ್ಮ ಇಂದಿನ ತಿಳುವಳಿಕೆಯ ಹಿನ್ನೆಲೆಗಿರುವ ಇತಿಹಾಸವನ್ನು ಪುನಾರಚಿಸುವಲ್ಲಿ ಈ ಕೃತಿ ಮಾರ್ಗದರ್ಶಿಯಾಗಿದೆ. ಕನ್ನಡ ಸಂಸ್ಕೃತಿಯ ಸಾವಿರಾರು ವರ್ಷಗಳ ಅವಧಿಯ ಸಾಂಸ್ಕೃತಿಕ ಚಿಂತನಗಳನ್ನು ಕಲೆಹಾಕುವ ಪ್ರಯತ್ನವೂ ಇಲ್ಲಿದೆ. ಲೇಖಕರೇ ಒಂದು ಕಡೆ "ಈ ಪುಸ್ತಕದ ಹರವು ಹಾಸು ದೊಡ್ಡದು. ಕನ್ನಡ ಭಾಷೆ,

ಸಾಹಿತ್ಯ, ಸಂಸ್ಕೃತಿ, ವಾಸ್ತು, ಶಿಲ್ಪ, ಧರ್ಮ, ಚರಿತ್ರೆ ಇವುಗಳಿಗೆ ಸಂಬಂಧಿಸಿದ ಮೌಲಿಕವಾದ ಮಾಹಿತಿ ಈ ಗ್ರಂಥದಲ್ಲಿ ದಾಖಲಾಗಿದೆ. ನಾನಾ ಪೂರಕ ಜ್ಞಾನಶಾಖೆಗಳ ತಜ್ಞರು ಪರಿಭಾವಿಸುವಂತಹ, ಇನ್ನು ಮುಂದುವರಿದ ವಾಗ್ವಾದ ಸಂವಾದಗಳಿಗೆ ಗ್ರಾಸವಾಗುವಂತಹ ಹೊಸ ಸಾಮಗ್ರಿಯನ್ನು ಮೊದಲ ಬಾರಿಗೆ ಇಲ್ಲಿ ಹೊರಗಿಟ್ಟಿರುವುದುದಾಗಿ" ಹೇಳಿಕೊಂಡಿದ್ದಾರೆ. ಶಾಸನಗಳನ್ನೇ ಹೆಚ್ಚಾಗಿ ಹಾಗೂ ಪ್ರಧಾನವಾಗಿ ಆಧರಿಸಿರುವ ಈ ಶೋಧಗ್ರಂಥದಲ್ಲಿ ೬೫ ಲೇಖನಗಳಿವೆ. ಕನ್ನಡ ಸಾಹಿತ್ಯ ಸಂಶೋಧನ ಕ್ಷೇತ್ರದಲ್ಲಿ ಡಾ|| ಹಂಪನಾ ಅವರದು ದೊಡ್ಡ ಹೆಸರು. ಅವರ ಸುಮಾರು ನಾಲ್ಕು ದಶಕಗಳ ತಲಸ್ಪರ್ಶಿಯಾದ ಶಾಸನ ವ್ಯಾಸಂಗ, ಪಾಂಡಿತ್ಯ, ಚರಿತ್ರೆಯ ಜ್ಞಾನ ಮತ್ತು ಪರಿಶ್ರಮ ಈ ಗ್ರಂಥದಲ್ಲಿ ಕೆನೆಕಟ್ಟಿದೆ.

**ಸಾಹಿತ್ಯ ಸಂಶೋಧನೆ :**

ಛಂದೋಂಬುಧಿ - ನಾಗವರ್ಮ ಮರುಚಿಂತನೆ, ಚಾರುದತ್ತನ ಕತೆಯ ಮೂಲಚೂಲ, ವಡ್ಡಾರಾಧನೆಯ ಮೂರು ಶ್ಲೋಕಗಳು, ದುರ್ಗಸಿಂಹ ಮತ್ತು ಪಂಚತಂತ್ರದ ಪರಿಶೀಲನೆ, ಬ್ರಾಜಿಷ್ಣು ಆರಾಧನಾ ಕರ್ಣಾಟ ಟೀಕಾ, ಪಂಪ-ಜಿನಸೇನ ತೌಲನಿಕ ಅಧ್ಯಯನ ಮೊದಲಾದ ಲೇಖನಗಳು ಸಾಹಿತ್ಯ ಸಂಶೋಧನ ವಲಯಕ್ಕೆ ಸಂಬಂಧಿಸಿದವು. ಕನ್ನಡದ ಆದಿಕವಿ ಪಂಪನ ಇತಿಹಾಸಕ್ಕೆ ಸಂಬಂಧಿಸಿದಂತೆ ಚರಿತ್ರೆಯಲ್ಲಿ ಗೈರು ಹಾಜರಾದ ಸತ್ಯಾಂಶಗಳನ್ನು ತುಂಬಿಕೊಡುವ ಪ್ರಯತ್ನವನ್ನು 'ಪಂಪನ ಪೂರ್ವಜರ ಜಾತಿ' ಎಂಬ ಲೇಖನದಲ್ಲಿ ಮಾಡಿದ್ದಾರೆ. ಪಂಪನ ಪೂರ್ವಿಕರು ವೆಂಗಿಪಳುವಿನ ವತ್ಸಗೋತ್ರದ ಬ್ರಾಹ್ಮಣರೆಂದು ಹೇಳಲಾಗಿದೆ. ಆದರೆ ಡಾ|| ಹಂಪನಾ ಅವರು ಪಂಪನ ಪೂರ್ವಜರು ಶೈವಬ್ರಾಹ್ಮಣರು ಎಂಬುದನ್ನು ಸಮರ್ಥ ಸಾಕ್ಷ್ಯಾಧಾರಗಳಿಂದ ತೋರಿಸಿಕೊಟ್ಟಿದ್ದಾರೆ. ಪಂಪನು ಶೈವ ಬ್ರಾಹ್ಮಣ ಮೂಲದವನಾದ್ದರಿಂದ, ವಿಕ್ರಮಾರ್ಜುನ ವಿಜಯದಲ್ಲಿ ಶಿವನನ್ನು ತನ್ಮಯತೆಯಿಂದ ವರ್ಣಿಸಿದ್ದಾನೆ. ವ್ಯಾಸರು ಹೆಚ್ಚಾಗಿ ಕೃಷ್ಣ ಭಕ್ತರು. ವ್ಯಾಸ ಮುನೀಂಧ್ರ ರುಂದ್ರ ವಚನಾಮೃತ ವಾರ್ಧಿಯನ್ನು ಈಜಿದ ಪಂಪನು ಹೆಚ್ಚಾಗಿ ಶಿಭಕ್ತನಾದುದಕ್ಕೆ ಕಾರಣ ಆತನ ಪೂರ್ವಜರು ಶೈವ ಬ್ರಾಹ್ಮಣರಾಗಿದ್ದರೆಂಬುದನ್ನು ಪಂಪಭಾರತದ ಅನೇಕ ಪದ್ಯಗಳ ಮೂಲಕ ಶ್ರುತ ಪಡಿಸಿದ್ದಾರೆ.

ಛಂದೋಂಬುಧಿಯ ಕರ್ತೃ ನಾಗವರ್ಮನ ಇತಿವೃತ್ತವನ್ನು ಕುರಿತು ಹೊಂಬುಜದ ಶಾಸನಗಳನ್ನು ಮೂಲ ಆಕರಗಳನ್ನಾಗಿಟ್ಟುಕೊಂಡು ಜಿಜ್ಞಾಸೆ ನಡೆಸಿ ಅವನು ಕೂಡ ವ್ಯಂಗಿಯ ಪ್ರತಿಭೆ "ನಾಗವರ್ಮನ ಮುತ್ತಾತ ವೆಣ್ಣಮಯ್ಯನೂ ಅತ್ತಿಮಬ್ಬೆಯ ತಾತ ನಾಗಮಯ್ಯನೂ ವೆಂಗಿ ವಿಷಯದ ಕೌಂಡಿನ್ಯ ಗೋತ್ರದವರಾಗಿದ್ದು ದಾಯಾದಿಗಳೋ ಹತ್ತಿರದ ನೆಂಟರೊ ಆಗಿರುವ ಸಾಧ್ಯತೆಯಿದೆ. ಅತ್ತಿಮಬ್ಬೆಯ ಹಿರಿಯರಂತೆಯೇ ನಾಗವರ್ಮನ ಹಿರಿಯರೂ ಬ್ರಾಹ್ಮಣತ್ವದಿಂದ ಜೈನತ್ವಕ್ಕೆ ಮತಾಂತರಗೊಂಡು ಬಂದವರು" (ಪುಟ 20) ಎಂಬ ಸೂಕ್ಷ್ಮ ಸಂಬಂಧಗಳತ್ತ ದೃಷ್ಟಿ ಹಾಯಿಸಿದ್ದಾರೆ. ಕನ್ನಡದ ಮೊದಲ ಉಪಲಬ್ಧ ಗದ್ಯ ಗ್ರಂಥ ವಡ್ಡಾರಾಧನೆಯ ಕುರಿತು ಡಾ|| ಹಂಪನಾ

ಅವರು ಹತ್ತಾರು ಅಧ್ಯಯನಪೂರ್ಣ ಲೇಖನಗಳನ್ನು ಬರೆದಿದ್ದಾರೆ. ವಡ್ಡಾರಾಧನೆಗೆ ಸಂಬಂಧಿಸಿದ ಹಲವಾರು ಲೇಖನಗಳು ಪ್ರಸ್ತುತ ಕೃತಿಯಲ್ಲಿ ಸೇರ್ಪಡೆಯಾಗಿವೆ. ಇವು ವಡ್ಡಾರಾಧನೆಯ ಕುರಿತು ಹೊಸಬೆಳಕು ಚೆಲ್ಲುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿವೆ. ದಿವಾಕರಣಂದಿಯ ವಿಚಾರವಾಗಿ ನಗರ ೫೭ನೆಯ ಶಾಸನ ಮತ್ತು ಸೊರಬ ೫೮ನೆಯ ಶಾಸನದಿಂದ ಕೆಲವು ವಿಚಾರಗಳು ತಿಳಿದು ಬರುತ್ತವೆ. ಅದರ ಪ್ರಕಾರ ದಿವಾಕರಣಂದಿಯ ಕಾಲ ೧೦೬೨ ಎಂದು ಖಚಿತವಾಗಿ ಗೊತ್ತಾಗುತ್ತದೆ. ಹಾಗಾದರೆ ವಡ್ಡಾರಾಧನೆಯ ಕಾಲ ನಿರ್ಧಾರಕ್ಕೆ ಇದನ್ನೇ ಒಂದು ಪ್ರಬಲ ಆಧಾರವೆಂದು ಅಂಗೀಕರಿಸಬಹುದೇ ಎಂಬುದು ನಮ್ಮ ಮುಂದಿನ ಸಮಸ್ಯೆ. ಹೀಗಾಗಿ ವಡ್ಡಾರಾಧನೆಯ ಕಾಲದ ವಿಚಾರ ಚರ್ಚೆ ಇನ್ನೂ ಶೋಧನೆಗೆ ತೆರೆದ ವಿಷಯವಾಗಿಯೇ ಉಳಿದುಕೊಳ್ಳುತ್ತದೆಂಬುದನ್ನು ಹೇಳಿ ಅಧ್ಯಯನದ ಹೊಸ ಸಾಧ್ಯತೆಗಳತ್ತ ಸಂಶೋಧಕರ ಗಮನವನ್ನು ಸೆಳೆದಿದ್ದಾರೆ.

ವಡ್ಡಾರಾಧನೆಯಲ್ಲಿನ ಚಾಣಕ್ಯ ರಿಸಿಯ ಕತೆ, ಭದ್ರಬಾಹು ಭಟ್ಟಾರರ ಕತೆ ಮುಂತಾದ ಕೆಲವು ಕತೆಗಳು ಚರಿತ್ರಕಾರರಿಗೆ ಉತ್ತಮ ಸಾಮಗ್ರಿ ದೊರಕಿಸುವಂತೆ ಸಮಸ್ಯೆಯನ್ನು ಒಡ್ಡುತ್ತವೆ. ಕರ್ನಾಟಕದ ಜೈನ ಇತಿಹಾಸ ಕಲ್ಪವನ್ನು ಪುನಾರಚಿಸುವಲ್ಲಿ ಭದ್ರಬಾಹು ಭಟಾರರ ಕಥೆಯಷ್ಟೇ ಚಾಣಾಕ್ಯ ರಿಸಿಯ ಕತೆಯೂ ಪ್ರಮುಖ ದಾಖಲೆಗಳನ್ನು ನೀಡುತ್ತದೆ. ಸಂಶೋಧನ ಸಲಿಕೆ ಇದುವರೆಗೆ ಕನ್ನಡದಲ್ಲಿ ಈ ವಿಚಾರದಲ್ಲಿ ಕಾರ್ಯ ಪ್ರವೃತ್ತವಾಗಿಲ್ಲ ಎಂಬ ಖೇದವನ್ನು ವ್ಯಕ್ತಪಡಿಸಿದ್ದಾರಲ್ಲದೆ, ಅದು ಸಾಗಬೇಕಾದ ಮಾರ್ಗವನ್ನು ಇಲ್ಲಿ ಸೂಚಿಸಿದ್ದಾರೆ. ಹಲವು ಕ್ಷೇತ್ರಗಳ ವಿದ್ವತ್ತು, ಶಾಸ್ತ್ರಗಳ ಅರಿವಿನಿಂದ ಅಧ್ಯಯನಶೀಲ ಮನಸ್ಸು ಕುತೂಹಲಕ್ಕಾಗಿ ವಿಷಯವೊಂದರ ಜಾಡು ಹಿಡಿದು ಸಾಗುವ ಪರಿ ಸೊಗಸಾಗಿ ಈ ಲೇಖನಗಳಲ್ಲಿ ಪಡಿಮೂಡಿದೆ. ಭಾರತೀಯ ಸಂಸ್ಕೃತಿಯನ್ನು ಕರ್ನಾಟಕದ ಇತಿಹಾಸ ವಿಶಿಷ್ಟ ಬಗೆಯಾಗಿ ರೂಪಿಸಿದ ಎಳೆ ಎಳೆಯ ಶೋಧವೂ ಪ್ರಸ್ತುತ ಕೃತಿಯಲ್ಲಿ ಬಂದಿದೆ. "ದೇಶೀ ಸ್ತ್ರೀ ವಾದದ ಉದ್ಘಾಟಕಿ ಅತ್ತಿಮಬ್ಬೆ" ಎಂಬ ಲೇಖನ ಅರ್ಥಪೂರ್ಣವೂ, ಉನ್ನತ ವಿಮರ್ಶೆಯಿಂದಲೂ ಕೂಡಿದೆ. "ಅತ್ತಿಮಬ್ಬೆಯ ಇಡೀ ಕುಟುಂಬ ಸ್ತ್ರೀ ವಾದದ ಸಂವಾದಗಳಿಗೆ ಗಟ್ಟಿಯಾದ ಜೀವಂತ ದೃಷ್ಟಾಂತ ಒದಗಿಸುವ ಆದರ್ಶದ ಸ್ಥಿತಿಯಲ್ಲಿ ಕಾಣುತ್ತದೆ. ಗಂಡಸರು ಬರೆದಿರುವ ಶಾಸನಗಳಲ್ಲಿಯೂ ಚರಿತ್ರೆಯಲ್ಲೂ ಮಹಿಳೆಯಾದ ಅತ್ತಿಮಬ್ಬೆ ಗಳಿಸಿರುವ ಉನ್ನತೋನ್ನತ ಸ್ಥಾನವನ್ನು ಸ್ತ್ರೀವಾದಿ ಚಿಂತಕರು ಪರಿಗಣಿಸಬೇಕಾದ ಅಗತ್ಯವನ್ನು ಅವರು ಒತ್ತಿಹೇಳಿದ್ದಾರೆ.

**ಚಾರಿತ್ರಿಕ-ಸಾಂಸ್ಕೃತಿಕ ಶೋಧ :**

ಕನ್ನಡ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಚರಿತ್ರೆಯ ಗಟ್ಟಿ ನೆಲೆಯ ಮೇಲೆ ಡಾ. ಹಂಪನಾ ಅವರ 'ಚಂದ್ರಕೊಡೆ'ಯ ಬಹುತೇಕ ಲೇಖನಗಳು ರೂಪುಗೊಂಡಿವೆ. "ಕರ್ನಾಟಕ ಚರಿತ್ರೆಯ ಕೆಲವು ಪುಟಗಳನ್ನು, ಮುಖ್ಯವಾಗಿ ಗಂಗರ ಇತಿಹಾಸವನ್ನು ಪುನಾರಚಿಸಬೇಕಾದ ಅಗತ್ಯವನ್ನು ಇಲ್ಲಿನ ಸಾಮಗ್ರಿ ಎತ್ತಿತೋರಿಸಿವೆ" ಎಂಬ ಮುನ್ನುಡಿಯ

ಮಾತುಗಳಲ್ಲಿ ನಿಜಾಂಶವಿದೆ. ಶಾಸನಗಳಲ್ಲಿ ಗಂಗರ ಪ್ರಾಚೀನ ಬಸದಿಗಳು : ಅವಲೋಕನ, ಗಂಗರ ಒಂದು ಶಾಸನ, ಗಂಗರ ರಾಜಮಲ್ಲನ ಹೆಂಡತಿ : ಹೊಸ ಮಾದಲೆ, ಬೂತುಗ : ಹೊಸ ಶಾಸನಗಳು, ಶಾಸನಗಳಲ್ಲಿ ಕುಂದಣಸ್ವಾಮಿ ಮೊದಲಾದ ಲೇಖನಗಳು ಗಂಗ ವಂಶದ ಚರಿತ್ರೆಯ ರಚನೆಗೆ ಕೈದೀವಿಗೆಗಳಾಗಿವೆ. ಅಲ್ಲದೆ ಜೈನ ಸಾಹಿತ್ಯ, ವಾಸ್ತುಶಿಲ್ಪ, ಧರ್ಮ ಒಟ್ಟಾರೆಯಾಗಿ ಜೈನ ಸಂಸ್ಕೃತಿ - ಪರಂಪರೆಯ ಅಭಿವೃದ್ಧಿಗೆ ಹಾಗೂ ಮುಂದುವರಿಕೆಗೆ ಗಂಗರ ಕೊಡುಗೆ ಬಹಳ ದೊಡ್ಡದೆಂಬ ಅಂಶ ಇಲ್ಲಿನ ಶೋಧಗಳಿಂದ ಸ್ಪಷ್ಟವಾಗುತ್ತದೆ. ಗಂಗ ಮಂಡಲೇಶ್ವರನ ಅರಸಿ 'ಕಂಚಬ್ಬರಸಿ' ಈ ಕೃತಿಯ ಮೂಲಕ ಮೊದಲ ಬಾರಿಗೆ ಇತಿಹಾಸಕ್ಕೆ ಸೇರ್ಪಡೆಗೊಂಡಿದ್ದಾಳೆ. ಕಾಲಗರ್ಭದಲ್ಲಿ ಮರೆಯಾಗಿರುವ, ಚರಿತ್ರೆಗೆಬೇಕಾದ ಅನೇಕ ಹೊಸತು-ಹೊಸತುಗಳನ್ನು ಈ ಕೃತಿಯಲ್ಲಿ ಜೋಡಿಸಿರುವುದು ಈ ಕೃತಿಯ ಧನಾತ್ಮಕ ಅಂಶಗಳಲ್ಲಿ ಒಂದು.

ಕನ್ನಡದಲ್ಲಿ ತೌಲನಿಕ ಅಧ್ಯಯನ ಅಷ್ಟಾಗಿ ನಡೆದಿಲ್ಲ. ಈ ಕೃತಿಯ ಪಂಪ-ಜಿನಸೇನ ಎಂಬ ತೌಲನಿಕ ಅಧ್ಯಯನದ ಕುರಿತಾದ ಲೇಖನ ಡಾ. ಹಂಪನಾ ಅವರ ವಿದ್ವತ್ತಿಗೆ ಸಾಕ್ಷಿಯಾಗಿದೆ. ಜಿನಸೇನರ ಕಾವ್ಯದಿಂದ ಪಂಪಕವಿ ಪಡೆದ ಪ್ರೇರಣೆಗಳ ಒಳಶೋಧವೂ ಇಲ್ಲಿ ಬಂದಿದೆ. "ಮಹಾಕವಿಯಾದವನು ಮಹಾಕಾವ್ಯಕ್ಕೆ ತಕ್ಕದಾದ ವಸ್ತುವಿಗೆ ತೆಕ್ಕೆ ಬೀಳುತ್ತಾನೆ. ಪಂಪ ತಾನು ರಚಿಸಿದ ಎರಡು ಕಾವ್ಯಗಳ ವಸ್ತುವನ್ನು ಎರಡು ಮಹಾಕೃತಿಗಳಿಂದ ಆರಿಸಿಕೊಂಡಿದ್ದಾನೆ. ಒಂದು ಕಡೆ ವ್ಯಾಸರ ಮಾನಸಪುತ್ರನಾಗಿ ವಿಕ್ರಮಾರ್ಜುನ ವಿಜಯವನ್ನು ಪುನರ್ ಸೃಜಿಸಿದ್ದಾನೆ. ಇನ್ನೊಂದು ಕಡೆ ಜಿನಸೇನರ ಔಡಸ ಪುತ್ರನಾಗಿ ಆದಿಪುರಾಣವನ್ನು ಪ್ರಾಕ್ ಕಥಾಶರೀರವನ್ನು ಪುನರ್ ಸೃಷ್ಟಿಸಿದ್ದಾನೆ. ಜಿನಸೇನರವರೆಗೆ ಹರಿದು ಬಂದ ಒಂದು ಸಿದ್ಧಶ್ರಮಣ ಸಂಪ್ರದಾಯದ ಕತಾವಸ್ತುವನ್ನು ಸಾತತ್ಯವನ್ನು ಆದ್ಯತನಕ್ಕೆ ಒಗ್ಗಿಸಿ ಬಗ್ಗಿಸಿ ಬಳಸಿಕೊಳ್ಳುವಲ್ಲಿ ಪಂಪನ ವೈಶಿಷ್ಟ್ಯ ಮತ್ತು ಸ್ವೋಪಜ್ಞತೆ ಎಲ್ಲೆಲ್ಲಿ ಕಾಣಿಸಿಕೊಂಡಿದೆಯೆಂಬುದನ್ನು ಈ ಪ್ರಬಂಧದಲ್ಲಿ ಲೇಖಕರು ಗುರುತಿಸಿದ್ದಾರೆ. ಈ ರೀತಿಯ ತೌಲನಿಕ ಅಧ್ಯಯನ ಕನ್ನಡದಲ್ಲಿ ಬಹಳ ಅಪರೂಪ ಎಂದರೂ ತಪ್ಪಾಗಲಿಕ್ಕಿಲ್ಲ.

**ಆಕರಗಳ ಖನಿಯಾಗಿ ಶಾಸನಗಳು :**

ಶಾಸನಗಳು ಸಾಂಸ್ಕೃತಿಕ ಅಧ್ಯಯನದಲ್ಲಿ ಅದೆಂತಹ ವೈವಿಧ್ಯಮಯ ಹಾಗೂ ಸಮೃದವಾದ್ಧ ಖಚಿತ ಮಾಹಿತಿಗಳನ್ನು ಒದಗಿಸಬಲ್ಲವು ಎಂಬುದಕ್ಕೆ ಈ ಕೃತಿಯೇ ಸಾಕ್ಷಿ. ಆಂತರಿಕ ಬಲದೊಂದಿಗೆ ತನ್ನ ವಿಚಾರದಲ್ಲಿ ತಳೆದ ಅಚಲ ವಿಶ್ವಾಸ (Self-Confidence) ಆಕೆಗೊಂದು ಧೀಮಂತ ವ್ಯಕ್ತಿತ್ವವನ್ನು ತಂದುಕೊಟ್ಟಿತು" ಎಂದು ಅತ್ತಿಮಬ್ಬೆಯ ಸಾಧನೆಗಳನ್ನು ಕಣ್ಣಿಗೆಕಟ್ಟುವಂತೆ ಇಲ್ಲಿ ಚಿತ್ರಿಸಿದ್ದಾರೆ. ಒಬ್ಬ ಒಳ್ಳೆಯ ಸಂಶೋಧಕ ಯಾವ ರೀತಿಯಲ್ಲಿ ಭಾಷೆಯನ್ನು ದುಡಿಸಿಕೊಳ್ಳಬಹುದು ಎಂಬುದಕ್ಕೂ ಈ ಕೃತಿ ಮಾಗದರ್ಶಿಯಾಗಿದೆ; ಮಾದರಿಯಾಗಿದೆ.

ಇದರಲ್ಲಿರುವ ಮೌಲಿಕ ಲೇಖನಗಳಿಂದಾಗಿ ಈ ಕೃತಿ ಇಂದಿಗೂ ಎಂದಿಗೂ ಉಪಾದೇಯವಾಗಬಲ್ಲದು. ಹಂಪನಾ ಅವರ ಇತಿಹಾಸ ನಿರೂಪಣೆಯಲ್ಲಿ ಕೆಲವು ಬೆರಗುಗೊಳಿಸುವಂಥ ಒಳನೋಟಗಳಿರುವುದರಿಂದಲೇ ಈ ಕೃತಿ ಅನನ್ಯವೆನಿಸಿಕೊಳ್ಳುತ್ತದೆ. ಧಾರ್ಮಿಕತೆ ನಮ್ಮ ಸಮಾಜ ರಚನೆಯ ಬಹುಮಹತ್ವದ ಅಂಶ ಎಂಬ ಅರಿವು ಡಾ. ಹಂಪನಾ ಅವರಿಗಿದೆ. ಆದ್ದರಿಂದಲೇ ಅವರು ಧರ್ಮ ಪಂಥ, ದೇವರು, ಗುರುಗಳು - ಸಾಮಾಜಿಕ ಸಂಬಂಧಗಳ ಕುರಿತು ಇಲ್ಲಿ ಸಾಕಷ್ಟು ಚಿಂತನ-ಮಂಥನ ನಡೆಸಿದ್ದಾರೆ. ಶಾಖೋಪಶಾಖೆಯಾಗಿ ಹಬ್ಬಿರುವ ಜೈನ ಗುರು ಪರಂಪರೆಯ ಅಧ್ಯಯನ ದಿಕ್ಕು ತಪ್ಪಿಸುವಷ್ಟು ಜಟಿಲವಾದುದು. ಆದಾಗಲೂ ಲವಲವಿಕೆಯ ಗದ್ಯದ ಮೂಲಕ; ಅನೇಕ ಪುರಾವೆಗಳ ಮೂಲಕ ಸಾಂಸ್ಕೃತಿಕ ಇತಿಹಾಸದ ನಿರ್ವಚನವನ್ನು ಈ ಕೃತಿಯನ್ನು ಮಾಡಿದ್ದಾರೆ. ಹೊಸ ವಿಚಾರ, ಹೊಸ ಶೋಧಗಳಿಂದ ತುಂಬಿ-ತುಳುಕುವ ಈ ಕೃತಿಯಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ಕಾರಣಗಳೇನೆಂಬುದರ ಚಿಂತನೆಯೂ ಈ ಗ್ರಂಥದಲ್ಲಿ ಬಂದಿದೆ.

ಡಾ. ಹಂಪನಾ ಅವರ 'ಚಂದ್ರಕೊಡೆ' ಅತ್ಯಂತ ಉತ್ಕೃಷ್ಟವಾದ ಸಂಶೋಧನ ಗ್ರಂಥ. ಇದೆಂದಿಗೂ ಮುಖಸ್ತುತಿಯ ಮಾತಲ್ಲ. ಶಾಸನಗಳನ್ನು ಆಧಾರವಾಗಿಟ್ಟುಕೊಂಡು ರಚನೆಗೊಂಡ ಗ್ರಂಥಗಳಲ್ಲಿ ಇದಕ್ಕೆ ಮೊದಲನೆಯ ಮಾನ; ಮೇಲಿನ ಸ್ಥಾನ ಸಿಗುತ್ತದೆಂಬುದರಲ್ಲಿ ಎರಡು ಮಾತಿಲ್ಲ. ಪ್ರಾಚೀನ ಕರ್ನಾಟಕದ ಸಂಪನ್ನತೆಯ ದೇದಿಪ್ಯಮಾನವಾದ ಹೆಗ್ಗುರುತುಗಳನ್ನು ಕಣ್ಣಿಗೆ ಕಟ್ಟುವಂತೆ ಈ ಕೃತಿಯನ್ನು ಡಾ. ಹಂಪನಾ ರಚಿಸಿದ್ದಾರೆ. ನಮ್ಮ ಸ್ಮೃತಿಪಥದಿಂದ ಹಾರಿಹೋದ ಅನೇಕ ಅಂಶಗಳನ್ನು ತಿಳಿಸಿಕೊಟ್ಟು ಸಂಸ್ಕೃತಿಯ ಮೇಲ್ಮೆಯನ್ನು ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಈ ಮೂಲಕ ನಮ್ಮ ಸಾಂಸ್ಕೃತಿಕ ಚರಿತ್ರೆಗೆ ಒಂದು ಹೊಸ ಆಯಾಮವನ್ನು ನೀಡುವಲ್ಲಿ ಅವರು ಯಶಸ್ವಿಯಾಗಿದ್ದಾರೆ. ಕನ್ನಡದ ಬೆರಳೆಣಿಕೆಯ ಅತ್ಯುತ್ತಮ ಸಂಶೋಧನ ಕೃತಿಗಳಲ್ಲಿ ಒಂದೆಂಬ ಹೆಗ್ಗಳಿಕೆಗೂ 'ಚಂದ್ರಕೊಡೆ' ಪಾತ್ರವಾಗಿದೆ.

**ಡಾ. ಜಿ. ಎಸ್. ಉಪಾಧ್ಯ**

---

## ದೇವಾಲಯ ವಾಸ್ತು ಪರಿಚಯ*

ನಮ್ಮ ಊರಿನಲ್ಲೊಂದು ಪ್ರಾಚೀನ ದೇವಾಲಯವಿದೆ; ಅಪರೂಪಕ್ಕೆ ಅಲ್ಲಿಗೆ ಜನ ಬರುತ್ತಾರೆ, ನೋಡುತ್ತಾರೆ, ಹೋಗುತ್ತಾರೆ. ಆ ದೇವಾಲಯದ ಒಳಹೊಕ್ಕರೆ, ಏನೋ ನವಿರಾದ ಭಾವನೆ, ತನ್ಮಯ. ಅಲ್ಲಿರುವ ಕುಸುರಿ ಕೆಲಸವನ್ನು, ಶಿಲ್ಪಗಳನ್ನು ಕಂಡರೆ ಮಾನಸಿಕ ಸಮಾಧಾನ; ಅಲ್ಲಿಯ ಕಂಬಗಳನ್ನು ಸವರಿದರೆ ಒಂದು ಬಗೆಯ ಆನಂದ, ಅಲ್ಲಿರುವ ಪೂಜೆಗೊಳ್ಳದಿರುವ ದೇವರ ಮುಂದೆ ನಿಂತಾಗ ಧನ್ಯತಾ ಭಾವ.

---

* ಲೇ : ಕು. ಸ. ಅಪರ್ಣ, ಪ್ರ: ಹಂಪಿ ಕನ್ನಡ ವಿಶ್ವವಿದ್ಯಾಲಯ

ಈ ದೇವಾಲಯವನ್ನು ಗುರುತಿಸುವ ಬಗೆ ಎಂತು? ನಾಡು, ನುಡಿ, ಸಂಸ್ಕೃತಿಗಳ ಬಗ್ಗೆ ಅಭಿಮಾನವಿರುವ ಜನರಿಗೆ ಈ ಪ್ರಶ್ನೆ ಹಲವು ಬಾರಿ ಕಾಡಿದೆ. ಶ್ರೀಮತಿ ಕೂ. ಸ. ಅಪರ್ಣರವರ ಪುಸ್ತಕ 'ದೇವಾಲಯ ವಾಸ್ತು ಪರಿಚಯ', ಈ ದಿಕ್ಕಿನಲ್ಲಿ ಉತ್ತರವಾಗಿ ಮೂಡಿಬಂದಿದೆ. ಕ್ಷೇತ್ರ ಕಾರ್ಯದ ಬಾಹುಳ್ಯ ಹಾಗೂ ಅಗಾಧ ಪರಿಶ್ರಮದ ಫಲವಾಗಿ ರೂಪುಗೊಂಡ ಈ ಪುಸ್ತಕ ಪ್ರಾಥಮಿಕ ತಿಳುವಳಿಕೆ ನೀಡುವುದಲ್ಲದೆ ಮುಂದಿನ ಅಧ್ಯಯನಕ್ಕೆ ಪ್ರೇರಣೆಯನ್ನೂ ನೀಡುತ್ತದೆ.

ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಪಾಶ್ಚಾತ್ಯರ ಪ್ರೇರಣೆಯಿಂದ ದೇವಾಲಯ ವಾಸ್ತುವಿನ ಅಧ್ಯಯನ ಆರಂಭವಾಯಿತು ಎಂದು ಗಮನಿಸಬೇಕು. ದೇಶೀಯ ವಿದ್ವಾಂಸ ರಾಂರಾಜ್, ಹಸ್ತಪ್ರತಿ ಹಾಗೂ ತಾಳೆಗರಿಗಳಲ್ಲಿದ್ದ ಮಾನಸಾರ ಮೊದಲಾದ ಗ್ರಂಥಗಳ ಆಧಾರದಿಂದ ಹಿಂದೂ ದೇವಾಲಯಗಳ ಬಗ್ಗೆ ಪ್ರಬಂಧ ರಚಿಸಿದರು. ಅಧ್ಯಯನವನ್ನು ಮುಂದುವರೆಸಿದ ಪಾಶ್ಚಾತ್ಯ ಹಾಗೂ ದೇಶೀಯ ವಿದ್ವಾಂಸರು ವಾಸ್ತುಗ್ರಂಥಗಳ ನೆರವಿಲ್ಲದೆ ಭಾರತೀಯ ಸಂಪ್ರದಾಯ ಶೈಲಿಗಳನ್ನು ಖಚಿತವಾಗಿ ಗುರುತಿಸಲಾಗದೆ ದೇವಾಲಯಗಳ ವಸ್ತುನಿಷ್ಠ ಅಧ್ಯಯನವನ್ನು ಮುಂದುವರೆಸಿದರು. ಹಲವು ವಿದ್ವಾಂಸರು ದ್ರಾವಿಡ, ವೇಸರ, ನಾಗರಗಳ ತೊಳಲಾಟದಲ್ಲೇ ಅಲ್ಪವಿರಾಮ, ನಂತರ ಪೂರ್ಣವಿರಾಮ ಪಡೆದಿರುವುದುಂಟು. ಇವರು ದೇವಾಲಯಗಳನ್ನು ನೇರವಾಗಿ ವಿವರಿಸಿದ್ದು ಅಪರೂಪವೇ. ಇದಕ್ಕೆ ವಾಸ್ತು ಗ್ರಂಥಗಳೇ ಕಾರಣ. ಕ್ಲಿಷ್ಟವಾದ ಭಾಷೆ, ಗ್ರಂಥಪಾತ ಹಾಗೂ ಗ್ರಂಥಸ್ಖಾಲಿತ್ಯಗಳು, ಅರ್ಥವಾಗದ ವಿವರಣೆಗಳು ಹಾಗೂ ಪರಿಭಾಷೆ, ಇವುಗಳನ್ನು ಅರಗಿಸಿಕೊಂಡು ಅವಿರತವಾಗಿ ಕ್ಷೇತ್ರಕಾರ್ಯದಲ್ಲಿ ತೊಡಗಿಸಿಕೊಂಡು ದುಡಿದಾಗ ಮಾತ್ರ ಪ್ರತಿಫಲ ಸಾಧ್ಯ. ಆರಂಭದಲ್ಲಿ ಪಿ. ಕೆ. ಆಚಾರ್ಯರವರ ಟೀಕೆ ಟಿಪ್ಪಣಿ ಭಾಷಾಂತರಗಳನ್ನೊಳಗೊಂಡ "ಮಾನಸಾರ" ಗ್ರಂಥವಿತ್ತು. ಇದೊಂದೇ ಗ್ರಂಥ ಸಮಗ್ರ ಭಾರತೀಯ ದೇವಾಲಯಗಳನ್ನು ಅರ್ಥೈಸಲು ಸಾಕೆಂಬ ತಪ್ಪು ತಿಳುವಳಿಕೆ ವಿದ್ವಾಂಸರಲ್ಲಿ ಮೂಡಿತ್ತು. ದೇವಾಲಯಗಳ ಅಧ್ಯಯನಕ್ಕೆ ಒಂದೆರಡು ಗ್ರಂಥಗಳನ್ನು ಅಭ್ಯಸಿಸಿದರೆ ಸಾಲದು. ಹತ್ತಾರು ಗ್ರಂಥಗಳನ್ನು ಗಮನಿಸಬೇಕು. ಈ ಗ್ರಂಥಗಳನ್ನು ಪೂರ್ಣವಾಗಿ ಅರ್ಥೈಸುವುದೂ ಕಷ್ಟವೇ. ಈ ರೀತಿಯ ಅಧ್ಯಯನದ ಫಲವಾಗಿ ದೇವಾಲಯಗಳ ಅಂಗ ಪ್ರತ್ಯಂಗಗಳನ್ನು ಪರಿಚಯಿಸುವ ಪುಸ್ತಕವಾಗಿ ಅಪರ್ಣರವರ ಪುಸ್ತಕ ಮೂಡಿ ಬಂದಿದೆ ಎನ್ನಬಹುದು. ಕನ್ನಡದಲ್ಲಿ ಮೂಲವಾಸ್ತುವಿಗೆ ಸಂಬಂಧಿಸಿದ ಸ್ವತಂತ್ರ ಗ್ರಂಥಗಳು ಇಲ್ಲವೇ ಇಲ್ಲ. ಬಹುಶಃ ಈ ಮಾತು ಇನ್ನಿತರ ಭಾಷೆಗಳಿಗೂ ಅನ್ವಯಿಸುತ್ತದೆ. ಈ ದಿಸೆಯಲ್ಲಿ ಈ ಪುಸ್ತಕ, ಮೊದಲ ಪುಸ್ತಕ ಎಂದು ಗಮನಿಸಬೇಕು.

ದೇವಾಲಯಗಳ ವರ್ಗೀಕರಣ ಅಧ್ಯಯನದಲ್ಲೊಂದು ಹಂತ. ದ್ರಾವಿಡ ನಾಗರ ವೇಸರಗಳ ಸಮಸ್ಯೆ ಅಪರ್ಣಾರವರನ್ನು ಕಾಡಿಲ್ಲ. ಈ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಿಕೊಳ್ಳುತ್ತಾರೆ. ಇವರಿಗೆ ಪ್ರತಿಯೊಬ್ಬ ವಿದ್ವಾಂಸರ ಅಭಿಪ್ರಾಯವೂ ಸ್ವೀಕೃತವೇ.

"ಆ ನೋ ಭದ್ರಾಃ ಕ್ರತವೋಯಂತು ವಿಶ್ವತಃ". ಇವರ ಅಧ್ಯಯನದ ಫಲಶ್ರುತಿ ಇಂತಿದೆ. ನಾಗರ ವೇಸರ ಮತ್ತು ದ್ರಾವಿಡಗಳು ಮೂಲತಃ ಪ್ರಾಚೀನ ಮಾದರಿಗಳು. ಈ ಮಾದರಿಗಳ ಹಿನ್ನೆಲೆಯೊಂದಿಗೆ ಮೂಡಿಬಂದದ್ದು ಪ್ರಾದೇಶಿಕ ಅಥವಾ ಸ್ಥಳೀಯ ಪ್ರಭೇದಗಳು. ರೇಖಾನಾಗರ, ಲತಿನ, ವಿಮಾನನಾಗರ, ಕಳಿಂಗ, ವರಾಟ, ಭೂಮಿಜ ಮೊದಲಾದವು ಈ ಸಾಲಿಗೆ ಸೇರುತ್ತವೆ. ಶೈಲಿ ಎಂಬ ಪದವನ್ನು ಬಳಸುವಾಗ ಇವರು ಎಚ್ಚರಿಕೆ ವಹಿಸುತ್ತಾರೆ. ಪ್ರದೇಶ ರಾಜವಂಶ ಮತ್ತು ಕಾಲ ಎಲ್ಲವನ್ನೂ ಗಮನಿಸುವುದರೊಂದಿಗೆ ಗಂಗ, ನೊಳಂಬ, ಚಾಲುಕ್ಯ, ಹೊಯ್ಸಳ ಎಂಬ ವರ್ಗೀಕರಣವನ್ನೂ ಸ್ವೀಕರಿಸುತ್ತಾರೆ. ದಾಕ್ಷಿಣಾತ್ಯ ಹಾಗೂ ಔತ್ತರೇಯ ದೇವಾಲಯಗಳೆಂದೂ ವರ್ಗೀಕರಿಸಿಕೊಳ್ಳುತ್ತಾರೆ. ನಾಗರ ದ್ರಾವಿಡ ಮತ್ತು ವೇಸರ ಶೈಲಿಗಳ ಶಿಖರಗಳನ್ನು ಗುರುತಿಸುವಾಗ, ಬ್ರಹ್ಮಛಂದ, ವಿಷ್ಣುಛಂದ, ರುದ್ರಛಂದ ಎಂದು ಗುರುತಿಸುತ್ತಾರೆ. ಈ ರೀತಿಯ ಸರಳೀಕೃತ ವರ್ಗೀಕರಣ ಪ್ರಾಥಮಿಕ ಹಂತದಲ್ಲಿ ಸ್ವೀಕಾರಾರ್ಹವೆನಿಸಿದೆ. ಅಧ್ಯಯನ ಮುಂದುವರೆದಂತೆ ಮತ್ತಷ್ಟು ಶಾಸ್ತ್ರೀಯ ದೃಷ್ಟಿಕೋನ ಅಗತ್ಯ.

ದೇವಾಲಯಗಳಿಗೆ ಸಂಬಂಧಿಸಿದ ಪರಿಭಾಷೆಯನ್ನು ನಿಖರವಾಗಿ ಗುರುತಿಸುವುದು ಕ್ಲಿಷ್ಟವೇ. ಈ ಪದಗಳು ವಾಸ್ತುಗ್ರಂಥಗಳಲ್ಲಿರುವ ಅರ್ಥಗಳಿಗಿಂತ ತಪ್ಪಾಗಿ ಬಳಕೆಯಲ್ಲಿರುವುದುಂಟು. ಇದಕ್ಕೆ ಶ್ರೀಸಾಮಾನ್ಯನೊಬ್ಬನೇ ಕಾರಣನಲ್ಲ. ಶಾಸನಗಳಲ್ಲಿಯೂ ತಪ್ಪಾಗಿ ಬಳಸಿರುವುದನ್ನು ಕಾಣಬಹುದು.ಉದಾಹರಣೆಗೆ ವಿಮಾನ, ಸುಕನಾಸಿ, ಗೋಪುರ ಮೊದಲಾದವನ್ನು ಗಮನಿಸಬಹುದು. ವಿಮಾನವೆಂದಲ್ಲಿ ಗರ್ಭಗೃಹದ ಮೇಲ್ಕಟ್ಟಡ ಎಂದು ಗುರುತಿಸುವುದೇ ಹೆಚ್ಚು ಬಳಕೆಯಲ್ಲಿದೆ. ಆದರೆ ವಿಮಾನವೆಂದರೆ ಗರ್ಭಗೃಹ ಮತ್ತು ಮೇಲ್ಕಟ್ಟಡ ಎರಡನ್ನೂ ಒಳಗೊಳ್ಳುತ್ತದೆ. ಮೇಲ್ಕಟ್ಟಡದಲ್ಲಿ ಶಿಖರವು ಒಂದು ಭಾಗವೆನಿಸಿದರೂ ಒಟ್ಟಾರೆ ಶಿಖರವೆಂದೇ ಗುರುತಿಸುವುದುಂಟು. ಸುಖನಾಸಿ ಎಂದಲ್ಲಿ ಅಂತರಾಳದ ಮೇಲಿರುವ ಭಾಗ-ಶಿಖರದ ಮುಂದಿರುವ ಮುಂಚಾಚು. ಕೆಳಗಿನ ಅಂತರಾಳ ಅಥವಾ ಅರ್ಧಮಂಟಪಕ್ಕೆ ಸುಖನಾಸಿ ಎಂದು ತಪ್ಪಾಗಿ ಬಳಸುತ್ತಾರೆ. ಉದಾಹರಣೆಗೆ ಮೈಸೂರಿನ ಲಿಂಗಾಂಬುಧಿ ಮತ್ತು ವರುಣದ ಶಾಸನಗಳನ್ನು ಗಮನಿಸಬಹುದು. ಅಪರ್ಣಾರವರು ಈ ಪದಗಳ ಅರ್ಥಖಚಿತತೆಯನ್ನು ತಮ್ಮ ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದಾರೆ. ಇಂಗ್ಲೀಷಿನ "ಸೂಪರ್‌ಸ್ಟ್ರಕ್ಚರ್" ಎಂಬ ತಾಂತ್ರಿಕಪದ ಅಧಿಷ್ಠಾನದ ಮೇಲಿರುವ ಕಟ್ಟಡಕ್ಕೆ ಅನ್ವಯಿಸುತ್ತದೆ. ಇದನ್ನು ತಪ್ಪಾಗಿ ಬಳಸುವ ಸಾಧ್ಯತೆ ಹೆಚ್ಚು. ಗೋಪುರ ಎಂದಲ್ಲಿ ಪ್ರವೇಶದ್ವಾರ ಮತ್ತು ಮೇಲ್ಕಟ್ಟಡ ಎರಡನ್ನೂ ಒಳಗೊಂಡ ಪ್ರಾಕಾರಭಿತ್ತಿಗೆ ಅಂಟಿಕೊಂಡ ಭಾಗ. ಹೊಯ್ಸಳರ ಕಾಲದ ಗೋಪುರಗಳಲ್ಲಿ ಮೇಲ್ಕಟ್ಟವಿಲ್ಲವೆಂದು ಗಮನಿಸಬೇಕು. ಗೋಪುರವೆಂದಲ್ಲಿ ಪ್ರವೇಶದ್ವಾರದ ಮೇಲ್ಕಟ್ಟಡ ಎಂದು ತಪ್ಪಾಗಿ ಬಳಸುವ ಸಾಧ್ಯತೆ ಹೆಚ್ಚು. ಗರ್ಭಗೃಹ ಹಾಗೂ ಪ್ರವೇಶ ದ್ವಾರದ ಮೇಲಿರುವ ರಚನೆಯನ್ನು ಖಂಡಹರ್ಮ್ಯ

ಎಂದು ಗ್ರಂಥಗಳು ಗುರುತಿಸಿವೆ. ಆದರೆ ಇದಕ್ಕೆ ಮತ್ತಷ್ಟು ಸಾಕ್ಷ್ಯಾಧಾರಗಳು ಬೇಕು. ಅಧಿಷ್ಠಾನ ರಚನೆಯಲ್ಲಿ ಪಾದಬಂಧ ಮತ್ತು ಪ್ರತಿಬಂಧಗಳಿಗೆ ಸಂಬಂಧಿಸಿದಂತೆ ತಪ್ಪು ತಿಳುವಳಿಕೆಗಳಿವೆ. ತಲರಚನೆಯಲ್ಲಿ ಕಾಣುವ ಪಂಜರ, ನಾಸಿ, ನಾಸೀಕೋಷ್ಠ ಕ್ಷುದ್ರನಾಸಿ, ಅಲ್ಪನಾಸಿ ಮೊದಲಾದವುಗಳನ್ನು ಖಚಿತವಾಗಿ ಗುರುತಿಸಬೇಕಾಗಿದೆ. ಇವುಗಳನ್ನು ಕುರಿತ ಪ್ರಾಥಮಿಕ ಮಾಹಿತಿ ಈ ಪುಸ್ತಕದಲ್ಲಿದೆ. ಈ ಕ್ಷೇತ್ರದಲ್ಲಿ ಈ ಪುಸ್ತಕ ಮೊದಲನೆಯದಾಗಿದ್ದು ಮುಂದಿನ ಅಧ್ಯಯನಕ್ಕೆ ನಾಂದಿಯನ್ನು ಹಾಡಿದೆ.

ಕನ್ನಡ ವಿಶ್ವವಿದ್ಯಾಲಯದ ಆಶಯಕ್ಕೆ ತಕ್ಕಂತೆ ಈ ಗ್ರಂಥವು, ವಾಸ್ತು ಸಂಬಂಧೀ ದೇಶೀ ಚಿಂತನೆಗಳ ಪಾರಂಪರಿಕ ಕ್ರಿಯೆ ಪ್ರಕ್ರಿಯೆ ರೂಪದ ಸ್ವದೇಶಿ ಸತ್ಯಗಳನ್ನು ತೆರೆದಿಡುವಲ್ಲಿ ಆರಂಭ ಹಂತದ ಸಫಲತೆಯನ್ನು ಕಂಡಿದೆ.

**– ಡಾ॥ ಎಂ. ಎನ್. ಪ್ರಭಾಕರ್**

---

## ಮಾಹಿತಿಗಳ ಕಣಜ, ಉಪಯುಕ್ತ ದಾಖಲೆ*

ಒಂದು ತೆರನ ಖಿನ್ನಭಾವವನ್ನು ಅನುಭವಿಸಲು ಮಾನಸಿಕ ಸಿದ್ಧತೆ ಮಾಡಿಕೊಂಡೇ ಕೆಲವು ಪುಸ್ತಕಗಳನ್ನು ಓದಲು ಆರಂಭಿಸಬೇಕಾಗುತ್ತದೆ. ಆಲೂರು ವೆಂಕಟರಾಯರ 'ಕರ್ನಾಟಕ ಗತವೈಭವ', ರಂ. ರಾ. ದಿವಾಕರರ 'ಕರ್ನಾಟಕ ಏಕೀಕರಣದ ಕಥೆ', ಗಳಗನಾಥರ 'ಕನ್ನಡಿಗರ ಕರ್ಮಕಥೆ' ಮುಂತಾದ ಕೃತಿಗಳು ಸಾಹಿತ್ಯಕವಾಗಿ, ಚಾರಿತ್ರಿಕವಾಗಿ, ಎಷ್ಟೇ ಮಹತ್ವದ ಬರಹಗಳಾದರೂ ಲಾಗಾಯಿತಿನಿಂದ ಕನ್ನಡಿಗರಿಗೆ ಒದಗಿಬಂದಿರುವ ಸ್ಥಿತಿಯ ದಾರುಣ ಚಿತ್ರವೊಂದು ಈ ಕೃತಿಗಳಲ್ಲಿ ಎದುರಾಗಿ ವಿಫಲತೆಯೇ ಕನ್ನಡಿಗರ ಹಣೆಬರಹವಾಯಿತಲ್ಲಾ ಎನ್ನುವ ಕೊರಗು ಹುಟ್ಟುತ್ತದೆ.

ತೀರ ಇತ್ತೀಚಿನ ವರ್ಷಗಳ ಕನ್ನಡ ಚಳವಳಿಯ ಇತಿಹಾಸವನ್ನು ಹೇಳುವ ರಾ. ನಂ. ಚಂದ್ರಶೇಖರ್‌ರ ಕನ್ನಡ ಹೋರಾಟಗಳು - ಒಂದು ನೋಟ ಎನ್ನುವ ಕೃತಿಯನ್ನು ಓದಿ ಮುಗಿಸಿದಾಗ ಉಳಿಯುವುದಾದರೂ ವಿಷಣ್ಣತೆಯೇ. ದೋಷ ಕೃತಿಯದಲ್ಲ, ಕೃತಿಕಾರರದೂ ಅಲ್ಲ. ಕನ್ನಡ-ಕನ್ನಡಿಗರ ಸ್ಥಿತಿ ಅಂದು ಇಂದು ಎಂದೂ ಒಂದೇ ಆಯಿತಲ್ಲ ಎನ್ನುವುದು ಎಲ್ಲ ವಿಷಾದಕ್ಕೂ ಹಿನ್ನೆಲೆಯಾಗುತ್ತದೆ. ಕನ್ನಡಿಗರು ನಾಡಿನ ಮತ್ತು ನಾಡಭಾಷೆಯ ಮೇಲ್ಮೆಯನ್ನು ಏಕೈಕ ಗುರಿಯಾಗಿಟ್ಟುಕೊಂಡು ಒಟ್ಟಾಗಿ ಕೆಲಸ ಮಾಡದೆ ಸಿಡಿದುಹೋದರಲ್ಲ ಎಂಬ ಕೊರಗು ಓದುಗನನ್ನು ತಟ್ಟುತ್ತದೆ. ಹಾಗೆಂದು 'ಕನ್ನಡ ಚಳವಳಿ' ಏನನ್ನೂ ಸಾಧಿಸಲೇ ಇಲ್ಲವೆಂದಲ್ಲ. ಕನ್ನಡ ಚಳವಳಿಯು ನಿಮಿತ್ತವಾಗಿ ನಾಡಿನಲ್ಲಿ, ನಾಡವರ ಭಾಷೆಯ ಸಂಬಂಧದಲ್ಲಿ ಆಗಿರುವ ಗಣನೀಯ ಸಾಧನೆಗಳ ಚಿತ್ರವೂ ಈ ಕೃತಿಯಲ್ಲಿದೆ ಮತ್ತು ಅಷ್ಟಿಷ್ಟು ನೆಮ್ಮದಿ ತರುವ ಅಂಶ ಇದೊಂದೇ.

---

* ಕನ್ನಡ ಹೋರಾಟಗಳು : ರಾ. ನಂ. ಚಂದ್ರಶೇಖರ್, ಕನ್ನಡ ಗೆಳೆಯರ ಬಳಗ, ಶ್ರೀನಗರ, ಬೆಂ. ೧೯೯೯

ಕನ್ನಡ ಚಳವಳಿಯ, ಕನ್ನಡಪರ ಹೋರಾಟಗಾರರ ವಲಯಗಳಲ್ಲಿ ರಾ. ನಂ. ಚಂದ್ರಶೇಖರರದು ತುಂಬ ಪರಿಚಿತ ಹೆಸರು. ಕನ್ನಡ ಪರ ಆಂದೋಳನಗಳಲ್ಲಿ ಸಕಾರಾತ್ಮಕವಾಗಿ ಪಾಲ್ಗೊಂಡು ಭಾಷೆಯ ಪರ ನಡೆದ ಚಟುವಟಿಕೆಗಳನ್ನು ಕುರಿತ ಹಾಗೆ 'ಚಲಿಸುವ ಮಾಹಿತಿ ಕೇಂದ್ರ'ವೇ ಎನ್ನಬಹುದಾದ ರಾ. ನಂ. ಚ. ವಿಚಾರಾತ್ಮಕವಾಗಿ ಕನ್ನಡಾಭಿಮಾನವನ್ನು ಮೆರೆಯುವ ಐದು ಕೃತಿಗಳನ್ನು ರಚಿಸಿದ್ದಾರೆ.* ಪ್ರಸ್ತುತ ವಿಮರ್ಶೆಗೆ ಬಂದಿರುವ ಕೃತಿ ಅಂಥ ಪುಸ್ತಕಗಳ ಸಾಲಿನಲ್ಲಿ ಆರನೆಯದು.

ಕೃತಿ ಪರಿಶೀಲನೆಗೆ ಕೈಹಾಕುವ ಮೊದಲು, 'ಕನ್ನಡ ಚಳುವಳಿ' ಪ್ರಾರಂಭವಾದ ಹಿನ್ನೆಲೆ ಹಾಗೂ ಅದು ಇಂದಿನವರೆಗೆ ಸಾಗಿಬಂದಿರುವ ಕ್ರಮವನ್ನು ಅವಲೋಕಿಸಬೇಕಾಗಿದೆ.

ತಮಿಳುನಾಡಿನಲ್ಲಿ ಯಾವುದೇ ಪಕ್ಷದ ಸರಕಾರವಿರಲಿ, ಆ ಸರಕಾರ ಗಟ್ಟಿಯಾಗಿ ಒಂದು ಕೂಗು ಹಾಕಿದರೆ ಸಾಕು ದಿಲ್ಲಿಯ ಪ್ರಭುಗಳು ನಡುಗಿಹೋಗಿ ತಮಿಳರು ಕೇಳಿದ್ದನ್ನು ಅವರ ಕಾಲಬುಡಕ್ಕೇ ತಂದು ಹಾಕುತ್ತಾರೆ. ರಾಜ್ಯಗಳ ಜೊತೆ ಕೇಂದ್ರ ಚೆಲ್ಲಾಟವಾಡುವುದೇ ನಿಮಿತ್ತವಾಗಿ ತೆಲುಗುದೇಶಂ ಪಕ್ಷ ಅಸ್ತಿತ್ವಕ್ಕೆ ಬಂತು. ಕೇಂದ್ರವನ್ನು ಮಣಿಸುವುದರಲ್ಲಿ ಒಂದೊಂದು ರಾಜ್ಯದ್ದು ಒಂದೊಂದು ವಿಧಾನ. ಬೇರೆ ರಾಜ್ಯಗಳವರು ಒಂದು ಗತ್ತು ಹಾಕಿ ತಮ್ಮ ತಮ್ಮ ರಾಜ್ಯಗಳ ಒಳಿತನ್ನು ಸಾಧಿಸುತ್ತಾರಾದರೆ, ಇತ್ತ ನಮ್ಮ ಕರ್ನಾಟಕದಲ್ಲಿ ತಿಂಗಳುಗಟ್ಟಲೆ, ವರ್ಷಗಟ್ಟಲೆ ಚಳವಳಿ, ಹೋರಾಟ, ಪ್ರತಿಭಟನೆಗಳು ನಡೆದರೂ ಕನ್ನಡಿಗರಿಗೆ ಕಿಂಚಿತ್ತು ನ್ಯಾಯವೂ ದೊರೆಯುವುದಿಲ್ಲ. ಯಾವ ಪಕ್ಷದವರೇ ಇರಲಿ ಕರ್ನಾಟಕದ ರಾಜಕಾರಣಿಗಳು ಮೌನ ವಹಿಸಿ ಕೂರುತ್ತಾರೆ. ಇಲ್ಲವೆ 'ಕಾಟಾಚಾರಕ್ಕೆ ಏನೋ ಒಂದಿಷ್ಟು ಮಾತಾಡಿದ ಶಾಸ್ತ್ರ ಮಾಡಿ ಕೈತೊಳೆದುಕೊಳ್ಳುತ್ತಾರೆ.

ಕನ್ನಡನಾಡಿನಲ್ಲಿರುವ ಕೇಂದ್ರೋದ್ಯಮಗಳಲ್ಲಿ ಹಾಗೂ ಕೇಂದ್ರ ಸರಕಾರಿ ಕಚೇರಿಗಳಲ್ಲಿ ಪರಪ್ರಾಂತೀಯರು ಸುಲಭವಾಗಿ ನೌಕರಿ ಗಿಟ್ಟಿಸಿಕೊಳ್ಳುತ್ತಾರೆ. ಕೇಳುವವರಿಲ್ಲ. ಕರ್ನಾಟಕದಲ್ಲಿ ಕೆಲಸ ಮಾಡುವವರಿಗೆ ಕನ್ನಡ ಭಾಷಾಜ್ಞಾನ ಕಡ್ಡಾಯವಲ್ಲ. ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ರಾಜ್ಯ ಭಾಷೆಯ ಬೋಧನೆ ಕಡ್ಡಾಯ ಎಂದು ಆಜ್ಞೆ ಹೊರಡಿಸಿದರೆ ಇಂಗ್ಲಿಷ್ ಶಾಲೆಗಳ ಒಡೆಯರು ಕೋರ್ಟುಗಳ ಮೊರೆ ಹೊಕ್ಕು ಸಂವಿಧಾನದ ಹೆಸರು ಹೇಳಿ ಕನ್ನಡಿಗರನ್ನು ಹಂಗಿಸುತ್ತಾರೆ. ಹೀಗೆ ಕನ್ನಡ-ಕನ್ನಡಿಗರು ವಂಚನೆಗೊಳಗಾಗದ ಕ್ಷೇತ್ರವೇ ಇದ್ದಂತಿಲ್ಲ.

ಇಷ್ಟೇ ಸಾಲದೆಂಬಂತೆ ಕನ್ನಡಿಗ ಅಧಿಕಾರಿಗಳು ಹಾಗೂ ರಾಜಕಾರಣಿಗಳ ದೆಸೆಯಿಂದಲೇ ಕನ್ನಡ ಭಾಷೆ ಅನುಭವಿಸುತ್ತಿದ್ದ ಹಿನ್ನಡೆ - ಸವಾಲುಗಳು, ಅನ್ಯಭಾಷಾ

---

* 1) ಸಂಘಟನೆಯ ಮೂಲತತ್ತ್ವಗಳು 2) ಕನ್ನಡ-ಕನ್ನಡಿಗ-ಕರ್ನಾಟಕ 3) ಕನ್ನಡ ಶಕ್ತಿ 4) ಕನ್ನಡ ಚಳವಳಿ-ಸಾಹಿತಿ ಕಲಾವಿದರ ಬಳಗ 5) ಅಂತರರಾಜ್ಯ ವಲಸೆ-ಪರಿಣಾಮ.

ವಲಸಿಗರ ಆಕ್ರಮಣಕಾರಿ ಧೋರಣೆ ಹಾಗೂ ಸಂವಿಧಾನದ ಹೆಸರಿನಲ್ಲಿ ಈ ಜನ ನಡೆಸುತ್ತಿದ್ದ ದಬ್ಬಾಳಿಕೆಗಳೂ ಸೇರಿ ಶ್ರೀ ಸಾಮಾನ್ಯ ಕನ್ನಡಿಗರ ಸ್ಥಿತಿ ಶೋಚನೀಯವಾಗಿತ್ತು. ಈ ಎಲ್ಲ ವಿದ್ಯಮಾನಗಳಿಂದ ನೊಂದ ಭಾಷಾಪ್ರೇಮಿ ಮಹನೀಯರನೇಕರು ಸರಕಾರವನ್ನು ನೆಚ್ಚಿ ಕುಳಿತರೆ ಫಲವಿಲ್ಲವೆಂಬುದನ್ನು ಮನಗಂಡು ಪ್ರತಿಭಟನೆಯ ಧ್ವನಿ ಎತ್ತಿದರು. ಅದೇ ಕನ್ನಡ ಚಳವಳಿಗೆ ನಾಂದಿ.

ಒಂದೆಡೆ ದಿವಂಗತ ಶಾಂತವೇರಿ ಗೋಪಾಲಗೌಡರು, ಇನ್ನೊಂದೆಡೆ ಈ ಕೋಣಂದೂರು ಲಿಂಗಪ್ಪ - ಮುಖ್ಯವಾಗಿ ಈ ಇಬ್ಬರು ಮತ್ತು ಇನ್ನಿತರ ಹಲವು ನಾಡು-ನುಡಿ ಪ್ರೇಮಿಗಳ ಚಿಂತನೆಯ ಫಲವಾಗಿ ರೂಪುಗೊಂಡ 'ಕನ್ನಡ ಯುವಜನ ಸಭಾ'ದ ಮೂಲಕ ೧೯೬೦ರ ಹೊತ್ತಿಗೆ ಪ್ರಾರಂಭಿಕ ಹೆಜ್ಜೆಗಳನ್ನಿಡುತ್ತಿದ್ದ ಕನ್ನಡ ಚಳವಳಿ ಕ್ರಮೇಣ ದೃಢ ಹೆಜ್ಜೆಗಳನ್ನಿಡುತ್ತ ೧೯೬೩ರ ಹೊತ್ತಿಗೆ ಬೃಹತ್ ಆಂದೋಲನವಾಗಿ ಸಿಡಿಯುತ್ತದೆ. ಅ. ನ. ಕೃ., ಮ. ರಾಮಮೂರ್ತಿ ಮುಂತಾದ ಸಾಹಿತಿ ಗಣ್ಯರು ಆಂದೋಲನದ ಮುಂಚೂಣಿಯಲ್ಲಿ ನಿಲ್ಲುತ್ತಾರೆ. ಇದೇ ಸುಮಾರಿನಲ್ಲಿ ವಾಟಾಳ್ ನಾಗರಾಜ್ ಚಳವಳಿ ಪ್ರಾರಂಭಿಸಿ, ಅದರ ವ್ಯಾಪ್ತಿಯನ್ನು ವಿಸ್ತರಿಸಿ ಅದಕ್ಕೊಂದು ಸಾರ್ವತ್ರಿಕತೆಯ ರೂಪ ತಂದುಕೊಡುವುದರಲ್ಲಿ ಸ್ವಲ್ಪಮಟ್ಟಿಗೆ ಯಶಸ್ವಿಯಾಗುತ್ತಾರೆ. ನವೆಂಬರ್ ತಿಂಗಳಿನಲ್ಲಿ ರಾಜ್ಯೋತ್ಸವ ಆಚರಿಸುವ ಸಂಪ್ರದಾಯ ಮೊದಲಾದದ್ದು ಈ ಸುಮಾರಿನಲ್ಲಿಯೇ. ಹಿಂದಿಯನ್ನು ದಾಕ್ಷಿಣಾತ್ಯರ ಮೇಲೆ ಹೇರಲು ಯತ್ನಿಸಿದ ಸರಕಾರದ ವಿರುದ್ಧ ನಡೆದ ೧೯೬೫ರ ಪ್ರತಿರೋಧ ಅರವತ್ತರ ದಶಕದ ಇನ್ನೊಂದು ಮಹತ್ವದ ಘಟನೆ. ಈಗ ಎಲ್ಲೆಲ್ಲೂ ರಾರಾಜಿಸುವ ಕನ್ನಡ ಬಾವುಟ ವಿನ್ಯಾಸಗೊಂಡದ್ದು ಕನ್ನಡ ಚಳವಳಿಯ ಕಾವಿನಲ್ಲೇ. ಇನ್ನೇನು ಕನ್ನಡವನ್ನು ಕನ್ನಡನಾಡನ್ನು ಮುನ್ನಡೆಸಬಲ್ಲ ಸಮರ್ಥ ಸೇನಾನಿಗಳು ಸಿಕ್ಕಿಯೇಬಿಟ್ಟರು ಎನಿಸುತ್ತಿರುವಾಗಲೇ ೧೯೬೬ರ ಹೊತ್ತಿಗೆ ಚಳವಳಿ ದಾರಿ ತಪ್ಪುತ್ತದೆ. ಒಬ್ಬೊಬ್ಬ ಧುರೀಣರು ಒಂದೊಂದು ಮಾರ್ಗ ಹಿಡಿಯುತ್ತಾರೆ. ಕನ್ನಡ ಸಂಯುಕ್ತರಂಗದ ಉದಯವಾಗಿ ಅದರ ಅವಸಾನವೂ ಆಗುತ್ತದೆ. ಮ. ರಾಮಮೂರ್ತಿಯವರ ದುರಂತ ಮರಣ ಚಳವಳಿ ಇನ್ನಷ್ಟು ಅನಾಥವಾಗುತ್ತದೆ. ಅ. ನ. ಕೃ. ಚಳವಳಿಯಿಂದ ಹಿಂದೆ ಸರಿಯುತ್ತಾರೆ.

೧೯೭೦ರ ದಶಕ ಕನ್ನಡ ಚಳವಳಿಯ ಮಟ್ಟಿಗೆ ಬಹಳಷ್ಟೇ ಹಿನ್ನಡೆ ಕಂಡ ದಶಕ. ಅ. ನ. ಕೃ. ನಿಧನರಾಗುತ್ತಾರೆ. ಇತ್ತ ಗೋಪಾಲಗೌಡರೂ ವಿಧಿವಶರಾಗಿ ಕನ್ನಡಿಗರ ಹೋರಾಟ ಸ್ಥಗಿತಗೊಳ್ಳುತ್ತದೆ. ರಾಜ್ಯಕ್ಕೆ ಕರ್ನಾಟಕ ಎಂದು ನಾಮಕರಣ ಆದದ್ದೊಂದೇ ಈ ದಶಕದಲ್ಲಿ ಎದ್ದು ಕಾಣುವ ಅಂಶ.

ಕನ್ನಡ ಚಳವಳಿಯ ಮಟ್ಟಿಗೆ ೮೦ರ ದಶಕವೇ ಪರ್ವಕಾಲ ಎನ್ನಬಹುದು. ನಾಡಿನ ಗಣ್ಯ ಪ್ರತಿಭಾನ್ವಿತ ಸಾಹಿತಿ ಕಲಾವಿದರು ಚಳವಳಿಗೆ ನೈತಿಕ ಆಸರೆ ನೀಡುತ್ತಾರೆ. ಚಳವಳಿಗೆ ಒಂದು ಸೈದ್ಧಾಂತಿಕ ಚೌಕಟ್ಟು ಲಭ್ಯವಾಗುತ್ತದೆ. ಬರೀ ಬೀದಿ ಹೋರಾಟದ ನೆಲೆ

ಬಿಟ್ಟುಕೊಟ್ಟು ನಾಡುನುಡಿಗಳ ಅಭಿಮಾನಿಗಳ ಆಶೋತ್ತರಗಳನ್ನು ಪೂರೈಸುವ ದಿಕ್ಕಿನಲ್ಲಿ ಚಳವಳಿ ಗಂಭೀರವಾಗಿ ತೊಡಗಿಕೊಳ್ಳುತ್ತದೆ.

ಕಾವೇರಿ ಜಲವಿವಾದ ಸಂಬಂಧದಲ್ಲಿ ನಡೆದ ಉಗ್ರ ಪ್ರತಿಭಟನೆ ಹಾಗೂ ಉರ್ದು ವಾರ್ತಾಪ್ರಸಾರದ ವಿರುದ್ಧ ನಡೆದ ಹೋರಾಟಗಳು ೬೦ರ ದಶಕದ ಉಲ್ಲೇಖಾರ್ಹ ಘಟನೆಗಳಾಗಿವೆ.

ಮೇಲಿನ ಎಲ್ಲ ವಿವರಗಳನ್ನೂ 'ಕನ್ನಡ ಹೋರಾಟಗಳು' ಎನ್ನುವ ಈ ಕೃತಿ ಎಳೆಎಳೆಯಾಗಿ ಬಿಡಿಸಿಡುತ್ತದೆ. ಲಭ್ಯವಿದ್ದ ಎಲ್ಲ ಮಾಹಿತಿಗಳನ್ನೂ ಪುಸ್ತಕದಲ್ಲಿ ಸೇರಿಸಲಾಗಿದೆ. ಹಾಗೆ ನೋಡಿದರೆ ಪುಸ್ತಕದಲ್ಲಿ ಮಾಹಿತಿಗಳದೇ ಮೇಲುಗೈ. ಹಲವು ಸಂಗತಿಗಳನ್ನು ಹೇಳುತ್ತಾ ನೀರಸ ವರದಿಯಾಗಬಹುದಿದ್ದ ಈ ಬರಹ ಕಥನ ಶೈಲಿಯ ಮಾರ್ಗ ಹಿಡಿದು ಲವಲವಿಕೆ ಗಳಿಸಿಕೊಳ್ಳುತ್ತದೆ.

"ಇಂದಿನ ದಿನಗಳಲ್ಲಿ ನಡೆಯುತ್ತಿರುವ ಕನ್ನಡ ಚಳವಳಿ ಒಂದು ರೀತಿಯಲ್ಲಿ ಪ್ರಾರಂಭವಾದದ್ದು ೧೯೧೨ರಲ್ಲಿ. ಆ ವರ್ಷ ಎಂ. ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನಕ್ಕೆ ದಿವಾನರಾದರು" ಎಂದು ಪುಸ್ತಕದಲ್ಲಿ ಒಂದು ಕಡೆ ನಮೂದಿಸಲಾಗಿದ್ದರೂ ವಾಸ್ತವವಾಗಿ, "ಕನ್ನಡ ಚಳವಳಿಯು ಪ್ರತ್ಯೇಕ ಆಂದೋಲನವಾಗಿ ಗುರುತಿಸಲ್ಪಟ್ಟಿದ್ದು ಕರ್ನಾಟಕ ಏಕೀಕರಣದ ನಂತರವೆ" ಎನ್ನುವ ಮಾತನ್ನೇ ಪುಸ್ತಕ ಹೆಚ್ಚು ಸಮರ್ಥಿಸುತ್ತದೆ.

ಪ್ರಕಾಶಕರ ಅರಿಕೆ, ಪಿ. ವಿ. ನಾರಾಯಣರ ಅರ್ಥಪೂರ್ಣ 'ಕೆಲವು ಮಾತುಗಳು' ಹಾಗೂ ಲೇಖಕರ ಬಿನ್ನಹ - ಇವುಗಳನ್ನು ವಿನಾಯಿಸಿದರೆ ಒಟ್ಟು ೧೨೫ ಪುಟಗಳಲ್ಲಿ ನಲವತ್ತು ವರ್ಷಗಳ ಅವಧಿಯ ಹೋರಾಟಗಳ ಒಂದು ಸ್ಥೂಲ ಚಿತ್ರವನ್ನು ನೀಡುವಲ್ಲಿ ಕೃತಿ ಸಫಲವಾಗಿದೆ.

ಒಟ್ಟು ಹನ್ನೆರಡು (ಆಕರ್ಷಕ ಶೀರ್ಷಿಕೆಗಳುಳ್ಳ) ಅಧ್ಯಾಯಗಳಲ್ಲಿ ಹರಿದುಬರುವ ನಲವತ್ತು ವರ್ಷಗಳ ಕನ್ನಡ ಚಳವಳಿಯ ಕಥೆಯನ್ನು ಸ್ವಾರಸ್ಯ ಕೆಡದಂತೆ, ದ್ವೇಷಾಸೂಯೆಗಳಿಗೆ ಎಡೆಗೊಡದಂತೆ ಹೇಳಲಾಗಿದೆ. ಕನ್ನಡದ, ಕನ್ನಡನಾಡಿನ ಹಿತಕ್ಕೆ ಧಕ್ಕೆಯಾಗುವಂತೆ ವರ್ತಿಸಿದ ಎಂಥವರನ್ನೂ ಹೆಸರು ಹೇಳಿ ಟೀಕಿಸುವ ನಾಲ್ಕಾರು ವಾಕ್ಯಗಳು 'ಕನ್ನಡದ ಮೇಲೆ ಅನ್ಯರ ಸಾಂಸ್ಕೃತಿಕ ಧಾಳಿ' ಹಾಗೂ 'ಶಿಕ್ಷಣ ಮಾಧ್ಯಮವಾಗಿ ಕನ್ನಡ' ಎಂಬ ಅಧ್ಯಾಯಗಳಲ್ಲಿ ಓದಲು ಸಿಗುತ್ತವೆ. ಕೃತಿಯಲ್ಲಿ ಅನೇಕ ಕಡೆ ವ್ಯಕ್ತವಾಗುವ ಅಭಿಪ್ರಾಯಗಳು ಕೇವಲ ಕನ್ನಡಾಭಿಮಾನಿಗಳೊಬ್ಬರ ಅಭಿಪ್ರಾಯದ ಮಾತುಗಳಾಗಿರದೆ ಇಡೀ ನಾಡಜನರ, ಭಾಷಾಭಿಮಾನಿಗಳ ನಾಡಿಮಿಡಿತವನ್ನು ಅರಿತವರೊಬ್ಬರು ಮಾತ್ರ ಆಡಬಹುದಾದಂಥ ಮಾತುಗಳಾಗಿವೆ. ಒಟ್ಟಿನಲ್ಲಿ ವಿನ್ನತೆ, ರೋಷ, ಜಿಗುಪ್ಸೆ, ಹತಾಶೆಗಳನ್ನು ಹೆಚ್ಚಿನ ಪ್ರಮಾಣದಲ್ಲೂ, ಒಂದಿಷ್ಟು ಸಂತಸವನ್ನು ಅಲ್ಪ ಪ್ರಮಾಣದಲ್ಲೂ ಉದ್ದೀಪಿಸುವ ಕೃತಿ ಈ 'ಕನ್ನಡ ಹೋರಾಟಗಳು'.

ಕನ್ನಡಪರ ಹೋರಾಟಗಳಿಂದ ಕನ್ನಡಿಗರಿಗೆ ಲಾಭವಾಯಿತೆ? ಕನ್ನಡಿಗರು ಗೆದ್ದರೆ? ಈ ಪ್ರಶ್ನೆಗಳಿಗೆ ಪುಸ್ತಕದಲ್ಲಿ ಉತ್ತರ ಸಿಗುವುದಿಲ್ಲ. ಕನ್ನಡದ ಹೆಸರು ಹೇಳಿ ಮನೆ ಮಠ ಮಾಡಿಕೊಂಡವರದಾಗಲಿ ಮಾರಿಕೊಂಡವರದಾಗಲಿ ವಿವರಗಳು ಪುಸ್ತಕದಲ್ಲಿಲ್ಲ. ಕನ್ನಡಪರ ಹೋರಾಟ ಬಲ್ಲಂಥವರ ಸಂಖ್ಯೆ ಇಳಿಮುಖವಾಗುತ್ತಿದೆ ಎಂಬ ಅಪಾಯದ ಸೂಚನೆ ಅಲ್ಲಲ್ಲುಂಟು.

ಕನ್ನಡಪರ ಚಳವಳಿಗಳು ಶುದ್ಧ ರಾಜಕೀಯ ಸ್ವರೂಪ ಪಡೆಯುತ್ತಿರುವ ಈ ದಿನಗಳಲ್ಲಿ, ಕನ್ನಡದ ಹೆಸರನ್ನು ಒಂದು ಊರುಗೋಲಾಗಿ ಬಳಸುವುದು ವ್ಯವಸ್ಥಿತ ಕ್ರಮವಾಗುತ್ತಿರುವ ಈ ಹೊತ್ತು ಈ ಪುಸ್ತಕ ಹೊರಬರುತ್ತಿರುವುದು ಔಚಿತ್ಯಪೂರ್ಣವಾಗಿದೆ.

ಪ್ರೇರಣೆ ಒದಗಿಸಬಲ್ಲ ಒಂದು ಶಕ್ತಿ ಕನ್ನಡಿಗರ ಹಿಂದಿದ್ದರೆ ಅವರ ಶೌರ್ಯ ಬೆಳಕಿಗೆ ಬರುತ್ತದೆ. ಜನ ಕಾರ್ಯೋನ್ಮುಖರಾಗುತ್ತಾರೆ, ಒಟ್ಟುಗೂಡುತ್ತಾರೆ. ಅಂಥ ಪ್ರೇರಕಶಕ್ತಿ ಒಂದಿಲ್ಲವೋ ಕನ್ನಡಿಗರು ಎಂಬ ಜನಪದ ಒಂದಿದೆಯೇ ಎಂಬಂತಿರುತ್ತದೆ ಈ ಜನರ ಬದುಕು. ಈ ಅಭಿಪ್ರಾಯವನ್ನು ಕೃತಿಯು ಪರೋಕ್ಷವಾಗಿ ಅನೇಕ ಸಲ ಪ್ರತಿಪಾದಿಸುತ್ತದೆ.

"ಇಪ್ಪತ್ತೊಂದನೆಯ ಶತಮಾನದ ಹೊಸ್ತಿಲಲ್ಲಿರುವ ಈ ಸಂದರ್ಭದಲ್ಲಿ ಕನ್ನಡ-ಕನ್ನಡಿಗ-ಕರ್ನಾಟಕ ಸ್ಥಿತಿಗತಿಗಳ ಬಗ್ಗೆ ಎಲ್ಲ ಕಡೆಗಳಿಂದ ಆತಂಕದ ಧ್ವನಿಗಳು ಕೇಳಿಬರುತ್ತಿವೆ" - ಪುಸ್ತಕದ ಕೊನೆಯ ಪ್ಯಾರಾದಲ್ಲಿ ಬರುವ ಈ ಎಚ್ಚರಿಕೆಯ ಮಾತುಗಳು ಕನ್ನಡಿಗರಲ್ಲಿ ನಾಟಿಕೊಳ್ಳಬೇಕಾದ್ದು ಇನ್ನೂ ಆಗಬೇಕಾಗಿರುವ ಕಾರ್ಯ. ಈ ಪುಸ್ತಕದಲ್ಲಿರುವಷ್ಟು ಮಾಹಿತಿಗಳನ್ನಾದರೂ ನೀಡಬಲ್ಲ ಇನ್ನೊಂದು ಬರಹ ಈವರೆಗೆ ಪ್ರಕಟವಾಗಿರುವುದು ನಾಡಜನಕ್ಕೆ ತಿಳಿಯದು. ಈ ಬಗ್ಗೆ ವ್ಯಾಪಕವಾಗಿದ್ದ ಅರಕೆಯನ್ನು ಹೋಗಲಾಡಿಸಿರುವ ರಾ. ನಂ. ಚ. ಅಭಿನಂದನಾರ್ಹರು.

**– ಎಂ. ಕೆ. ಗೋಪಿನಾಥ್**

---

## ಅಂತರಶಿಸ್ತೀಯ ಸಂಶೋಧನ ವಿಧಿವಿಧಾನ*

ಇಂದು ಸಂಶೋಧನೆ ಒಂದು ಶಿಸ್ತಿಗೆ ಸೀಮಿತವಾಗಿರದೆ ಇನ್ನೊಂದರ ಸಹಾಯವನ್ನು ಬಯಸುವ ಹಂತದಲ್ಲಿದೆ, ಶಿಸ್ತು ಶಿಸ್ತುಗಳ ಗಡಿಗಳು ಅಳಿಸಿಹೋಗುತ್ತಿವೆ. ವಿಶೇಷವಾಗಿ ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರಗಳ ಸಂಶೋಧನೆಗಳಲ್ಲಿ ಅಂತರಶಿಸ್ತೀಯ ಸಂಶೋಧನೆ ಅನಿವಾರ್ಯವೆನ್ನುವಂತಿದೆ. ಈ ಕಾರಣದಿಂದಲೇ ಇಂದು ಅಂತರಶಿಸ್ತೀಯ ಸಂಶೋಧನೆ ಅಧಿಕಗೊಳ್ಳುತ್ತಿದೆ. ವಿಶ್ವವಿದ್ಯಾನಿಲಯಗಳು ಇದನ್ನೊಂದು

---

* ಸಂ : ನಾ. ಗೀತಾಚಾರ್ಯ, ಪ್ರ : ಬಿ.ಎಂ.ಶ್ರೀ. ಪ್ರತಿಷ್ಠಾನ ೧೯೯೬. ಬೆಲೆ : ೨೫-೦೦.

ಪ್ರತ್ಯೇಕ ಶಿಸ್ತನ್ನಾಗಿ ಅಧ್ಯಯನಕ್ಕೆ ಒಳಪಡಿಸುತ್ತದೆ. ಈ ಅಂತರರಾಷ್ಟ್ರೀಯ ಅಧ್ಯಯನವನ್ನು ೬೦ ದಶಕದ ಒಂದು ನೂತನ ಅಧ್ಯಯನ ಶಿಸ್ತು ಎಂದರೂ ತಪ್ಪಾಗದು. ಸಾಹಿತ್ಯ ಮತ್ತು ಸಂಶೋಧನೆ ಎರಡರಲ್ಲೂ ಈ ಅಧ್ಯಯನ ಕಾಣಿಸಿಕೊಂಡಿದೆ. ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ 'ತೌಲನಿಕ ಸಾಹಿತ್ಯ' ಎಂಬ ಪ್ರತ್ಯೇಕ ಎಂ. ಎ. ಅಧ್ಯಯನವೇ ರೂಪಗೊಂಡಿದೆ. ಇಂದು ಹೊರಬರುತ್ತಿರುವ ಹಲವಾರು ಪಿ.ಎಚ್.ಡಿ. ಗ್ರಂಥಗಳು ಅಂತರ ಶಿಸ್ತೀಯ ಅಧ್ಯಯನದ ಫಲಶೃತಿಗಳಾಗಿ ಕಾಣಿಸುತ್ತಿವೆ.

ಹೀಗೆ ವಿಪುಲವಾಗಿ ಬೆಳೆಯುತ್ತಿರುವ ಈ ನೂತನ ಅಧ್ಯಯನ ಶಿಸ್ತಿಗೆ ನಿರ್ದುಷ್ಟವಾದ ಶಾಸ್ತ್ರ ಗ್ರಂಥವೊಂದು ಇನ್ನೂ ನಿರ್ಮಾಣವಾಗದೆ ಇರುವುದು ಒಂದು ಕೊರತೆ ಎನಿಸಿದೆ. ಈ ನಿಟ್ಟಿನಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನವೇ ಈ ದಶಕದ ಆರಂಭದಲ್ಲಿ ತನ್ನ ದಶಮಾನೋತ್ಸವ ಸ್ಮೃತಿ ಮಾಲೆಯಲ್ಲಿ 'ತೌಲನಿಕ ಸಾಹಿತ್ಯ' ಎಂಬ ಗ್ರಂಥವೊಂದನ್ನು ಮುದ್ರಿಸುವುದಾಗಿ ಪ್ರಕಟಿಸಿದ್ದರೂ ಅದು ಈವರೆಗೆ ಪ್ರಕಟವಾಗದಂತೆ ಕಂಡುಬರುವುದಿಲ್ಲ. ಬೇರೆ ಬೇರೆ ಶಿಸ್ತುಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಶೋಧನ ಕೈಪಿಡಿಗಳು, ವಿಧಿ ವಿಧಾನಗಳಿದ್ದು ಅವುಗಳನ್ನೇ ಸದ್ಯಕ್ಕೆ ಬಳಸಿಕೊಳ್ಳಲಾಗುತ್ತಿದೆ. ಅಂತರ ಶಿಸ್ತೀಯ ಸಂಶೋಧನೆ ನಡೆಸುವ ವಿದ್ಯಾರ್ಥಿಗಳು ಮೂಲತಃ ಒಂದು ಶಿಸ್ತಿನ ಗಂಭೀರ ವಿದ್ಯಾರ್ಥಿಯಾಗಿರುತ್ತಾರೆಯೇ ವಿನಾ ಇನ್ನೊಂದು ಶಿಸ್ತಿನಲ್ಲಿ ಪ್ರವೇಶ ಹೊಂದಿರುವುದಿಲ್ಲ. ಇಂತಹ ತಿಳುವಳಿಕೆ ತೌಲನಿಕ ಅಧ್ಯಯನಕ್ಕೆ ಅತ್ಯಗತ್ಯವಾಗಿರುತ್ತದೆ. ಇನ್ನೊಂದು ಶಿಸ್ತಿನ ಅರಿವಿನ ಮಟ್ಟ ಸಂಶೋಧನೆಯ ಗುಣಮಟ್ಟವನ್ನೂ ಅಳೆಯುವ ಮಾಪನವಾಗುವುದರಿಂದ ಅಂತರ ಶಿಸ್ತೀಯ ಸಂಶೋಧನೆ ನಡೆಸುವವರು ಎರಡು ಶಿಸ್ತುಗಳ ವಿಧಿವಿಧಾನಗಳನ್ನು ಸಮರ್ಪಕವಾಗಿಯೇ ಗ್ರಹಿಸಬೇಕಾಗುತ್ತದೆ.

ಈ ನಿಟ್ಟಿನಲ್ಲಿ ಈ ಗ್ರಂಥ ಒಂದು ಉತ್ತಮ ಆಕರ ಗ್ರಂಥವಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಮೊದಲ ಬಾರಿಗೆ ವಿವಿಧ ಶಿಸ್ತುಗಳ ಸಂಶೋಧನೆಗಳ ಸ್ವರೂಪಗಳನ್ನು ಒಂದೆಡೆಗೆ ತರುವ ಪ್ರಯತ್ನ ಇಲ್ಲಿ ನಡೆದಿದೆ. ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ಕರ್ನಾಟಕದಲ್ಲಿ ಒಂದು ಶ್ರೇಷ್ಠ ಮಟ್ಟದ ಸಂಶೋಧನ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿರುವುದು ಅಭಿನಂದನೀಯವಾಗಿದೆ. ಇದು ಪ್ರಕಟಿಸುತ್ತಿರುವ 'ಕರ್ನಾಟಕ ಲೋಚನ' ನಿಯತವಾಗಿ ಪ್ರಕಟವಾಗುತ್ತಿರುವ ಕರ್ನಾಟಕದ ಏಕೈಕ ವಿದ್ವತ್ ಪತ್ರಿಕೆಯಾಗಿದೆ. ಸಾಂಸ್ಕೃತಿಕ ಕ್ಷೇತ್ರದಲ್ಲಿ ಪ್ರಬುದ್ಧ ಕರ್ನಾಟಕದ ಪರಂಪರೆಯನ್ನು ಮುಂದುವರಿಸಿಕೊಂಡು ಬರುವಲ್ಲಿ; ಸಂಶೋಧನೆಯನ್ನು ಒಂದು 'ವ್ರತ'ವನ್ನಾಗಿ ಸ್ವೀಕರಿಸಿ ಅದರ ಉಳಿವು-ಬೆಳವಣಿಗೆಗೆ ಪೋಷಕವಾಗಿ ಹಲವು ಚಟುವಟಿಕೆಗಳನ್ನು ನಡೆಸುತ್ತಿರುವ ಈ ಸಂಸ್ಥೆಯ ಸಂಸ್ಥಾಪಕ ಡಾ|| ಪ್ರೊ|| ಎಂ. ವಿ. ಸೀತಾರಾಮಯ್ಯನವರ ಕೊಡುಗೆ ಕನ್ನಡ ಸಂಶೋಧನ ಕ್ಷೇತ್ರದಲ್ಲಿ ಶಾಶ್ವತವಾಗಿ ನಿಲ್ಲುವಂತಹುದು. ಈ ಸಂಸ್ಥೆ ಅವರ ಆಶಯಗಳಿಗೆ ಅನುಗುಣವಾಗಿ ಕಾಲಕಾಲಕ್ಕೆ ಸೂಕ್ತ ಯೋಜನೆಗಳನ್ನು ರೂಪಿಸಿಕೊಂಡು ಸಂಸ್ಥೆಯನ್ನು ಸದಾ ಕಾಲ ಚಟುವಟಿಕೆಯಿಂದ ಇಟ್ಟುಕೊಳ್ಳಬೇಕಾದ ಅಗತ್ಯವಿದೆ.

ಈ ಗ್ರಂಥ ಇಂತಹ ಯೋಜನೆಯೊಂದರ ಫಲವಾಗಿ ಹೊರಬರುತ್ತಿರುವುದು ಯಾವುದೇ ಸಂಶೋಧಕ ಅಭಿನಂದಿಸಬೇಕಾದ ಕಾರ್ಯ. ನಾ. ಗೀತಾಚಾರ್ಯರು ಮೂಲತಃ ಸಂಶೋಧಕರು. ನಾಡು-ನುಡಿ ಹೋರಾಟದಲ್ಲಿ ಇಂದಿಗೂ ಕೂಡ ಸಕ್ರಿಯವಾಗಿ ಪಾಲ್ಗೊಳ್ಳುತ್ತಿರುವ ಇವರು ಕವಿಯೂ ಹೌದು. ಸೃಜನಶೀಲತೆ ಮತ್ತು ಪಾಂಡಿತ್ಯ ಎರಡರಲ್ಲೂ ತಮ್ಮ ಛಾಪನ್ನು ಒತ್ತಿರುವ ಸಹೃದಯಿ. ನಿಷ್ಠಾವಂತ ಅಧ್ಯಾಪಕ, ಕಾರ್ಯಕರ್ತ, ಸಂಘಟಕ. ಎಂ. ವಿ. ಸೀತಾರಾಮಯ್ಯನವರ ಮಾನಸಪುತ್ರರಾಗಿ ಪ್ರತಿಷ್ಠಾನದಲ್ಲಿ ಪ್ರಾರಂಭದಿಂದಲೂ ಸ್ವಯಂಸೇವಕರಾಗಿ, ಗೌರವ ಕಾರ್ಯದರ್ಶಿಯಾಗಿ ದುಡಿಯುತ್ತಿರುವ ಶ್ರದ್ಧಾಳು. ಪ್ರತಿದಿನ ತಪ್ಪದೆ ಕಚೇರಿಯನ್ನು ನಿರ್ವಹಿಸುತ್ತ ಇದರಿಂದ ತಮ್ಮ ಬರವಣಿಗೆ, ಸಂಶೋಧನೆಗೆ ತೊಡಕಾದರೂ ಚಿಂತಿಸದೆ ಸಂಸ್ಥೆಯನ್ನು ಕಟ್ಟಿಬೆಳೆಸುತ್ತಿರುವ ವ್ಯಕ್ತಿ. ಇದೂ ಸಹ ಒಂದು ಸಾಧನೆಯೇ. ಇವರ ಪ್ರಯತ್ನದ ಫಲವಾಗಿ ೧೯೯೬ರಲ್ಲಿ ನಡೆದಿದ್ದ ಉಪನ್ಯಾಸಗಳು ಇಂದು ಪುಸ್ತಕ ರೂಪದಲ್ಲಿ ಬೆಳಕು ಕಾಣುವಂತಾಗಿದೆ.

ಅಂತರಶಿಸ್ತೀಯ ಸಂಶೋಧನೆ ಮಾಡಬಯಸುವ ವಿದ್ಯಾರ್ಥಿಗೆ ಇದು ಉತ್ತಮ ಪ್ರವೇಶಿಕೆಯನ್ನು ಮತ್ತು ತನಗೆ ಅಗತ್ಯವಿರುವ ಇನ್ನೊಂದು ಶಿಸ್ತಿನ ಬಗ್ಗೆ ಸ್ವಲ್ಪಮಟ್ಟಿದ ಪರಿಚಯವನ್ನೂ ಮಾಡಿಕೊಡಬಲ್ಲದು. ಡಾ॥ ಎಂ. ಚಿದಾನಂದಮೂರ್ತಿಯವರು ಬರೆದಿರುವ ಪ್ರವೇಶಿಕೆ ಈ ಪುಸ್ತಕದ ಮಹತ್ವವನ್ನು ಎತ್ತಿಹಿಡಿಯುತ್ತದೆ. ವಿವಿಧ ಕ್ಷೇತ್ರಗಳಲ್ಲಿ ಗಣ್ಯರಾಗಿರುವ ಡಾ॥ ಶ್ರೀನಿವಾಸ ಹಾವನೂರ (ಸಾಹಿತ್ಯ), ಡಾ॥ ಸೂರ್ಯನಾಥಕಾಮತ್ (ಇತಿಹಾಸ), ಡಾ॥ ಆರ್. ಎಲ್. ಎಂ. ಪಾಟೀಲ (ರಾಜ್ಯಶಾಸ್ತ್ರ), ಪ್ರೊ॥ ಅಬ್ದುಲ್ ಅಜೀಜ್ (ಅರ್ಥಶಾಸ್ತ್ರ) ಪ್ರೊ॥ ಎಚ್. ಎಂ. ಮರುಳಸಿದ್ದಯ್ಯ (ಸಮಾಜಶಾಸ್ತ್ರ) ಅವರುಗಳ ಲೇಖನದೊಂದಿಗೆ ಸಂಪಾದಕರೇ ಭಾಷಾ ವಿಜ್ಞಾನದ ಬಗೆಗೂ ಸಂಶೋಧನೆಯ ಪರಿಕಲ್ಪನೆಯ ಬಗೆಗೂ (ಪೀಠಿಕೆ) ಮಾಹಿತಿ ಸೇರಿಸಿ ಪುಸ್ತಕವನ್ನು ಉಪಯುಕ್ತವಾಗಿಸಿದ್ದಾರೆ. ಸಂಶೋಧನೆಯ ವಿದ್ಯಾರ್ಥಿಗಳು ತಪ್ಪದೆ ಗಮನಿಸಬೇಕಾದ ಗ್ರಂಥವಾಗಿದೆ ಈ ಪುಸ್ತಕ.

– ಕೆ. ಬಸವರಾಜಪ್ಪ

---

## ಹೆಣ್ಣಿನ ಸ್ಥಾನಮಾನ : ಒಂದು ಪುನರವಲೋಕನ*

ಜಯಮ್ಮ ಕರಿಯಣ್ಣ ಅವರ ಈ ಕೃತಿಯಲ್ಲಿ ಸ್ತ್ರೀಪರ ಚಿಂತನೆ, ಕನ್ನಡ ಭಾಷೆ, ಸಂಸ್ಕೃತಿ, ಇತಿಹಾಸ, ವ್ಯಕ್ತಿ-ಸಂಸ್ಥೆ-ಸ್ಥಳಗಳ ಪರಿಚಯ, ವಿಮರ್ಶೆ ಹೀಗೆ ವಿವಿಧ ಜ್ಞಾನ ಶಿಸ್ತುಗಳ ೨೯ ಲೇಖನಗಳಿವೆ. ಸಾಹಿತ್ಯ ಓದಲು ಪ್ರಾರಂಭಿಸಿದ್ದು ೪೫ನೆಯ ಪ್ರಾಯದಲ್ಲಿ ಎಂದು ಲೇಖಕಿ ತಿಳಿಸುವುದರ ಹಿನ್ನೆಲೆಯಲ್ಲಿ ಈ ಕೃತಿಯು ಗಮನಾರ್ಹ ಪ್ರಯತ್ನ

* ಲೇ : ಜಯಮ್ಮ ಕರಿಯಣ್ಣ, ಪ್ರ : ಜಯ ಪ್ರಕಾಶನ, ವಿಜಯನಗರ, 2ನೆಯ ಹಂತ, ಬೆಂಗಳೂರು-40, 2000, ಪುಟ : XII + 138, ಬೆಲೆ : ರೂ. 80.

ಎನ್ನಿಸುತ್ತದೆ. ಮಾಹಿತಿ ಸಂಗ್ರಹದಲ್ಲಿ ಕೃತಿಕಾರರು ವಹಿಸಿರುವ ಶ್ರಮ ಅಪಾರ. ಸಾಹಿತ್ಯಕ ದೃಷ್ಟಿಯಿಂದ ಇಲ್ಲಿ ಹಲವು ಕೊರತೆಗಳಿವೆ. ಆದರೆ, ಇಂತಹ ಲೇಖನಗಳು ಒಂದು ಪರಿಸರ, ವರ್ಗದ ಪರಿಸ್ಥಿತಿಯನ್ನು ಅರಿಯಲು ನೆರವಾಗುವುದಲ್ಲದೆ, ಒಂದು ಕಾಲಘಟ್ಟದ ಸಾಮಾಜಿಕ ವಿವರಗಳನ್ನು ಗ್ರಹಿಸಲು ಸಹಾಯಕವಾಗುತ್ತವೆ.

'ಒಕ್ಕಲಿಗರು- ಧಾರ್ಮಿಕ ಆಚರಣೆ ಮತ್ತು ಸಂಪ್ರದಾಯಗಳು', 'ತುಮಕೂರು ಜಿಲ್ಲೆಯ ಒಕ್ಕಲಿಗ ಮಹಿಳೆಯರು', 'ಯಲಹಂಕ ಪ್ರಭುಗಳ ಕಾಲದ ಸ್ತ್ರೀ ಸಮಾಜ' ಮುಂತಾದ ಕೆಲವು ಲೇಖನಗಳು ಒಕ್ಕಲಿಗ ಜನಾಂಗದ ಸಂಸ್ಕೃತಿ-ಸಂಪ್ರದಾಯಗಳನ್ನು ಪರಿಚಯಿಸುವಲ್ಲಿ ಯಶಸ್ವಿ ಆಗಿವೆ. 'ಹೆಣ್ಣಿನ ಸ್ಥಾನಮಾನ: ಒಂದು ಪುನರವಲೋಕನ', 'ಭಾರತೀಯ ಮಹಿಳೆ...', ಸಾಹಿತ್ಯ ಮತ್ತು ಮಹಿಳೆ 'ಶೋಷಣೆ...'ಗಳಂತಹ ಮಹಿಳಾ ಸಮಸ್ಯೆಯನ್ನು ಪ್ರತಿ ಬಿಂಬಿಸುವ ಲೇಖನಗಳಲ್ಲಿ ಅಂಕಿ-ಅಂಶಗಳನ್ನು ನೀಡಿದ್ದಾರೆ. ವೇದಗಳಿಂದ ಹಿಡಿದು ಇಂದಿನವರೆಗಿನ ಸಾಹಿತ್ಯದ ಹಲವು ಸಂಗತಿಗಳನ್ನು ಉದ್ಧರಿಸಿದ್ದಾರೆ. ಹೆಣ್ಣನ್ನು ಶೋಷಿಸುವ ವ್ಯವಸ್ಥೆಯ ವಿರುದ್ಧ ಆಕ್ರೋಶ ವ್ಯಕ್ತಪಡಿಸುತ್ತಲೇ, ಹೆಣ್ಣು ಅಧೀರಳಾಗದೆ ಬದುಕಿನಲ್ಲಿ ದೊರೆಯುವ ಎಲ್ಲ ಅವಕಾಶಗಳನ್ನು ಬಳಸಿಕೊಂಡು ಸ್ವಾಭಿಮಾನದಿಂದ ಬದುಕಬೇಕೆಂಬುದನ್ನು ಪ್ರತಿಪಾದಿಸಿ ಸಕಾರಾತ್ಮಕ ನಿಲುವು ತಳೆದಿರುವುದು ಅಭಿನಂದನಾರ್ಹ. ಎಲ್ಲ ಲೇಖನಗಳಲ್ಲೂ ವೇದ, ಪುರಾಣಗಳಲ್ಲಿ ಸ್ತ್ರೀ ಬಗ್ಗೆ ಇರುವ ಅರ್ಥಗಳ ಬಗ್ಗೆ ವಿವರ ನೀಡುವುದು ಹಾಗೂ ವಿಷಯಗಳ ಪುನುರುಕ್ತಿ ಹಾಗೂ ಶಿಥಿಲ ವಾಕ್ಯ ರಚನೆಗಳಿಂದಾಗಿ ಉದ್ದೇಶಿತ ಪ್ರಭಾವ ಬೀರುವುದಿಲ್ಲ.

'ಮಾತು ಮಾನವನ ಅದ್ಭುತ ಸೃಷ್ಟಿ. ಹಾಗಾಗಿ ಪ್ರತಿ ಮಾನವನಿಗೂ ತನ್ನ ಭಾಷೆಯ ಬಗ್ಗೆ ಅಭಿಮಾನವಿರುತ್ತದೆ. ಇದಕ್ಕೆ ಅಪವಾದವೆಂದರೆ ಕನ್ನಡಿಗರು' (ಪು ೧೦) - ಕನ್ನಡ ಪರ ಹೋರಾಟಗಳಲ್ಲಿ ನೇರವಾಗಿ ಪಾಲ್ಗೊಂಡಿರುವ ಲೇಖಕಿ ಕನ್ನಡ ಸಮಸ್ಯೆಗಳ ಬಗ್ಗೆ ಇಂತಹ ಹಲವು ಉತ್ತಮ ವಾಕ್ಯಗಳನ್ನು ಹೇಳುತ್ತಾರೆ. ನಾಡು-ನುಡಿಯ ಪರ ಬರೆದಿರುವ ಲೇಖನಗಳಲ್ಲಿ ಕನ್ನಡ ಕಾಳಜಿ, ಕನ್ನಡಿಗರು ಜಾಗೃತರಾಗುವ ಅಗತ್ಯತೆ ಬಗ್ಗೆ ಒತ್ತಿ ಹೇಳಿದ್ದಾರೆ. ಶಂಬಾ ಜೋಶಿಯವರಂತಹ ಹಿರಿಯರ ಸಂಪರ್ಕವನ್ನು ಚೇತೋಹಾರಿಯಾಗಿ ಚಿತ್ರಿಸಿದ್ದಾರೆ. ಸಂಸ್ಥೆ, ಸಾಂಸ್ಕೃತಿಕ ಕೇಂದ್ರಗಳನ್ನು ಪರಿಚಯಿಸುವಾಗ ಅಪಾರ ಮಾಹಿತಿ ನೀಡುತ್ತಾರೆ.

ಜಯಮ್ಮ ಕರಿಯಣ್ಣ ಅವರ ಈ ಕೃತಿಯನ್ನು ಓದಿ ಕೆಳಗಿಟ್ಟಾಗ ಇವರ ಉತ್ಸಾಹ, ಆಸಕ್ತಿ, ಶ್ರಮವರಿಯದ ದುಡಿಮೆ, ವಿಷಯ ಬಾಹುಳ್ಯಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸದೆ ಇರಲು ಸಾಧ್ಯವೇ ಇಲ್ಲ. ಹಾಗೇ ಲೇಖಕರು ತಾವು ಬರೆದ ಲೇಖನಗಳನ್ನು ಪರಿಷ್ಕರಿಸಿ ಒಪ್ಪಮಾಡದೆ ಪ್ರಕಟಿಸಿರುವುದು ಕಿರಿಕಿರಿ ಉಂಟುಮಾಡುತ್ತವೆ. ಜಯಮ್ಮನವರು ಮುಂದೆ ಪುಸ್ತಕ ಪ್ರಕಟಿಸುವಾಗ ಆತುರ ತೋರದೆ, ಲೇಖನಗಳನ್ನು ತಿದ್ದಿ ಪುನಾರಚಿಸಿದರೆ ಕನ್ನಡ ಓದುಗರಿಗೆ ಉತ್ತಮ ಕೊಡುಗೆ ಆಗುತ್ತದೆ. ಒಟ್ಟಿನಲ್ಲಿ 'ಮಹಿಳೆ-ಕನ್ನಡ'

ತಿರಸ್ಕಾರಕ್ಕೊಳಗಾಗಿರುವ ಬಗ್ಗೆ ಅಂತಃಕರಣದಿಂದ ಬರೆದಿರುವ ಜಯಮ್ಮ ಕರಿಯಣ್ಣ ಅಭಿನಂದನಾರ್ಹರು. ಅವರಿಂದ ಇನ್ನೂ ಹೆಚ್ಚು ಕನ್ನಡ ಕೆಲಸ ಆಗಲಿ ಎಂದು ಹಾರೈಸುತ್ತೇನೆ.

**- ರತ್ನ ರಾಮನಗರ**

---

## ಮೂವರು ಶ್ರೀವೈಷ್ಣವ ಹರಿದಾಸರ ಕೀರ್ತನೆಗಳು*

ಶ್ರೀವೈಷ್ಣವ ಹರಿದಾಸರು, ಅವರ ರಚನೆಗಳನ್ನು ಕುರಿತು ಸಂಶೋಧನೆ ನಡೆಸುತ್ತಿರುವ ತರುಣ ಸಂಶೋಧಕರಾದ ಶ್ರೀ ನಾ. ಗೀತಾಚಾರ್ಯರು ಈ ಪುಸ್ತಕವನ್ನು ಸಂಪಾದಿಸಿದ್ದಾರೆ. ಮಧ್ವ ಮತ ಪರಂಪರೆ - ವೈಷ್ಣವ ಧರ್ಮದ ಅನುಸರಣೆ - ಇವೇ ಪ್ರಧಾನವೆನಿಸಿದ್ದ ದಾಸರನೇಕರು ನಮಗೆ ತಿಳಿಯಬಂದಂತೆ, ಶ್ರೀವೈಷ್ಣವ ಹರಿದಾಸರ ಬಗ್ಗೆ ಇನ್ನೂ ಹೆಚ್ಚು ಮಾಹಿತಿ ದೊರತಂತಿಲ್ಲ. ಈ ದಿಸೆಯಲ್ಲಿ ಶ್ರೀ ಗೀತಾಚಾರ್ಯರ ಮೌಲಿಕ ಸಂಶೋಧನೆ ಪ್ರಶಂಸನೀಯ ಆಗುತ್ತದೆ.

ಕನ್ನಡ ನಾಡು-ನುಡಿ-ಸಂಸ್ಕೃತಿಗಳಿಗೆ ತನ್ನದೆ ಆದ ವಿಶಿಷ್ಟ ಕೀರ್ತನಗಳ ಕೊಡುಗೆ ನೀಡಿರುವ ಹರಿದಾಸ ಸಾಹಿತ್ಯ ಪ್ರಕಾರದಲ್ಲಿ ಕಾಣಬರುವಂಥ ವಿಶಿಷ್ಟವೆನಿಸುವ ಹೆಸರು, [1]ಬೇಲೂರಿನ (ವೇಲಾಪುರಿ) ಶ್ರೀ ವೈಕುಂಠದಾಸರದು. ಶ್ರೀವೈಕುಂಠದಾಸರು ಬೇಲೂರಿನಲ್ಲಿಯೇ (ಹಿಂದಿನ ವೇಲಾಪುರಿ, ಹಾಸನ ಜಿಲ್ಲೆ) ತಮ್ಮ ಜೀವಿತವನ್ನೆಲ್ಲ ಕಳೆದರು. ಸೌಮ್ಯನಾಯಕೀ ಸಮೇತನಾದ ಶ್ರೀ ಚೆನ್ನಕೇಶವನ ಪಾದಪದ್ಮಾರಾಧಕರಾಗಿ ಪ್ರಪತ್ತಿ ಮಾರ್ಗದಲ್ಲಿ ನಡೆದು, ಹಾಡಿದರು. ಆದರೆ, ದುರದೃಷ್ಟವಶಾತ್, ವೈಕುಂಠದಾಸರ ರಚನೆಗಳು ಲಭ್ಯವಿಲ್ಲ, ಕೆಲವನ್ನುಳಿದು. ದಾಸಸಾಹಿತ್ಯದ ಸುವರ್ಣಯುಗ ಕ್ರಿ. ಶ. ೧೪೦೦ ರಿಂದ ೧೬೦೭ರ ತನಕ ಎಂದರೆ ಉತ್ಪ್ರೇಕ್ಷೆಯಾಗದು. ಮಠಾಧಿಪತಿಗಳಾದರೂ ಹರಿದಾಸ ದೀಕ್ಷೆ ವಹಿಸಿ ದಾಸರನ್ನು ಸಂಘಟಿಸಿ ಬೆಳೆಸಿದ ಮುಳಬಾಗಿಲಿನ ಶ್ರೀ ಶ್ರೀಪಾದರಾಜರು (ಕ್ರಿ. ಶ. ೧೪೦೪-೧೫೦೨), ಶ್ರೀವ್ಯಾಸರಾಯರು (ಕ್ರಿ. ಶ. ೧೪೪೭-೧೫೩೯), ಸೋದೆಯ ಶ್ರೀ ವಾದಿರಾಜರು (೧೪೮೦-೧೬೦೦), ಪುರಂದರದಾಸರು (೧೪೮೪-೧೫೬೪), ಕನಕದಾಸರು (೧೫೦೯-೧೬೦೭) ಹೀಗೆ ಈ ಯುಗದಲ್ಲಿ ಬದುಕಿದ್ದ ಪುಣ್ಯಾತ್ಮ ಶ್ರೀವೈಕುಂಠದಾಸರು ಆಚಾರ್ಯ ರಾಮಾನುಜರ ಪ್ರಪತ್ತಿ ಮಾರ್ಗ ಅನುಸರಿಸುತ್ತ ಅಪರೋಕ್ಷಾನುಭೂತಿ ಪಡೆದವರಾಗಿ, ಇಹದ ಸಾಂಸಾರಿಕ ಬದುಕಿಗನುಗುಣವಾಗಿ "ಇದ್ದು ಸಾಯುವ ಮಕ್ಕಳ ಬೇಡದೆ" ಚಿರಂತನ ಚಿನ್ಮಯನಾದ ಚನ್ನಕೇಶವನನ್ನೇ ಮಗುವಾಗಿ ತನ್ನಂಕಗಳಲ್ಲಿ ಆಡಿಸುತ್ತಾ, ಮಡದಿ ಸೌಮ್ಯನಾಯಕಿ,

---

* ಸಂ : ನಾ. ಗೀತಾಚಾರ್ಯ, ಪ್ರ : ನಾರಾಯಣಶರ್ಮ ಸಂಸ್ಕೃತಿ ಕೇಂದ್ರ, ದೊಡ್ಡಪೇಟೆ, ಬೆಂಗಳೂರು ೧೯೯೯.

[1] ಈ ಬಗ್ಗೆ ಬೇಲೂರು ಕೇಶವದಾಸರು ಬರೆದಿದ್ದಾರೆ ಹಾಗೂ ಶ್ರೀವೈಕುಂಠದಾಸರ ಕೃತಿ ಲಭ್ಯಕ್ಕಾಗಿ ಹೆಚ್ಚಿನ ಸಂಶೋಧನದ ಅಗತ್ಯವಿದೆ.

ಅಪ್ರಮೇಯನ ರೂಪಗುಣವಿಶೇಷಗಳ ದರ್ಶನ ಮಾಡಿಸಿದ ಭಕ್ತಶ್ರೇಷ್ಠರೆನ್ನಿಸಿಕೊಂಡರು. ಇದು ಪ್ರಾಸಂಗಿಕ ರಚನೆಗಳ ಮೂಲಕ ಕೂಡ ತಿಳಿದುಬರುವ ಸಂಗತಿ.

ಸಮಾಜೋ-ಧಾರ್ಮಿಕ ಸುಧಾರಣೆಯುಂಟು ಮಾಡಿದ ಸೋದೆಯ ಶ್ರೀ ವಾದಿರಾಜರು, ತಮ್ಮ ಪರ್ಯಟನದಲ್ಲಿ ಬೇಲೂರಿನಲ್ಲಿದ್ದು, ಶ್ರೀವೈಕುಂಠದಾಸರನ್ನು ಕಂಡು, ಹಾಡಿದ ಕೀರ್ತನೆಗಳನೇಕ ದೊರೆತಿವೆ. ಕನಕದಾಸರೂ ವೈಕುಂಠದಾಸರನ್ನು ಕೊಂಡಾಡಿದ್ದಾರೆ.

ಮಧ್ವ ಸಿದ್ಧಾಂತದ ಪದ್ಧತಿಯನ್ನು ಅನುಸರಿಸದಿದ್ದರೂ, ಹರಿಸರ್ವೋತ್ತಮತ್ವದ ಪ್ರಸಾರ - ಅದೇ ದೀಕ್ಷೆ - ವೀರವೈಷ್ಣವ ನಿಷ್ಠೆಯನ್ನು ಮೈಗೂಡಿಸಿಕೊಂಡಿದ್ದವರು ಶ್ರೀ ವೈಕುಂಠದಾಸರು. ಬೇಲೂರು, ಸುತ್ತಮುತ್ತಲಿನ ಪರಿಸರ - ಎಲ್ಲೆಡೆ ಅನ್ವೇಷಣೆ ನಡೆಸಿದಲ್ಲಿ ಗೀತಾಚಾರ್ಯರಂಥ ಸಂಶೋಧಕರ ಕಣ್ಣಿಗೆ ಇನ್ನೂ ಕೀರ್ತನ ಸಂಪದ, ಹಸ್ತ ಪ್ರತಿ ದೊರೆವ ಸಾಧ್ಯತೆ ಇದೆ.

ಮಧ್ವಸಿದ್ಧಾಂತದ ಅನುಸಾರ ಹರಿಸರ್ವೋತ್ತಮ, ವಾಯುಜೀವೋತ್ತಮರು ಭಕ್ತಿಯಲ್ಲಿ "ಮಹಾತ್ಮಜ್ಞಾನ, ಸುದೃಢವಾದ ಪ್ರೇಮಯುತ ಸ್ನೇಹ, ವೇದಜ್ಞಾನ, ತಾರತಮ್ಯ ಪದ್ಧತಿ, ಜೀವೇಶಭೇದ ತತ್ವ ಹೀಗೆ ನಿರೂಪಣೆಯೇ ಇದೆ. ರಾಮಾನುಜಾಚಾರ್ಯರ ಪ್ರಪತ್ತಿ, ಅತ್ಯಂತ ಸರಳ ಆದದ್ದು. ಅಖಿಲಕಲ್ಯಾಣಗುಣಗಣ ಪರಿಪೂರ್ಣ, ಅನಂತ, ಅದ್ವಿತೀಯ ಇವೆಲ್ಲ ಮಧ್ವ ಸಿದ್ಧಾಂತದ ಸರಣಿಯೇ ಇದ್ದು, ಮುಕ್ತಿ-ಸಾಯುಜ್ಯ-ಶರಣಾಗತಿಗಳಿಗೇ ಪ್ರಾಧಾನ್ಯ. ಇಲ್ಲಿ ಮಾನವ ನಿರ್ಮಿತ ಜಾತಿ ಮತ ಸುತರಾಂ ಗೌಣ. ಸ್ವಂತ ಆರ್ಜನೆ-ತಪಃಸಾಧನೆ-ಆತ್ಮೋನ್ನತಿ, ದೈವಸಾಕ್ಷಾತ್ಕಾರಕ್ಕೇ ಪ್ರಧಾನತೆ ಎಂದರೆ ಅತಿಶಯೋಕ್ತಿಯಲ್ಲ. ತಿರುಪಾಣ, ತಿರುಮಂಗೈಯಂಥ ಆಳ್ವಾರರಾಗಲಿ, ಧನುರ್ದಾಸನಂತಹ ಭಕ್ತನಾಗಲಿ, ಹೇರಳವಾಗಿದ್ದು "ನಂಬಿದವರಿಗೆ ತನ್ನನ್ನೇ ತೆತ್ತುಕೊಂಡಿಹ" ಶ್ರೀ ಕೃಷ್ಣನಿಗೆ ಜಾತಿಯ ಸೋಂಕು ತಟ್ಟುವುದೇ! ಪುರಂದರ-ಕನಕರಿಗೇ ಆಗಲಿ, ಇತ್ತೀಚಿನ ಹರಿದಾಸರಾಗಿದ್ದ ಬಡೇಸಾಹೇಬರಿಗಾಗಲಿ, ಜಾತಿಯ ಗೋಡೆಯೇನು ಮಾಡೀತು? ಇಲ್ಲಿ ಬರುವುದು, ತನ್ನ ಸಾಧನೆಯಿಂದ ತನ್ನನ್ನು ತಾನು ಉನ್ನತಿಗೇರಿಸಿಕೊಂಬುವ ಆತ್ಮದ ಆಧ್ಯಾತ್ಮಿಕ ಪಥ. "ಕೂಗಳತೆಗೆ ಕೊಂಚ ದೂರವೋ ಹರಿಯಪುರ" ಎಂಬುವ ಹರಿದಾಸತನ! "ಮಾತಿನಲಿ ಹರಿದಾಸರು ನೀತಿಯಲ್ಲಿ ಪ್ರಭುದಾಸತನ ಸುತರಾಂ ಅಲ್ಲ! ಈ ಹಿನ್ನೆಲೆಯಲ್ಲಿ ಪ್ರಕೃತ ಗಮನಿಸುವಂಥದು ಮೂವರು ಶ್ರೀವೈಷ್ಣವ ಹರಿದಾಸರ ಕೃತಿ ಸಂಪುಟ ಕುರಿತಂತೆ.

ಈ ಗ್ರಂಥದ ಶ್ರೀವೈಷ್ಣವ ಹರಿದಾಸರಲ್ಲಿ ಒಬ್ಬರಾದ ನಾರಾಯಣಶರ್ಮರು, ಗೀತಾಚಾರ್ಯರ ತಂದೆಯೇ. ಇದರಿಂದ ಸಾಮಿಪ್ಯ ಕೂಡ ಕೀರ್ತನ ಸಂಪಾದನಕ್ಕೆ ಸ್ಪಷ್ಟೀಕರಣದ ಇಂಬುಗೊಡುತ್ತದೆ. ಇನ್ನೊಬ್ಬರಾದ ರಂಗದಾಸರು (೧೮೩೦-೧೯೫೦), ತುಮಕೂರು ಸಮೀಪದ ಮಾದಗೋಸಹಳ್ಳಿಯವರು.

ಇವರ ಅಂಕಿತ "ಶ್ರೀಗುರುರಂಗೇಶ", "ಮಹದೇವಪುರವಾಸ" ಎಂಬುದಾಗಿ ಮಹಾದೇವ-ಮಾದೇವ-ಮಾದೇವನ ಹಳ್ಳಿ-ಮಾಯಗೊಂಡನ ಹಳ್ಳಿ[2]- ಅಂದರೆ, ಮಾಯೆಯಗೊಂಡವನು-ಮಾಯೆಯನ್ನು ಜಯಿಸಿದಾತ - ಶ್ರೀಹರಿ (ಕಂತುಪಿತ) ಇದ್ದು ಅನಂತರ ಮಾದಗೊಂಡನಹಳ್ಳಿ ಆಯಿತೆ? ಜನರ ಬಾಯಲ್ಲಿ ಪರಂಪರಾನುಗತ ಸ್ಥಳನಾಮ ಪಲ್ಲಟ ಆಗಿರಬಹುದೆ? ಎನ್ನಿಸುತ್ತಾನೆ.

ಶ್ರೀರಂಗದಾಸರ ೧೬ ಕೀರ್ತನಗಳಲ್ಲಿ (ಲಭ್ಯ!) ಶ್ರೀವೈಷ್ಣವ ಮತ-ಧರ್ಮ ಹಾಸುಹೊಕ್ಕಾಗಿ ಪ್ರತಿಪಾದಿತ ಆಗಿದೆ.

"ಎಷ್ಟು ಪ್ರೇಮಿಯೋ
ಗುರುವು ಎಷ್ಟು ಪ್ರೇಮಿಯೋ",
"ಬಾರೋ ಬಾರೋ ರಂಗ ಬಾರೋ ನಮ್ಮನಿಗೆ",
"ಬೇಡಿಕೊಂಬುವೆನು ನಿಮ್ಮ!
ರಾಮಾನುಜರೆ - ಬೇಡಿ ಕೊಂಬುವೆನು ನಿಮ್ಮ" ಎಂಬುವ ಕೀರ್ತನೆಗಳು,

ಪ್ರಸಂಗವೊಂದನ್ನು ಉದ್ಧರಿಸುವ "ಸೃಷ್ಟೀಶ ಕೃಪೆ ತೋರಿದ" ಎಂಬುವ ಕೀರ್ತನೆಯ ಸಾಲುಗಳು, - ಇಲ್ಲೆಲ್ಲ ದಾಸರ ಶ್ರೀ ಹರಿಭಕ್ತಿಯ ಭಾವನೆಯ ಸುಮ ಅರಳಿದೆ.

ಇನ್ನೊಬ್ಬರಾದ ಶಾಮಶರ್ಮರ ಕೃತಿಗಳು, ಸಂಸ್ಕೃತದ ಸುಪ್ರಸಿದ್ಧ ಹಾಗೂ ಜನಜನಿತ ನಾಂದೀಶ್ಲೋಕಗಳ ಅನುವಾದ ಸರಳವಾಗಿ ಮೂಡಿಬಂದಿದೆ.

"ಶ್ರೀನಾಥಜ್ಞಾ ಪ್ರಕಾರ ನಡೆಯುವ ಸೂತ್ರವತೀ ರಮಣ
ಮಾನಿತ ಪ್ರಧಾನ ಮಂತ್ರೀ ಪೂಜಿಪೆ ವಿಘ್ನೇಶಾ ನಮಿಪೆ" ॥ಪ॥
ಬಿಳಿಯುಡೆ ತುಂಬಿದ ತಿಂಗಳ ಬೆಳಗಾ
ತೊಳಗುವ ನಾಲಕು ತೋಳುಗಳ
ಒಲಿದಿಹ ನಗೆಮೊಗ ವಿಷ್ಣು ನೆನೆವೆ
ಸುಲಭದಿ ಕಾರ್ಯವ ಗೈಸುವನೇ ॥೧॥
ಎಂಬುವದು ಶುಕ್ಲಾಂಬರಧರಂ ವಿಷ್ಣುಂ । ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ಸರ್ವ । ವಿಘ್ನೋಪಶಾಂತಯೇ ॥
ಎಂಬುವ ಶ್ಲೋಕ (ಸಂಸ್ಕೃತ)ದ ಅನುವಾದವಾಗಿದೆ.

ಅದೇ ರೀತಿಯಲ್ಲಿ,

---

[2] 'ತಲಕಾಡುಗೊಂಡ' ಎಂಬುದು ವಿಷ್ಣುವರ್ಧನ ತಲಕಾಡು ಪಾಳೆಯ ಜಯಿಸಿದಾಗ ಪಡೆದ ಬಿರುದು. ಮಾಯಗೊಂಡ-ಮಾಯೆಯನ್ನೇ ಜಯಿಸಿದಾತ ಎಂದಾಗಬಹುದಲ್ಲವೇ?

"ಯಸ್ಯ ದ್ವಿರದ ವಕ್ತ್ರಾದ್ಯಾಃ । ಪಾರಿಷದ್ಯಾಃ ಪರಶ್ಶತಂ ।
ವಿಘ್ನಂ ನಿಘ್ನಂತಿ ಸತತಂ ನಿಷ್ವಕ್ಸೇನಂ ತಮಾಶ್ರಯೇ ॥
"ದಿವ್ಯಾಕಾರಂ ಸರೋಜಾಕ್ಷಂ । ಶಂಖಚಕ್ರ ಗದಾಧರಂ ॥
ಮುಕುಂದ ದ್ವಾರ ನಿಲಯಂ । ವಿಶ್ವಕ್ಸೇನಂ ಉಪಾಸ್ಮಹೇ ॥ ಎಂಬುವ ಸಾಲುಗಳು
ದ್ವಿರಿದ ವಕ್ತ್ರಾ ಮೊದಲಾಗಿರುವ
ಪರಿಜನ ನೂರ್ವರಿಂದೊಪ್ಪಿರುವ್ಯೆ
ಪರಿಪರಿ ತಡೆಗಳ ತರಿದೋಡಿಸುತ
ಪೊರೆವಿಶ್ವಕ್ಸೇನಾಶ್ರಿತ ನಾನು । ॥೨॥ ಎಂಬುದಾಗಿಯೂ
"ಬಿಡುಗಣ್ಣರ ಬೆಡಗಿನ ಒಡಲುಳ್ಳ
ಕುಡಿನೋಟದ ತಾವರೆಗಣ್ಣ
ಪಿಡಿದಿಹ ಶಂಖ-ಚಕ್ರ-ಗದಾಯುಧ

ಒಡೆಯ ಮುಕುಂದ ದ್ವಾರ ನಿಲಯನೇ" ॥೩॥ ಎಂದು ಸರಳ, ಸುಂದರ ರೀತಿಯಲ್ಲಿ ಕನ್ನಡೀಕರಣ ಮಾಡಿದ್ದಾರೆ ಶ್ರೀ ಶಾಮಶರ್ಮರು! ಇದರ ಜತೆಗೆ ಶ್ರೀವೈಷ್ಣವ ಸಿದ್ಧಾಂತ ಅರ್ಚಾಮೂರ್ತಿ ವೈಭವ, ಎಲ್ಲವೂ "ಹೆಜ್ಜಾಜಿ ಚೆನ್ನಕೇಶವ", "ಜಾಜೀಶ" ಅಂಕಿತಗಳಲ್ಲಿ ಭಕ್ತ್ಯಾತ್ಮಕ, ಭಾವಗೀತವಾಗಿ ಮೂಡಿಬಂದಿವೆ. ಪುರಂದರದಾಸರ "ರಾಮಮಂತ್ರವ ಜಪಿಸೋ" ಎಂಬುದರ ಪ್ರತೀಕದಂತಿದೆ "ಮೂಲಮಂತ್ರವ ಜಪಿಸೋ" ಎಂಬ ಸಾಲುಗಳು. ನವವಿಧ ಭಕ್ತಿ ಪ್ರತೀಕವಾದ ಕೃತಿಯೂ ಇದೆ. ಶ್ರೀರಂಗಮಂಗಳಮಣಿ ಕರುಣಾನಿವಾಸಂ ಶ್ಲೋಕವನ್ನು ಸುಂದರವಾದ ಕೀರ್ತನೆಯಾಗಿಸಿ ಶಾಮಶರ್ಮರು ಹಾಡಿದ್ದಾರೆ.

ಇನ್ನು ನಾರಾಯಣಶರ್ಮರ ಕೀರ್ತನೆಗಳು ಪುರಂದರದಾಸರ "ನಾರಾಯಣ ಎಂಬ ನಾಮದ ಬೀಜವ ಬಿತ್ತಿದ ಧರೆಯೊಳಗೆ" ಎಂಬುವ ಕೀರ್ತನೆಗಳು ಸಾಲನ್ನು ಹೋಲುತ್ತವೆ, "ಓಂ ನಮೋ ನಾರಾಯಣ, ಓಂ ನಮೋ ನಾರಾಯಣ । ಎನ್ನುವ ನಾಮದ ಬೀಜವ ರಾಮಾನುಜ ಬೆಳೆದ ಧರೆಯೊಳಗೆ" ಎಂಬುವ ಸಾಲುಗಳು. ಆದರೆ ಶರ್ಮರ ಕವಿಹೃದಯ ಭಕ್ತಿಯೊಡನೆ ಸಮ್ಮೇಳಿಸಿರುವುದು ವೇದ್ಯವಾಗುತ್ತದೆ. "ಹಬ್ಬವಾಯಿತು ನಮಗೆಲ್ಲ" ಎಂದೆನಿಸುತ್ತದೆ.

"ಕಂಡೆ ನಾಕಂಡೆ ನಾಕಂಡೆ ಕಾಳಿಂಗನ" ಎಂಬುವ ಕೃತಿಯಂತು ಅಚ್ಚುಕಟ್ಟಾಗಿ ಮೂಡಿರುವ ಭಕ್ತನ ಮನದ ಭಾವುಕತೆಯಾಗಿದೆ.

'ಕಮಲ ವದನದ ಚೆಲುವಾನಂದ
ಕಮಲಲೋಚನದ ಸುಂದರ ಅಂದ

ಕಮಲೋದ್ಭವನಿಹ ವಕ್ಷವಾನಂದ

ಕಮಲಯುಂಗಳ ಶ್ರೀಪಾದವಾನಂದ"- ಎಂಬ ಸಾಲುಗಳ ಭಾವನೆ ಅದೆಷ್ಟು ಹೃದ್ಯ.

"ಮನದೊಳಗೆ ಮಸಣವನು ತುಂಬಿಕೊಂಡಿರಲು

ಮನೆಯ ಚಿಂದದಿ ಮಾಡಿದರೇನಯ್ಯ"

"ವರಮಹಾ ಋಷಿಗಳ ವೇದಮಂತ್ರಗಳು ಪರಮಭಾಗವತರ ಪಲ್ಲಾಂಡುಗಳು" ಎಂಬುವ ಸಾಲು ವ್ಯಾಸಕೂಟ ದ್ಯಾಸಕೂಟದ ಹಾಗೆ, ಪಂಡಿತಮಾನ್ಯಸರಸ್ಸು - ಆಳ್ವಾರರ ದಿವ್ಯಪ್ರಬಂಧಕೂಟ ಇದ್ದವೆಂಬುವ ಭಾವನೆಯನ್ನು ದೃಢಗೊಳಿಸುತ್ತವೆ.

"ವಂದಿಪೆ ವಿಶ್ವಕ್ಸೇನರಿಗೆ" ಶ್ರೀವೈಷ್ಣವ ಸಂಪ್ರದಾಯದ್ದೆ ಕೃತಿ ಕುಸುಮ. ಇಲ್ಲಿರುವ ೨೬ ಕೃತಿಗಳಲ್ಲಿಯೂ ಇಹದ ಬದುಕಿನ ನಿಂದೆ ಇಲ್ಲ. ಶ್ರೀಹರಿ ಕೈಂಕರ್ಯದ ತತ್ವದ ಮನದ ತುಡಿತ ಮಿಡಿತಗಳಿಗೆ ಶರಣಾಗತಿಯ ತಾರಕ ಅನುರಣಿಸುತ್ತದೆ.

ಒಟ್ಟಾರೆ ಈ ಕೀರ್ತನ ಪರಂಪರೆಯ ಸಾಲುಗಳು ವಿಶಿಷ್ಟವೆನಿಸುತ್ತವೆ. ಹಾಗೂ ದಾಸ ಪರಂಪರೆ ಶ್ರೀವೈಷ್ಣವ ಪಂಥದನುವರ್ತಿಗಳಲ್ಲಿಯೂ ನಡೆದು ಸಾಗಿರುವ ಹೆಜ್ಜೆ ಗುರುತು ಕಾಣಿಸುವಂತಿದೆ. "ಗೀತಾಚಾರ್ಯನೆನಿಸಿ ಅರ್ಜುನ ಸಾರಥಿಯಾಗಿ ಸತ್ಯಕ್ಕೆ ಸದಾ ಜಯವೆಂದ ನಿತ್ಯವಿಭೂತಿ ಪುರುಷ ಶ್ರೀಕೃಷ್ಣನಿಗೆ" ಎಂಬುವ ಸಾಲುಗಳಿರುವಂತೆ ಶ್ರೀ ನಾ. ಗೀತಾಚಾರ್ಯರಿಗೆ ಆ ಚಿನ್ಮಯ ಗೀತಾಚಾರ್ಯ ಇನ್ನೂ ಹೊಸ ಅನ್ವೇಷಣೆಗೆ ಮಾರ್ಗದರ್ಶಕನಾಗುವನೆಂಬುದೇ ಈ ಲೇಖನದ ಆಶಯ.

ಇಲ್ಲಿಯ ಮೂವರು ಶ್ರೀವೈಷ್ಣವ ಹರಿದಾಸರ ಭಾಷೆ, ಭಾವದಭಿವ್ಯಕ್ತಿ, ಕೀರ್ತನಬಂಧ ಇವುಗಳನ್ನು ದಾಸಸಾಹಿತ್ಯದ ಇತರ ಹಿರಿಯ ಹರಿದಾಸರ ರಚನೆಗಳೊಂದಿಗೆ ತುಲನೆ ಮಾಡದಿದ್ದರೂ ರಾಮಾನುಜೀಯ ಪರಂಪರೆಯಲ್ಲಿಯೂ ದಾಸಸಾಹಿತ್ಯ ತೊಂಡರ (ಭಕ್ತರ) ಸಿರಿದರ್ಶನದ ನುಡಿಯಾಗಿ (ತಿರುವಾಯ್ಮೊಳಿ) ಹೊರಹೊಮ್ಮಿ ಬಂದಿತೆಂಬುದರ ದ್ಯೋತಕವೆನಿಸುತ್ತವೆ. ಈ ಕೀರ್ತನಗುಚ್ಛದಲ್ಲಿ ಇದನ್ನು ನಾವು ಮನಗಾಣಬಹುದಾಗಿದೆ. ಹಾಗಾಗಿ ಈ ಸಾಲುಗಳು ಹೊಸ ಚಿಂತನಕ್ಕೆ ಅವಕಾಶ ಮಾಡಿಕೊಡುತ್ತವೆ ಎಂಬುದು ಮನನೀಯ ವಿಚಾರ.

**ಡಾ|| ನೀ. ಕೃ. ರಾಮಶೇಷನ್**

# ಸಾದರ ಸ್ವೀಕಾರ

೧. **ಶ್ರೀ ವಿಶ್ವಕರ್ಮ ತತ್ವಗೀತೆ (ಛಂದೋಬದ್ಧ ಕವಿತೆಗಳು)**, ವಿ. ಗುರುಲಿಂಗಾಚಾರ್ಯ 'ಮನುತನಯ', ವಡ್ನಾಳ್ ಸಂಸ್ಥಾಪನದ ವಿಶ್ವಕರ್ಮ ಸಮಾಜ, ವಡ್ನಾಳ್, ಬನ್ನಿಹಟ್ಟಿ-೫೭೭೨೧೫, ಚನ್ನಗಿರಿತಾಲ್ಲೂಕು, ದಾವಣಗೆರೆ ಜಿಲ್ಲೆ. ಕ್ರೌನ್ ಅಷ್ಟದಳ, ೬೪+೨೪ ಪುಟಗಳು. ೨೦-೦೦ ರೂಪಾಯಿ, ೨೦೦೦.

೨. **ಪ್ರೊ. ಎಲ್. ಎಸ್. ಶೇಷಗಿರಿರಾವ್ - ೭೫ (ಅಭಿನಂದನ ಸಂಚಿಕೆ)**, ಪ್ರತಿಭಾ ನಂದಕುಮಾರ್ ಮತ್ತು ಡಾ॥ ಎಸ್. ವಿ. ಪ್ರಭಾವತಿ, ಇಳಾ ಪ್ರಕಾಶನ, ನಂ. ೩೬, ರಾಘವನಗರ, ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು-೫೬೦೦೨೬, ಕ್ರೌನ್ ಅಷ್ಟದಳ, ೬೮ ಪುಟಗಳು, ಉಚಿತ, ಫೆಬ್ರವರಿ ೨೦೦೦.

೩. **ದೇವಪ್ಪಕವಿಯ ರಾಮವಿಜಯಕಾವ್ಯ (ಕಥಾಸಾರ-ಕಾವ್ಯಸಾರ)**, ಪ್ರೊ॥ ಟಿ. ಕೇಶವಭಟ್, ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್, 'ಶಾಂತಿ' ನಂ. ೩೬೯, ೪೨ನೇ ಕ್ರಾಸ್, ೮ನೇ ಬ್ಲಾಕ್, ಜಯನಗರ, ಬೆಂಗಳೂರು-೫೬೦ ೦೮೨ ಕ್ರೌನ್ ಅಷ್ಟದಳ, ೬೪-೬ ಪುಟಗಳು, ೨೦-೦೦ ರೂಪಾಯಿಗಳು, ನವೆಂಬರ್ ೧೯೯೯.

೪. **ಸೂಕ್ತಿಗಳಲ್ಲಿ ಸಾಹಿತ್ಯ** *ಟಿ. ವಿ. ವೆಂಕಟರಮಣಯ್ಯ*, ಪ್ರ : ಟಿ. ವಿ. ವೆಂಕಟರಮಣಯ್ಯ, ಇ.ಡಬ್ಲ್ಯೂ.ಎಸ್. ೨೧೮, ಕೆ.ಎಚ್.ಬಿ. ಕಾಲೋನಿ, ೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರ ನಗರ, ಬೆಂಗಳೂರು. ಕ್ರೌನ್ ಅಷ್ಟದಳ, ೬೪ ಪುಟಗಳು, ೧೫-೦೦ ರೂಪಾಯಿಗಳು, ೧೯೯೯.

೫. **ಜೈನ ಪದ ಸಮುಚ್ಚಯ (ನಿತ್ಯವಿಧಿ ಸಹಿತ)**, ಎತ್ತೂರು ಶಾಂತಿರಾಜಶಾಸ್ತ್ರಿಗಳು, ಪಂಡಿತರತ್ನ ಎ. ಶಾಂತಿರಾಜ ಶಾಸ್ತ್ರಿ ಟ್ರಸ್ಟ್, ಶಾಂತಿ, ನಂ. ೩೬೯, ೪೨ನೇ ಕ್ರಾಸ್, ೮ನೇ ಬ್ಲಾಕ್, ಜಯನಗರ, ಬೆಂಗಳೂರು-೫೬೦ ೦೮೨ ಕ್ರೌನ್ ಅಷ್ಟದಳ, ೬-೫೮ ಪುಟಗಳು, ೧೫-೦೦ ರೂಪಾಯಿಗಳು, ನವೆಂಬರ್ ೧೯೯೯.

೬. **ಭಾವ-ಸೇತು**, ಧಾರಿಣಿ, ಜ್ವಾಲಾಮಾಲಾ ಪ್ರಕಾಶನ, ನಂ. ೫೦೦, ೧೫ನೇ ಮೇನ್‌ರೋಡ್, ಒಂದನೇ ಬ್ಲಾಕ್, ೩ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು-೫೬೦ ೦೭೯ ಕ್ರೌನ್ ಅಷ್ಟದಳ, ೧೪೮ ಪುಟಗಳು, ೪೫-೦೦ ರೂಪಾಯಿಗಳು, ಆಗಸ್ಟ್ ೧೯೯೯.

೭. **ಕನ್ನಡ ಗಣಕ ಕೀಲಿಮಣೆ ವಿನ್ಯಾಸ**, *ಲೇ : ಕನ್ನಡ ಗಣಕ ಪರಿಷತ್ತು*, ಪ್ರ : ಕನ್ನಡ ಗಣಕ ಪರಿಷತ್ತು, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦ ೦೧೯ ಕ್ರೌನ್ ಅಷ್ಟದಳ, ೧೮ ಪುಟಗಳು.

೮. **ಎತ್ತ ಸಾಗಿದೆ ನಮ್ಮ ನಾಡು,** *ಲೇ :* ನರಸಿಂಹಶೆಟ್ಟಿ, ಪ್ರ : ಸಿರಿನಾಡು ಪ್ರಕಾಶನ, ನಂ. ೧೨-೪೨, ಕೋರಮಂಗಲ ರಸ್ತೆ, ಆಡುಗೋಡಿ, ಬೆಂಗಳೂರು-೫೬೦ ೦೩೦ ಕ್ರೌನ್ ಅಷ್ಟದಳ, ೧೬೨ ಪುಟಗಳು, ೬೦-೦೦ ರೂಪಾಯಿಗಳು, ಮಾರ್ಚ್ ೨೦೦೦.

೯. **ಅಹಲ್ಯಾ,** *ಲೇ :* ಡಾ॥ ಎಸ್. ವಿ. ಪ್ರಭಾವತಿ, ಪ್ರ : ಡಾ॥ ಎಸ್. ವಿ. ಪ್ರಭಾವತಿ, ಕನ್ನಡ ವಿಭಾಗ, ಭಾರತೀಯ ಸಂಸ್ಕೃತಿ ವಿದ್ಯಾಪೀಠ, ವಿಜಯನಗರ, ಬೆಂಗಳೂರು-೫೬೦ ೦೪೦ ಕ್ರೌನ್ ಅಷ್ಟದಳ, ೮-೧೧೨ ಪುಟಗಳು, ೩೦-೦೦ ರೂಪಾಯಿಗಳು, ೧೯೯೯.

೧೦. **ಆಶಾಪ್ರದೀಪ,** *ಲೇ :* ಸೀ. ಸೋಮನಾಥ, ಲಿಪಿ ಪ್ರಕಾಶನ, ನಂ. ೧, ಬ್ಯೂಗಲ್ ರಾಕ್ ರಸ್ತೆ, ಬೆಂಗಳೂರು-೫೬೦ ೦೦೪ ಕ್ರೌನ್ ಅಷ್ಟದಳ, ೧೧೨ ಪುಟಗಳು, ೩೫-೦೦ ರೂಪಾಯಿಗಳು, ನವೆಂಬರ್ ೧೯೯೯.

೧೧. **ಮಿಶ್ರಮಾಧುರ್ಯ (ಆಧುನಿಕ ವಚನಗಳು ಮತ್ತು ಶಿಶುನಾಳ ಶರೀಫರ ಗೀತೆಗಳ ಸಂಗ್ರಹ),** *ಲೇ :* ಸದ್ಯೋಜಾತ ಮೂರ್ತಿ, ಗ್ರಂಥಗಂಗೋತ್ರಿ ಪ್ರಕಾಶನ (ಇನ್ಕ್) ೫೬೮, (ಓ. ಹೆಚ್), ೪೩ನೇ ಕ್ರಾಸ್, ೧ನೇ ಮೇನ್ ಜಯನಗರ, ೮ನೇ ಬ್ಲಾಕ್, ಬೆಂಗಳೂರು-೫೬೦ ೦೮೨ ಡೆಮ್ಮಿ ಅಷ್ಟದಳ, ೬೪ ಪುಟಗಳು, ೩೦-೦೦ ರೂಪಾಯಿಗಳು, ೧೯೯೯.

೧೨. **ಚತುರ್ವಿಂಶತಿತೀರ್ಥಕರಾರಾಧನಾ (ಶ್ರೀ ಅನಂತನಾಥ ನೋಂಪಿ ವಿಧಾನ ಸಹಿತ),** *ಲೇ :* ಎರ್ತೂರು ಶಾಂತಿರಾಜಶಾಸ್ತ್ರಿಗಳು, ಪಂಡಿತರತ್ನ ಎ. ಶಾಂತಿರಾಜ ಶಾಸ್ತ್ರೀ ಟ್ರಸ್ಟ್, "ಶಾಂತಿ", ನಂ. ೩೬೯, ೪೨ನೇ ಕ್ರಾಸ್, ೮ನೇ ಬ್ಲಾಕ್, ಜಯನಗರ, ಬೆಂಗಳೂರು-೫೬೦ ೦೮೨ ಡೆಮ್ಮಿ ಅಷ್ಟದಳ, ೨೪-೨೬೮ ಪುಟಗಳು, ೮೫-೦೦ ರೂಪಾಯಿಗಳು, ೧೯೯೯.

೧೩. **ಪುಣ್ಯಭೂಮಿ ಭಾರತ (ಕವನ ಸಂಗ್ರಹ),** *ಲೇ :* ಪ್ರೊ॥ ಡಿ. ಲಿಂಗಯ್ಯ, ದಿನಕರ ಪ್ರಕಾಶನ, ೬೯೦, ೧ನೇ 'ಬಿ' ಮೇನ್, ೭ನೇ ಬ್ಲಾಕ್, ೨ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು-೫೬೦ ೦೮೫ ಕ್ರೌನ್ ಅಷ್ಟದಳ, ೧೧೨ ಪುಟಗಳು, ನಲವತ್ತು ರೂಪಾಯಿಗಳು, ೧೯೯೯.

೧೪. **ಶ್ರೀಅರವಿಂದರು – ಒಂದು ಪ್ರವೇಶಿಕೆ,** *ಲೇ :* ಎಸ್. ಆರ್. ಮಳಗಿ, ಪ್ರೊ॥ ಎಸ್. ಆರ್. ಮಳಗಿ, ಶ್ರೀ ಅರವಿಂದ ಸೊಸೈಟಿ, ಬೆಂಗಳೂರು-೫೬೦ ೦೪೨ ಕ್ರೌನ್ ಅಷ್ಟದಳ, ೨೩ ಪುಟಗಳು, ಶ್ರೀಅರವಿಂದರ ೧೨೫ನೆಯ ಜನ್ಮವಾರ್ಷಿಕೋತ್ಸವ ಅಂಗವಾಗಿ.

೧೫. **ನ್ಯೂ ವಾಯ್ಸ್ ಇನ್ ಕನ್ನಡ ಪೊಯಟ್ರಿ,** *ಲೆ :* ಶ್ಯಾಮ, ಪಾರಿಜಾತ ಪಬ್ಲಿಕೇಶನ್ಸ್, ನಂ. ೧೮೭, ೩೭ನೇ ಕ್ರಾಸ್, ೧೬ನೇ ಮುಖ್ಯರಸ್ತೆ, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು-೫೬೦ ೦೪೧ ಕ್ರೌನ್ ಅಷ್ಟವಳ, ೧೭೬ ಪುಟಗಳು, ಐವತ್ತು ರೂಪಾಯಿಗಳು, ೧೯೯೯.

೧೬. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** : ೪, ಡಾ॥ ಬಾ. ರಾ. ಗೋಪಾಲ್, ಡಾ॥ ಎಚ್. ಎಸ್. ಗೋಪಾಲರಾವ್ ಮತ್ತು ಡಾ॥ ಪಿ. ವಿ. ಕೃಷ್ಣಮೂರ್ತಿ, ಪ್ರ : ಕನ್ನಡ ಯೂನಿವರ್ಸಿಟಿ, ಹಂಪಿ, ವಿದ್ಯಾರಣ್ಯ, ಪ್ರೊ॥ ಎ. ವಿ. ನಾವಡ, ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಬಳ್ಳಾರಿ ಜಿಲ್ಲೆ-೫೮೩೨೭೬ ಕ್ರೌನ್ ಅಷ್ಟದಳ, ೧೬೦ ಪುಟಗಳು, ಇನ್ನೂರು ರೂಪಾಯಿಗಳು, ೨೦೦೦.

೧೭. **ಮಧುರಕವಿ ಮಾಧುರ್ಯ** : ಕನ್ನಡದಲ್ಲಿ ಒಂದು ಚಿಂತನೆ, ತಿರುನಾರಾಯಣಪುರಂ ಅಯ್ಯೆಯರ್, ವಿಶದ ಪ್ರಕಾಶನ, ಮೇಲುಕೋಟೆ-೫೭೧೪೩೧, ಕರ್ನಾಟಕ. ಡೆಮ್ಮಿ ಅಷ್ಟದಳ, ೧೬೬-೪ ಪುಟಗಳು, ಎಪ್ಪತ್ತೈದು ರೂಪಾಯಿಗಳು, ೨೦೦೦.

೧೮. **ಜ್ಞಾನ (ಕಿರುಸೂಕ್ತಿಮಾಲೆ-೩)**, *ಲೇ : ಟಿ. ವಿ.* ವೆಂಕಟರಮಣಯ್ಯ, ಪ್ರ : ಸ್ವತಂತ್ರ ಮುದ್ರಣಾಲಯ, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಕ್ರೌನ್ ಅಷ್ಟದಳ, ೪೨-೬ ಪುಟಗಳು, ಹದಿನೈದು ರೂಪಾಯಿಗಳು, ೨೦೦೦.

೧೯. **ವಚನ ದವನ (ವಚನ ಸಂಕಲನ)**, *ಲೇ : ಪ್ರೊ॥ ಡಿ. ಲಿಂಗಯ್ಯ*, ದಿನಕರ ಪ್ರಕಾಶನ, ೬೯೦, ೭ನೇ ಬ್ಲಾಕ್, ೨ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು-೫೬೦ ೦೮೫ ಕ್ರೌನ್ ಅಷ್ಟದಳ, ೧೬೦ ಪುಟಗಳು, ಅರವತ್ತು ರೂಪಾಯಿಗಳು, ೨೦೦೦.

೨೦. **ವಿಚಾರವಾಹಿನಿ**, *ಲೇ : ಪ್ರೊ॥ ದೊಡ್ಡರಂಗೇಗೌಡ*, ಪ್ರ : ಕನ್ನಡ ಕಣ್ಮಣಿ, ಕೃಷ್ಣ ಬಿಲ್ಡಿಂಗ್, ಅವಿನ್ಯೂ ರಸ್ತೆ, ಬೆಂಗಳೂರು. ಕ್ರೌನ್ ಅಷ್ಟದಳ, ೧೪-೧೩೦ ಪುಟಗಳು, ಐವತ್ತು ರೂಪಾಯಿಗಳು, ೧೯೯೯.

೨೧. **ಸಂಕ್ಷಿಪ್ತ ರಾಮಾಯಣ ಮತ್ತು ಶ್ರೀ ಕೃಷ್ಣಬಾಲಲೀಲೆ (ನಾಮಲಹರಿಗಳು)**, ಎಂ. ಆರ್. ಅನಂತರಾಮಯ್ಯ, ಕೀರ್ತಿ ಪ್ರಿಂಟರ್ಸ್, ಗಿರಿನಗರ, ಬೆಂಗಳೂರು-೮೫, ಡೆಮ್ಮಿ ಅಷ್ಟದಳ, ೪೮ ಪುಟಗಳು, ಹದಿನೈದು ರೂಪಾಯಿಗಳು, ೨೦೦೦.

೨೨. **ಜಾನಪದ ಶೋಧನ (ಸಂಶೋಧನ ಲೇಖನಗಳ ಸಂಕಲನ)**, *ಲೇ : ಪ್ರೊ॥ ಡಿ. ಲಿಂಗಯ್ಯ*, ದಿನಕರ ಪ್ರಕಾಶನ, ೬೯೦, ೭ನೇ ಬ್ಲಾಕ್, ೨ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು-೮೫, ಕ್ರೌನ್ ಅಷ್ಟದಳ, ೯೬ ಪುಟಗಳು, ನಲವತ್ತು ರೂಪಾಯಿಗಳು, ೨೦೦೦.

೨೩. **ನಗೆ-ಹಾಸ್ಯ (ಸೂಕ್ತಿ ಸಂಗ್ರಹ)**, *ಟಿ. ವಿ.* ವೆಂಕಟರಮಣಯ್ಯ, ಸ್ವತಂತ್ರ ಮುದ್ರಣಾಲಯ, ನಂ. ೩, ಬಿ.ಸಿ.ಸಿ. ಬ್ಯಾಂಕ್ ಕಟ್ಟಡ, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮, ಕ್ರೌನ್ ಅಷ್ಟದಳ, ೪-೭೬ ಪುಟಗಳು, ಇಪ್ಪತ್ತೈದು ರೂಪಾಯಿಗಳು, ೨೦೦೦.

**೨೪. ಗ್ರಂಥ-ಗ್ರಂಥಾಲಯವಾಚನ (ಸೂಕ್ತಿ ಸಂಗ್ರಹ)**, ಟಿ. ವಿ. ವೆಂಕಟರಮಣಯ್ಯ, ಸ್ವತಂತ್ರ ಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು-೧೮, ಕ್ರೌನ್ ಅಷ್ಟದಳ, ೬-೭೪ ಪುಟಗಳು, ಇಪ್ಪತ್ತೈದು ರೂಪಾಯಿಗಳು, ೨೦೦೦.

**೨೫. ಸೂಕ್ತಿಗಳಲ್ಲಿ ಧರ್ಮ**, ಟಿ. ವಿ. ವೆಂಕಟರಮಣಯ್ಯ, ಸ್ವತಂತ್ರ ಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು-೧೮, ಕ್ರೌನ್ ಅಷ್ಟದಳ, ೪-೪೦ ಪುಟಗಳು, ಹದಿನೈದು ರೂಪಾಯಿಗಳು, ೨೦೦೦.

**೨೬. ಚಿಂತೆ (ಸೂಕ್ತಿ ಸಂಗ್ರಹ)**, ಟಿ. ವಿ. ವೆಂಕಟರಮಣಯ್ಯ, ಸ್ವತಂತ್ರ ಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು-೧೮, ಕ್ರೌನ್ ಅಷ್ಟದಳ, ೩೨-೪ ಪುಟಗಳು, ಹತ್ತು ರೂಪಾಯಿಗಳು, ೨೦೦೦.

**೨೭. ಉದ್ಯೋಗಂ ಪುರುಷ ಲಕ್ಷಣಂ (ಸೂಕ್ತಿ ಸಂಗ್ರಹ)**, ಟಿ. ವಿ. ವೆಂಕಟರಮಣಯ್ಯ, ಸ್ವತಂತ್ರ ಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು-೧೮ ಕ್ರೌನ್ ಅಷ್ಟದಳ, ೪-೬೦ ಪುಟಗಳು, ಇಪ್ಪತ್ತು ರೂಪಾಯಿಗಳು, ೨೦೦೦.

**೨೮. ಜ್ಞಾನ (ಕಿರು ಸೂಕ್ತಿಮಾಲೆ)**, ಟಿ. ವಿ. ವೆಂಕಟರಮಣಯ್ಯ, ಸ್ವತಂತ್ರ ಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು-೧೮ ಕ್ರೌನ್ ಅಷ್ಟದಳ, ೬-೪೨ ಪುಟಗಳು, ಹದಿನೈದು ರೂಪಾಯಿಗಳು, ೨೦೦೦.

**೨೯. ಬಾದಾಮಿಯ ಮಹಾನಟ**, ಲೇ : ತಿರುಮಲೆ ಶ್ರೀರಂಗಾಚಾರ್ಯ, ಕರ್ನಾಟಕ ನವೋದಯ ಪ್ರಕಾಶನ, ೭೫, ಡಾ॥ ಅ. ನ. ಕೃ. ರಸ್ತೆ, ಬೆಂಗಳೂರು-೪, ಕ್ರೌನ್ ಅಷ್ಟದಳ, ೮-೩೪ ಪುಟಗಳು, ಹದಿನೈದು ರೂಪಾಯಿಗಳು, ೨೦೦೦.

**೩೦. ನನ್ನೂರು-ನನ್ನೋರು (ಒಂದು ಗ್ರಾಮೀಣ-ಜಾನಪದ ಸಾಂಸ್ಕೃತಿಕ ಅಧ್ಯಯನ)**, ನಾಗವೇಂದ್ರ ಸ್ವಾಮಿ ಚಿದರವಳ್ಳಿ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮ ಡೆಮ್ಮಿ ಅಷ್ಟದಳ, ೬-೮೮ ಪುಟಗಳು, ಇಪ್ಪತ್ತು ರೂಪಾಯಿಗಳು, ೨೦೦೦.

**೩೧. ಕಥಾ ವಸ್ತುವಾಗಿ ಸಂಕೇತಿಗಳು**, ಪ್ರಣತಾರ್ತಿಹರನ್, ಸಮುದಾಯ ಅಧ್ಯಯನ ಕೇಂದ್ರ ಚಾರಿಟಬಲ್ ಟ್ರಸ್ಟ್, ೩೦೫೯, ೪ನೇ ಅಡ್ಡರಸ್ತೆ, ಗೋಕುಲಂ ಪಾರ್ಕ್ ರಸ್ತೆ, ಗೋಕುಲಂ, ಮೈಸೂರು-೫೭೦೦೦೨, ಡೆಮ್ಮಿ ಅಷ್ಟದಳ, ೧೬-೧೨೪ ಪುಟಗಳು, ಐವತ್ತು ರೂಪಾಯಿಗಳು, ೨೦೦೦.

**೩೨. ಚುಟುಕು ಗುಟುಕು (ಚುಟುಕು ಸಂಕಲನ)**, ಲೇ : ಶಿವರಾಮ ಹೆಗಡೆ, ಬಾಳೆಗದ್ದೆ, ಎಂ. ವಿ. ಹೆಗಡೆ, ಇಟಗುಳಿ, ಶಿರಸಿ (ಉ. ಕ.) ೫೮೧೩೩೬ ಕ್ರೌನ್ ಅಷ್ಟದಳ, ೨೪ ಪುಟಗಳು, ಹದಿನೈದು ರೂಪಾಯಿಗಳು, ೨೦೦೧.

೩೩. **ಚೈತ್ರದ ಚಿಗುರು**, ರತ್ನಾಮೂರ್ತಿ, ಸೃಷ್ಟಿ ಪ್ರಕಾಶನ, ೪೭೫, ೧೬ನೇ ಮುಖ್ಯರಸ್ತೆ, (ಹೊಸ ೩ನೇ ಮುಖ್ಯರಸ್ತೆ), ಬನಶಂಕರಿ ೧ನೇ ಹಂತ, ೧ನೇ ಬ್ಲಾಕ್, ಶ್ರೀನಗರ, ಬೆಂಗಳೂರು-೫೬೦ ೦೫೦ ಕ್ರೌನ್ ಅಷ್ಟದಳ, ೧೮-೭೫ ಪುಟಗಳು, ನಲವತ್ತು ರೂಪಾಯಿಗಳು, ೨೦೦೦.

೩೪. **ಬಣ್ಣದ ಹಬ್ಬ (ಮಕ್ಕಳ ನಾಟಕ)**, *ಲೇ : ಬಂದಗದ್ದೆ ರಾಧಾಕೃಷ್ಣ*, ಪುಸ್ತಕ ಹೊಂಬಾಳೆ, ಕೆಳದಿ, ಶಿವಮೊಗ್ಗ, ಕ್ರೌನ್ ಅಷ್ಟದಳ, ೨೦ ಪುಟಗಳು, ಹದಿನೈದು ರೂಪಾಯಿಗಳು, ೨೦೦೦.

೩೫. **ಭದ್ರಮುಷ್ಠಿ (ಮಕ್ಕಳ ನಾಟಕ)**, *ಲೇ : ಗಜಾನನ ಶರ್ಮ*, ಪುಸ್ತಕ ಹೊಂಬಾಳೆ, ಕೆಳದಿ, ಶಿವಮೊಗ್ಗ, ಕ್ರೌನ್ ಅಷ್ಟದಳ, ೨೦ ಪುಟಗಳು, ಹದಿನೈದು ರೂಪಾಯಿಗಳು, ೨೦೦೦.

೩೬. **ಒಸರು ಬುಗ್ಗೆ (ಕವನ ಸಂಕಲನ)**, *ಲೇ : ಪ್ರೊ|| ಟಿ. ಕೇಶವಭಟ್ಟ*, ಚಿರಸಾಹಿತ್ಯ ಪ್ರಕಾಶನ, ೭೫೪, ೧೫ನೆಯ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು-೭೦, ಡೆಮ್ಮಿ ಅಷ್ಟದಳ, ೧೦೪ ಪುಟಗಳು, ಐವತ್ತು ರೂಪಾಯಿಗಳು, ೨೦೦೦.

೩೭. **ಕನ್ನಡನಾಡಿನ ಮರೆಯಬಾರದ ಮಹನೀಯರು - ಮಾಹಿತಿ ಕೋಶ**, ಎಸ್. ವಿ. ಶ್ರೀನಿವಾಸರಾವ್, ಸೌರಭ ಪ್ರಕಾಶನ, ೪೩೦, ೪ನೇ ಮುಖ್ಯರಸ್ತೆ, ಶ್ರೀನಗರ, ಬನಶಂಕರಿ ೧ನೇ ಹಂತ, ಬೆಂಗಳೂರು-೫೬೦ ೦೫೦, ಡೆಮ್ಮಿ ಅಷ್ಟದಳ, ೨೧೦+೧೪ ಪು, ನೂರ ಹತ್ತು ರೂಪಾಯಿಗಳು, ೨೦೦೦.

೩೮. **ಸಿ.ಎಸ್.ಜಿ. ಅವರ ಚುಟುಕಗಳು** - *ಸಿ. ಎಸ್. ಗೋವಿಂದರಾವ್*, ೧೫/೨, ೨ನೇ ಕ್ರಾಸ್, ಚಿಕ್ಕಣ್ಣ ಗಾರ್ಡನ್, ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮, ಕ್ರೌನ್ ಅಷ್ಟದಳ, ೫೪ ಪು, ೨೦ ರೂ, ೧೯೯೯.

೩೯. **ಸ್ವಾತಂತ್ರ್ಯಕ್ಕೆ ಜೀವವಿದೆ (ಕವನ ಸಂಕಲನ)** - ಭೂಹಳ್ಳಿ ಪುಟ್ಟಸ್ವಾಮಿ, ಸುಕೃತ ಪ್ರಕಾಶನ, ನಂ. ೧೧, ಹೊಸ ಬಡಾವಣೆ, ಬೆಳವಾಡಿ, ಮೈಸೂರು-೫೮೧೧೮೬, ಡೆಮ್ಮಿ ಅಷ್ಟದಳ, ೮೬+೧೦ ಪು, ೩೫ ರೂ, ೧೯೯೯.



# ಪ್ರತಿಷ್ಠಾನದ ಪ್ರಕಟಣೆಗಳು

## ದ್ವಿದಶಮಾನೋತ್ಸವ ಮಾಲೆ

೧. **ಲೋಚನ ಲೇಖನ ಸೂಚಿ** : *ಸಂ. : ಪಿ. ವಿ. ಕೃಷ್ಣಮೂರ್ತಿ, ನಾ. ಗೀತಾಚಾರ್ಯ* ಡೆಮ್ಮಿ ಅಷ್ಟದಳ, ೬೨ ಪುಟಗಳು, ೧೫ ರೂ, ೧೯೯೯.

೨. **ಅಂತರ ಶಿಸ್ತೀಯ ಸಂಶೋಧನಾ ವಿಧಿವಿಧಾನ** : *ಸಂ.: ನಾ. ಗೀತಾಚಾರ್ಯ*, ಡೆಮ್ಮಿ ಅಷ್ಟದಳ, ೬೭ ಪುಟಗಳು, ೨೫ ರೂಪಾಯಿಗಳು, ೧೯೯೯.

೩. **ಸೋಸಲೆ ಅಯ್ಯಾಶಾಸ್ತ್ರಿಗಳು** : *ಸಂ.: ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ, ನಾ. ಗೀತಾಚಾರ್ಯ*, ಡೆಮ್ಮಿ ಅಷ್ಟದಳ, ೪೨ ಪುಟಗಳು, ೨೫ ರೂಪಾಯಿಗಳು, ೨೦೦೦.

೪. **ಎಂ.ವಿ.ಸೀ. ಸಮಗ್ರ ಸಾಹಿತ್ಯಮಾಲೆ - ೬ :**
**ಆಧುನಿಕ ಸಾಹಿತ್ಯ ಸಮೀಕ್ಷೆ ಭಾಗ-೧** : *ಸಂ.: ಎಂ. ವಿ. ಸೀತಾರಾಮಯ್ಯ*, ಡೆಮ್ಮಿ ಅಷ್ಟದಳ, ೨೬೪ ಪುಟಗಳು, ೨೦೦ ರೂಪಾಯಿಗಳು, ೨೦೦೦.



## 'ಕರ್ನಾಟಕ ಲೋಚನ'ದ ಸಂಪಾದಕರಾಗಿ ಎಸ್. ವಿ. ಶ್ರೀನಿವಾಸರಾವ್ ನೇಮಕ



ಬಿ. ಎಂ. ಶ್ರೀ. ಪ್ರತಿಷ್ಠಾನದ ಷಾಣ್ಮಾಸಿಕ ವಿದ್ವತ್ ಪತ್ರಿಕೆಯ ನೂತನ ಸಂಪಾದಕರನ್ನಾಗಿ ಹಿರಿಯ ಸಾಹಿತಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರನ್ನು ಕಾರ್ಯಕಾರಿ ಸಮಿತಿಯು ಆಯ್ಕೆ ಮಾಡಿದೆ. ಶ್ರೀ ಎಸ್. ವಿ. ಶ್ರೀನಿವಾಸರಾವ್, ಎಂ.ಎ., ಬಿ.ಎಸ್ಸಿ., ರಾಷ್ಟ್ರಭಾಷಾ ವಿಶಾರದ, ರಷ್ಯನ್ ಡಿಪ್ಲೊಮೋ, ಕನ್ನಡ ಸಾರಸ್ವತ ಲೋಕದ ಹಿರಿಯ ಸಾಹಿತಿಗಳಲ್ಲಿ ಒಬ್ಬರು. (ವಯಸ್ಸು ೬೮) ತಾಂತ್ರಿಕ ವಿದ್ಯೆ ಗಳಿಸಿ ವಿಜ್ಞಾನಿಯಾಗಿ (ಸೈಂಟಿಫಿಕ್ ಆಫೀಸರ್) ಕೇಂದ್ರ ಸರ್ಕಾರದ ರಕ್ಷಣಾ ಇಲಾಖೆಯಲ್ಲಿ ಗೆಜೆಟೆಡ್ ಅಧಿಕಾರಿಯಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಶ್ರೀಯುತರು ಕನ್ನಡ ಸಾರಸ್ವತ ಲೋಕಕ್ಕೆ ೬೦ಕ್ಕೂ ಹೆಚ್ಚು ವೈವಿಧ್ಯಪೂರ್ಣ ಸಾಹಿತ್ಯ ಕೃತಿಗಳನ್ನು (ಕಾದಂಬರಿ-೧೯, ಕಥಾಸಂಕಲನ-೭, ಮಕ್ಕಳ ಸಾಹಿತ್ಯ-೧೯, ಸಂಪಾದನ/ಸಂಕಲನ-೫, ಅನುವಾದ-೫, ಸಂಕೀರ್ಣ-೫) ನೀಡಿರುತ್ತಾರೆ. ಇವರು ಕರ್ನಾಟಕದ ಮಕ್ಕಳ ಸಾಹಿತ್ಯ ಪರಿಷತ್ತಿನ ಸ್ಥಾಪಕ ಕಾರ್ಯದರ್ಶಿಯಾಗಿ, ಕರ್ನಾಟಕ ಪ್ರಕಾಶಕರ ಸಂಘದ ಕಾರ್ಯದರ್ಶಿ/ ಖಜಾಂಜಿಯಾಗಿ ಪ್ರಸ್ತುತ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಮೂರು ವರ್ಷ ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧ್ಯಕ್ಷರಾಗಿ ನಿಸ್ಪೃಹ ಸೇವೆ ಸಲ್ಲಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಇವರ "ಒರಿಯಾ ಕಥೆಗಳು" ಕಥಾಸಂಕಲನಕ್ಕೆ ರಾಜ್ಯ ಸರ್ಕಾರದ ಬಹುಮಾನ, "ಪರಿಸರ ಮಾಲಿನ್ಯದ ಅಪಾಯಗಳು" ಕೃತಿಗೆ ಮೈಸೂರು ವಿಶ್ವವಿದ್ಯಾನಿಲಯದ ಬಹುಮಾನ, "ಸಹನೆ-ಸಾಧನೆ" ಮಕ್ಕಳ ಕಥಾಸಂಕಲನಕ್ಕೆ "ಆರ್ಯಭಟ" ಪ್ರಶಸ್ತಿ "ಪ್ರೌಢಪ್ರತಾಪ ವೀರರಾಜೇಂದ್ರ" (ಚಾರಿತ್ರಿಕ ಕಾದಂಬರಿ)ಗೆ ಒಂದು ದಶಕದ (೧೯೮೦-೧೯೯೦) ಅತ್ಯುತ್ತಮ ಕೃತಿಗಳಲ್ಲಿ ಒಂದೆಂದು ಪರಿಗಣಿಸಿ ಮೈಸೂರಿನ "ನೃಪತುಂಗ ಸಾಹಿತ್ಯ ಪ್ರಶಸ್ತಿ" ಲಭಿಸಿದೆ. ಇದೇ ಕಾದಂಬರಿಗೆ ಪಾಪ್ಪಾಪುರದ ವಿಶ್ವಭಾರತೀಯ ಪರಿಷತ್ತು ನಡೆಸಿದ ಕಾದಂಬರಿ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ರೂಪಾಯಿ ೪,೦೦೦ ಸಾವಿರ ಲಭಿಸಿರುತ್ತದೆ. ೨೦೦೦ನೇ ಸಾಲಿನ ವಿಶ್ವೇಶ್ವರಯ್ಯ ಸಾಹಿತ್ಯ ಪ್ರಶಸ್ತಿಗೆ ಆಯ್ಕೆಗೊಂಡಿರುತ್ತಾರೆ. ಬೆಂಗಳೂರು ದೂರದರ್ಶನ ಕೇಂದ್ರದ "ಪ್ರಿವ್ಯೂ" ಕಮಿಟಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. "ಕನ್ನಡ ಸಾಹಿತ್ಯ ದರ್ಶನ" ಒಂದು ಸಾವಿರದ ಐನೂರಕ್ಕೂ ಹೆಚ್ಚು ಕನ್ನಡ ಲೇಖಕರ ಪರಿಚಯ ಹಾಗೂ ಅವರ ವೈಶಿಷ್ಟ್ಯಪೂರ್ಣ ಸಾಹಿತ್ಯದ ತಿನಿಸನ್ನು ಉಣಬಡಿಸುವ ಈ ಕೃತಿ ಡಾ॥ ಕುವೆಂಪುರವರ

ಅಮೃತಹಸ್ತದಿಂದ ಬಿಡುಗಡೆಗೊಂಡು ಶಾಲಾ-ಕಾಲೇಜುಗಳಿಗೆ ಆಕರ ಗ್ರಂಥವಾಗಿ ಜನಪ್ರಿಯಗೊಂಡಿದೆ. ಶ್ರೀಯುತರ ಇತ್ತೀಚಿನ ಕೃತಿ "ಕನ್ನಡನಾಡಿನ ಮರೆಯಬಾರದ ಮಹನೀಯರು" "ಮಾಹಿತಿ ಕೋಶ" "ವೈನತೇಯ ಸಾಹಸ" "ಬಹು ಉಪಯುಕ್ತ ಕೃತಿ" "ಸ್ತುತ್ಯಾರ್ಹ ಪ್ರಕಟಣೆ" ಮುಂತಾಗಿ ಕನ್ನಡದ ವರಿಷ್ಠರಿಂದ ಪ್ರಶಂಸಿಸಲ್ಪಟ್ಟಿದೆ. ಇದಕ್ಕೆ ಈ ವರ್ಷ ಅತ್ತಿಮಬ್ಬೆ ಪ್ರತಿಷ್ಠಾನದ "ರನ್ನ ಸಾಹಿತ್ಯ ಪ್ರಶಸ್ತಿ" ಲಭಿಸಿದೆ. "ಕಾ. ಕಾ. ಕಾಲೇಲ್‌ಕರ್" ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ ಅನುವಾದಿಸಿರುವ ಈ ಕೃತಿಗೆ "ಗೊರೂರು ಸಾಹಿತ್ಯ ಪ್ರಶಸ್ತಿ" ಲಭಿಸಿದೆ. ಇವರು ಅಖಿಲ ಭಾರತ ಲೇಖಕರ ಕಮ್ಮಟ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರವಾಸ ಅಧ್ಯಯನ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದಾರೆ. ಇತ್ತೀಚೆಗೆ ವಿಶೇಷ ಆಹ್ವಾನದ ಮೇರೆಗೆ ಅಮೇರಿಕ ಪ್ರವಾಸ ಮಾಡಿ "ಇಣುಕು ನೋಟ" ಎಂಬ ಕೃತಿ ರಚಿಸಿರುತ್ತಾರೆ. ಇದು ವಿದ್ವಾಂಸರುಗಳ ಮನ್ನಣೆ ಪಡೆದಿದೆ. ೩೦ಕ್ಕೂ ಹೆಚ್ಚು ನಾಟಕ, ರೂಪಕಗಳು ಆಕಾಶವಾಣಿ/ದೂರದರ್ಶನ ಕೇಂದ್ರಗಳಿಂದ ಪ್ರಸಾರಗೊಂಡಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಅನೇಕ ಗೋಷ್ಠಿಗಳಲ್ಲಿ ಅಧ್ಯಕ್ಷರಾಗಿ, ಪ್ರಬಂಧಕಾರರಾಗಿ ಸಾಹಿತಿಗಳ ಗಮನ ಸೆಳೆದಿದ್ದಾರೆ. ಇವರ ಎಲ್ಲಾ ಕಾದಂಬರಿಗಳೂ ಜನಪ್ರಿಯ ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿರುವುದು ಇವರ ಸೃಜನಸಾಹಿತ್ಯದ ವೈಶಿಷ್ಟ್ಯ.

ಇವರ ಬಹುಮುಖ ಪ್ರತಿಭೆಯನ್ನು ಗುರುತಿಸಿ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ತುಮಕೂರು, ಕನ್ನಡ ಸಾಹಿತ್ಯ ಪರಿಷತ್ತು ಕೊಡಗು, ಬನಶಂಕರಿ ಸಾಂಸ್ಕೃತಿಕ ಸಂಘ, ನಿವಾರಣಾ ಸಂಸ್ಥೆ, ಬೆಂಗಳೂರು ಮುಂತಾಗಿ ಹಲವು ಸಂಘ-ಸಂಸ್ಥೆಗಳು ಇವರನ್ನು ಸನ್ಮಾನಿಸಿವೆ. ಇವರ ಅಭಿಮಾನಿಗಳು ಇವರಿಗೆ "ಸೌರಭಶ್ರೀ" ಅಭಿನಂದನ ಗ್ರಂಥ ಸಲ್ಲಿಸಿ ಗೌರವಿಸಿದ್ದಾರೆ. ಇವರ ಸಾಹಿತ್ಯ ಕೊಡುಗೆಗಳ ಮಾಹಿತಿ "ಕೇಂದ್ರ ಸಾಹಿತ್ಯ ಅಕಾಡೆಮಿ" ಹಾಗೂ "ಏಷ್ಯಾ ಪೆಸಿಫಿಕ್ ಡೈರೆಕ್ಟರಿಗಳಲ್ಲಿ (who's who) ದಾಖಲಾಗಿದೆ. ಶ್ರೀಯುತರು ಮೇಲ್ಕಂಡಂತೆ ಅಪಾರ ಸಾಹಿತ್ಯ ಕೊಡುಗೆಗಳನ್ನು ನೀಡಿರುವುದಲ್ಲದೆ ಅನೇಕ ಸಾಂಸ್ಕೃತಿಕ ಸಂಸ್ಥೆಗಳಲ್ಲೂ ನಿಸ್ಪೃಹ ಸೇವೆ ಸಲ್ಲಿಸುತ್ತಿದ್ದಾರೆ.



# ದ್ವಿದಶಮಾನೋತ್ಸವದ ಸಂದರ್ಭದಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಮುಖ್ಯ ಚಟುವಟಿಕೆಗಳು - ಒಂದು ಪಕ್ಷಿನೋಟ

**(೧) ಪ್ರಾಚೀನ ಹಸ್ತಪ್ರತಿಗಳ ಭಂಡಾರ :**

ಪ್ರತಿಷ್ಠಾನದ ಪ್ರಾಚೀನ ಹಸ್ತಪ್ರತಿ ಭಂಡಾರದಲ್ಲಿ, ಸಂಸ್ಥೆಯ ಸ್ಥಾಪನೆಯೊಂದಿಗೇ ಅಂದರೆ ೧೯೭೯ರಿಂದಲೇ ಸಂಗ್ರಹ ಪ್ರಾರಂಭವಾಗಿದ್ದು ಪ್ರಸ್ತುತ ೧೫೦೦ಕ್ಕೂ ಅಧಿಕ ಓಲೆಗರಿ ಮತ್ತು ಕಾಗದದ ಅಮೂಲ್ಯ ಹಸ್ತಪ್ರತಿಗಳಿವೆ. ಒಟ್ಟು ೩೦೦೦ಕ್ಕೂ ಹೆಚ್ಚಿನ ಗ್ರಂಥ ಪ್ರತಿಗಳಿರುವ ಈ ಹಸ್ತಪ್ರತಿಗಳಲ್ಲಿ ವೈವಿಧ್ಯತೆಯಿದೆ. ಅತಿಸಣ್ಣ ಹಸ್ತಪ್ರತಿಯಿಂದ ಹಿಡಿದು ೩ ಅಡಿ ಉದ್ದದ ದೊಡ್ಡ ಹಸ್ತಪ್ರತಿಗಳಿವೆ, ೫೦೦ಕ್ಕೂ ಹೆಚ್ಚು ಗರಿಗಳಿರುವ ಬೃಹತ್ ಹಸ್ತಪ್ರತಿಗಳು, ರೇಖಾ-ವರ್ಣ ಚಿತ್ರಗಳಿರುವ ಹಸ್ತಪ್ರತಿಗಳು, ಸನ್ನದು, ಕೈಫಿಯತ್ತುಗಳೂ ಇವೆ.

ತಿಮ್ಮಪ್ಪದಾಸರ ಹಲವು ಸ್ವಹಸ್ತಾಕ್ಷರ ಹಸ್ತಪ್ರತಿಗಳೊಂದಿಗೆ 'ಸೂಕ್ತಿ ಸುಧಾರ್ಣವ', 'ಕುಮಾರವ್ಯಾಸ ಭಾರತ', ಪ್ರತಿಪುಟದಲ್ಲೂ ವರ್ಣಚಿತ್ರಗಳಿರುವ 'ಸ್ತೋತ್ರ ರತ್ನಾಕರ' ಎಂಬ ಕಾಗದದ ಹಸ್ತಪ್ರತಿ ಮುಂತಾದ ಮಹತ್ವದ ಹಸ್ತಪ್ರತಿಗಳೂ ಅನೇಕ ಅಪ್ರಕಟಿತ ಹಸ್ತಪ್ರತಿಗಳೂ ಇವೆ.

ಯಾವುದೇ ಒಂದು ಸಂಶೋಧನಾ ಸಂಸ್ಥೆಯ ಅತ್ಯಗತ್ಯ ಅಂಗವಾಗಿರುವ ಈ ಹಸ್ತಪ್ರತಿ ಭಂಡಾರ ಪ್ರತಿಷ್ಠಾನದಲ್ಲಿ ಸುಸಜ್ಜಿತವಾಗಿದ್ದು ಉತ್ತಮ ನಿರ್ವಹಣೆಯಿಂದ ಕೂಡಿದೆ. ವೈಜ್ಞಾನಿಕ ವಿಧಾನದಿಂದ ಹಸ್ತಪ್ರತಿಗಳನ್ನು ಸಂರಕ್ಷಿಸಲಾಗುತ್ತಿದೆ. ಹಸ್ತಪ್ರತಿಗಳ ಅಧ್ಯಯನಕ್ಕಾಗಿ ಮೈಕ್ರೊಫಿಲಂ ರೀಡರ್ ಹೊಂದಿದ್ದು ನಿರಂತರವಾಗಿ ಹಸ್ತಪ್ರತಿ ಸಂಪ್ರತಿ ಕಾರ್ಯ ಮತ್ತು ಸಂಶೋಧನೆ ನಡೆಯುತ್ತಿದೆ. ಈವರೆಗೆ ೯೭ ಹಸ್ತಪ್ರತಿಗಳ ವರ್ಣನಾತ್ಮಕ ಹಸ್ತಪ್ರತಿಸೂಚಿ ಪ್ರಕಟವಾಗಿದ್ದು ಇನ್ನೂ ೨೦೦ ಹಸ್ತಪ್ರತಿಗಳ ಸೂಚಿ ಪ್ರಕಟಣೆಗೆ ಸಿದ್ಧವಾಗಿದೆ.

**(೨) ಆಕರ ಗ್ರಂಥಾಲಯ :**

ಯಾವುದೇ ಸಂಶೋಧನಾ ಸಂಸ್ಥೆಯ ಮುಖ್ಯ ಅಂಗವಾದ ಗ್ರಂಥಾಲಯ ಪ್ರತಿಷ್ಠಾನದಲ್ಲಿ ಪ್ರಾರಂಭದಿಂದಲೂ ಇದೆ. ಈವರೆಗೆ ಏಳು ಸಾವಿರಕ್ಕೂ ಹೆಚ್ಚು ಗ್ರಂಥ ಸಂಗ್ರಹವಿದೆ. ಇದರಲ್ಲಿ ಸಂಶೋಧನೆಗೆ ಅಗತ್ಯವಾದ ಗ್ರಂಥಗಳನ್ನು ಮಾತ್ರ ಹೊಂದಲಾಗಿದೆ. ಈ ಕಾರಣಕ್ಕಾಗಿಯೇ ಕಥೆ, ಕಾದಂಬರಿ, ನಾಟಕ ಇತ್ಯಾದಿ ಜನಪ್ರಿಯ ಸಾಹಿತ್ಯ ಪ್ರಕಾರಗಳನ್ನು ಸೇರಿಸಿಲ್ಲ ಮತ್ತು ಪುಸ್ತಕಗಳನ್ನು ಮನೆಗೆ ಕೊಡುವ ವ್ಯವಸ್ಥೆ ಹೊಂದಿಲ್ಲ.

ಎಲ್ಲ ಇ. ಸಿ.ಗಳು, ಎಂ. ಎ. ಆರ್‌ಗಳು, ನಿಘಂಟುಗಳೂ ಹಸ್ತಪ್ರತಿ ಗ್ರಂಥಸೂಚಿಗಳೂ ಪ್ರಾಚೀನ ಗ್ರಂಥಗಳು, ಇಂಡಾಲಜಿ ಮತ್ತು ಕನ್ನಡಾಲಜಿಗೆ

ಸಂಬಂಧಿಸಿದ ಅಮೂಲ್ಯ ಆಕರ ಗ್ರಂಥಗಳನ್ನು ಪ್ರತಿಷ್ಠಾನ ಹೊಂದಿದ್ದು ಸಾಹಿತ್ಯ ಸಂಶೋಧನೆಯ ಆಸಕ್ತರು ಮತ್ತು ಉನ್ನತ ವ್ಯಾಸಂಗದ ವಿದ್ಯಾರ್ಥಿಗಳು ನಿರಂತರವಾಗಿ ಇದರ ಪ್ರಯೋಜನ ಪಡೆಯುತ್ತಿದ್ದಾರೆ.

ಪ್ರಬುದ್ಧ ಕರ್ನಾಟಕ, ಕನ್ನಡ ನುಡಿ, ಪರಿಷತ್ಪತ್ರಿಕೆ, ಸಾಧನೆ, ಕರ್ನಾಟಕ ಭಾರತ, ಜೀವನ ಮುಂತಾದ ಎಲ್ಲ ಹಳೆಯ ಪತ್ರಿಕೆಗಳೂ ನಮ್ಮಲ್ಲಿ ಲಭ್ಯವಿದೆ.

ಇತಿಹಾಸ ತಜ್ಞ ಎಸ್. ಶ್ರೀಕಂಠಯ್ಯ, ಪ್ರಸಿದ್ಧ ಸಾಹಿತಿಗಳಾದ ವಿ. ಸೀ. ಮತ್ತು ಎಂ. ವಿ. ಸೀ. ಮೈಸೂರು ವಿಶ್ವವಿದ್ಯಾಲಯ ಪ್ರಕಟಣೆಗಳ ಎಲ್ಲ ಸಂಗ್ರಹಗಳೊಂದಿಗೆ ಅನೇಕ ಸಾಹಿತಿ ಗಣ್ಯರು ನೀಡಿರುವ ದಾನದ ಪುಸ್ತಕಗಳಿಂದ ಪ್ರತಿಷ್ಠಾನದ ಗ್ರಂಥ ಭಂಡಾರ ಬೆಳ್ಳೂರು ಮತ್ತು ಬೆಂಗಳೂರುಗಳಲ್ಲಿ ನಡೆಯುತ್ತಿದೆ.

**(೩) ಹಸ್ತಪ್ರತಿಶಾಸ್ತ್ರ ತರಗತಿ :**

ಕರ್ನಾಟಕದ ಏಕೈಕ ಪ್ರಯತ್ನವಾಗಿ ನಡೆಯುತ್ತಿರುವ ಈ ತರಗತಿಯನ್ನು ೧೯೯೦ರಿಂದ ನಡೆಸಲಾಗುತ್ತಿದೆ. ೧೯೮೧ರಲ್ಲಿ ನಡೆಸಿದ ರಾಷ್ಟ್ರಮಟ್ಟದ 'ಹಸ್ತಪ್ರತಿಶಾಸ್ತ್ರ' ವಿಚಾರಗೋಷ್ಠಿಯ ನಿರ್ಣಯದ ಭಾಗವಾಗಿ ನಡೆಯುತ್ತಿರುವ ಈ ತರಗತಿಯಲ್ಲಿ ಪ್ರತಿವರ್ಷ ಗರಿಷ್ಠ ೧೦ ಜನ ವಿದ್ಯಾರ್ಥಿಗಳಿಗೆ ಓಲೆಗರಿ, ಕಾಗದ, ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ, ಸಂಪ್ರತಿ, ದಾಖಲೀಕರಣ ಮತ್ತು ಗ್ರಂಥಸಂಪಾದನಾ ಕೌಶಲದಲ್ಲಿ ಪರಿಣತಿಯನ್ನು ನೀಡಲಾಗುವುದು.

ಅಳಿಸಿಹೋಗಿರುವ ಈ ಕಲೆಯನ್ನು ಉಳಿಸುವ, ಮುಂದಿನ ಪೀಳಿಗೆಗೆ ಪರಿಚಯಿಸುವ ಉದ್ದೇಶದಿಂದ ಮತ್ತು ಸಂಗ್ರಹವಾಗಿರುವ ಕರ್ನಾಟಕದ ಹಸ್ತಪ್ರತಿಗಳನ್ನು, ವೈಜ್ಞಾನಿಕ ಸಂರಕ್ಷಣೆಯ ವಿಧಿವಿಧಾನಗಳಿಂದ ಸಂರಕ್ಷಿಸುವುದಕ್ಕೆ ಅರ್ಹರನ್ನು ತಯಾರು ಮಾಡುವ ಉದ್ದೇಶದಿಂದ ಈ ತರಗತಿಗಳನ್ನು ನಡೆಸಿಕೊಂಡು ಬರಲಾಗುತ್ತಿದೆ.

ಕೇವಲ ೧೦೦ ರೂ.ಗಳ ಶುಲ್ಕದಿಂದ ಆಸಕ್ತರನ್ನು ಆಕರ್ಷಿಸುವ ಉದ್ದೇಶದಿಂದ ಕನಿಷ್ಠ ಎಸ್. ಎಸ್. ಎಲ್. ಸಿ. ಅರ್ಹತೆಯೊಂದಿಗೆ ಪ್ರತಿವರ್ಷ ಅಕ್ಟೋಬರ್‌ನಿಂದ ಜನವರಿವರೆಗೆ ೪ ತಿಂಗಳ ಡಿಪ್ಲೊಮಾ ತರಬೇತಿಯಾಗಿ ಈ ತರಗತಿಗಳನ್ನು ನಡೆಸಲಾಗುತ್ತಿದೆ.

**(೪) ಪ್ರಾಚೀನ ಗ್ರಂಥಗಳ ಸಂಪಾದನೆ ಮತ್ತು ಪ್ರಕಟಣೆ :**

ಈವರೆಗೆ ೧೫ಕ್ಕೂ ಹೆಚ್ಚು ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿ, ಪರಿಷ್ಕರಿಸಿ ಪ್ರಕಟಿಸಲಾಗಿದೆ. ಪ್ರತಿಷ್ಠಾನದ ಗ್ರಂಥ ಭಂಡಾರದಲ್ಲೇ ಇದ್ದ ಮತ್ತು ವಿದ್ವಾಂಸರು ಸಂಪಾದಿಸಿ ಸಿದ್ಧಪಡಿಸಿದ ಈ ಕೆಳಕಂಡ ಅಪ್ರಕಟಿತ ಗ್ರಂಥಗಳನ್ನು ಪ್ರತಿಷ್ಠಾನ ಪ್ರಕಟಿಸಿದೆ.

| | | |
|---|---|---|
| ೧. ಸೂತಭಾರತ | ಷಟ್ಪದಿ ಕಾವ್ಯ | ಎಂ. ಜಿ. ಹೆಗ್ಗಡೆ |
| ೨. ಶ್ರೀಕೃಷ್ಣದೇವರಾಯ ದಿನಚರಿ (ಗದ್ಯ-ಕೈಫಿಯತ್ತು) | | ಸಂಪತ್ಕುಮಾರಾಚಾರ್ಯ |

| | | | |
|---|---|---|---|
| ೩. | ಚಂದ್ರಚೂಡಾಮಣಿಶತಕ | ಶತಕ | ಎಂ. ವಿ. ಸೀತಾರಾಮಯ್ಯ |
| ೪. | ಶ್ರೀನಿವಾಸ ಕಲ್ಯಾಣ | (ಗದ್ಯ-ಪದ್ಯ) | ಕೆ. ಎಂ. ಕೃಷ್ಣರಾವ್ |
| ೫. | ಮರುನ್ನಂದನ ಶತಕ | (ಶತಕ) | ಎಂ. ವಿ. ಸೀತಾರಾಮಯ್ಯ |
| ೬. | ಧ್ರುವ ಚರಿತ್ರೆ | (ಸಾಂಗತ್ಯ ಕಾವ್ಯ) | ಎನ್. ಎಸ್. ಲಕ್ಷ್ಮೀನಾರಾಯಣಭಟ್ |
| ೭. | ಕೀರ್ತನ ಕುಸುಮಾಂಜಲಿ | (ಕೀರ್ತನೆ) | ಎಂ. ವಿ. ಸೀತಾರಾಮಯ್ಯ |
| ೮. | ಪದ್ಮಿನಿ ಕಲ್ಯಾಣ | (ಸಾಂಗತ್ಯ ಕಾವ್ಯ) | ಎಸ್. ಶಿವಣ್ಣ |
| ೯. | ಬೇಟೆರಾಯ ದೀಕ್ಷಿತರ ದೇವರನಾಮಗಳು | (ಕೀರ್ತನೆ) | ಎಸ್. ರಾಮಸ್ವಾಮಿ |
| ೧೦. | ಶ್ರೀಕೃಷ್ಣಬಾಲಲೀಲೆ ಭಾಗ ೧ ಮತ್ತು ೨ | (ಬೃಹತ್ ಕೀರ್ತನ ಕಾವ್ಯ) | ಎಂ. ವಿ. ಸೀತಾರಾಮಯ್ಯ |

ಈ ಎಲ್ಲ ಗ್ರಂಥಗಳನ್ನು ಗ್ರಂಥ ಸಂಪಾದನಾ ಶಿಸ್ತಿಗೆ ಅನುಗುಣವಾಗಿ ಸಂಪಾದಿಸಲಾಗಿದ್ದು, ಪಾಠಾಂತರಗಳ ನಿಷ್ಕರ್ಷೆ, ವಿಸ್ತೃತ ಪ್ರಸ್ತಾವನೆ, ಕವಿಕಾವ್ಯ ವಿಚಾರ ಮತ್ತು ಸೂಕ್ತ ಅನುಬಂಧಗಳೊಂದಿಗೆ ಶಾಸ್ತ್ರೀಯವಾಗಿ ಸಂಪಾದಿಸಲಾಗಿದೆ.

ಕೆಲವು ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ನೂತನ ಪಾಠಗಳೊಂದಿಗೆ ಸಂಪಾದಿಸಿ ಪ್ರಕಟಿಸುವ ಕಾರ್ಯವನ್ನು ಪ್ರತಿಷ್ಠಾನ ನಡೆಸಿದೆ. ಅವುಗಳೆಂದರೆ,

೧. ಸರ್ವಜ್ಞ ವಚನಗಳು

೨. ಕುಮಾರವ್ಯಾಸಭಾರತ ಸಂಗ್ರಹ

೩. ಕವಿರಾಜಮಾರ್ಗ

ಪ್ರತಿಷ್ಠಾನದಲ್ಲಿ ಇನ್ನೂ ಹಲವಾರು ಅಪ್ರಕಟಿತ ಗ್ರಂಥಗಳಿದ್ದು ಅವುಗಳಲ್ಲಿ ಈ ಕೆಳಕಂಡವುಗಳ ಸಂಪಾದನೆಯ ಕಾರ್ಯವನ್ನು ಕೈಗೊಳ್ಳಲಾಗುತ್ತಿದೆ.

೧. ತಿಮ್ಮಪ್ಪದಾಸರ ಕೀರ್ತನೆಗಳು

೨. ವೆಂಕಟದಾಸರ ಕೀರ್ತನೆಗಳು

೩. ಪರಬ್ರಹ್ಮಪ್ರಕಾಶಿಕೆ

ಪ್ರತಿಷ್ಠಾನದ ತಜ್ಞರ ತಂಡ ಇತರರಿಗೂ ಕೆಲವು ಪ್ರಾಚೀನ ಗ್ರಂಥಗಳನ್ನು ಸಂಪ್ರತಿಮಾಡಿಸಿಕೊಡುವುದಲ್ಲದೆ ಅವರು ಅಪೇಕ್ಷಿಸಿದರೆ ಶಾಸ್ತ್ರೀಯವಾಗಿ ಸಂಪಾದಿಸುವ ಕಾರ್ಯವನ್ನು ನಡೆಸುತ್ತಿದೆ.

೧. ಡಾ॥ ಸಿದ್ಧಯ್ಯ ಪುರಾಣಿಕರಿಗಾಗಿ 'ಮಳೆಯರಾಜನ ಚರಿತ್ರೆ'.

೨. ಬಸವ ಸಮಿತಿಗಾಗಿ 'ನವರತ್ನಮಾಲಿಕೆ'

ಕಾವ್ಯಗಳನ್ನು ಸಂಪ್ರತಿಮಾಡಿ ಸಂಪಾದಿಸಿಕೊಟ್ಟಿದೆ.

**೫) ಲಕ್ಷಣಗ್ರಂಥಗಳ ರಚನೆ ಮತ್ತು ಪ್ರಕಟಣೆ :**

ಪ್ರತಿಷ್ಠಾನದ ಸಂಶೋಧನಾ ಚಟುವಟಿಕೆಗಳಲ್ಲಿ ಕಾಲಕಾಲಕ್ಕೆ ಆವಿಷ್ಕಾರಗೊಳ್ಳುವ ನೂತನ ಅಧ್ಯಯನ ಶಿಸ್ತುಗಳಿಗೆ ಅಗತ್ಯ ಲಕ್ಷಣ ಗ್ರಂಥಗಳನ್ನು ಸಿದ್ಧಪಡಿಸುವುದೂ ಒಂದಾಗಿದೆ. ೧೯೮೦ರ ದಶಕದಲ್ಲಿ 'ಹಸ್ತಪ್ರತಿಶಾಸ್ತ್ರ' ಎಂಬ ನೂತನ ಶಿಸ್ತನ್ನು ರೂಪಿಸಿದ್ದಲ್ಲದೆ 'ಮಣಿಹ', 'ಹಸ್ತಪ್ರತಿಶಾಸ್ತ್ರ' 'ಹಸ್ತಪ್ರತಿಶಾಸ್ತ್ರ ಪರಿಚಯ' ಎಂಬ ಶಾಸ್ತ್ರಗ್ರಂಥಗಳನ್ನು ಸಿದ್ಧಪಡಿಸಿ ಪ್ರಕಟಿಸಿದೆ. 'ಭಾಷಾಂತರಕಲೆ' 'ಸೃಜನಶೀಲತೆ ಮತ್ತು ಪಾಂಡಿತ್ಯ', 'ಹೊಸಗನ್ನಡದ ವ್ಯಾಕರಣ', 'ವೈಚಾರಿಕ ಜಾಗೃತಿ' ಮುಂತಾದ ಕೃತಿಗಳು ಹೊಸ ಶಿಸ್ತುಗಳಿಗೆ ಪೂರಕವಾಗಿ ರಚಿಸಿದ ಪ್ರಕಟಣೆಗಳೇ ಆಗಿವೆ. ೧೯೯೦ರ ದಶಕದಲ್ಲಿ 'ಅಂತರಶಿಸ್ತೀಯ ಸಂಶೋಧನೆಯ ಶಿಸ್ತಿ'ನ ಪರಿಕಲ್ಪನೆಗೆ ಅನುಗುಣವಾಗಿ 'ಅಂತರಶಿಸ್ತೀಯ ಸಂಶೋಧನ ವಿಧಿ ವಿಧಾನ' ಎಂಬ ಲಕ್ಷಣ ಗ್ರಂಥವನ್ನು ಪ್ರಕಟಿಸಲಾಗಿದೆ. 'ತೌಲನಿಕ ಸಾಹಿತ್ಯ'ವನ್ನು ಕುರಿತೂ ಒಂದು ಲಕ್ಷಣ ಗ್ರಂಥ ಅಚ್ಚಿನಲ್ಲಿದೆ.

**೬) 'ಕರ್ನಾಟಕ ಲೋಚನ' ವಿದ್ವತ್ ಪತ್ರಿಕೆಯ ಪ್ರಕಟಣೆ :**

೧೯೮೨ರಿಂದ ಅರ್ಧವಾರ್ಷಿಕ ಪತ್ರಿಕೆಯಾಗಿ ಪ್ರಕಟವಾಗುತ್ತಿರುವ ಈ ಪತ್ರಿಕೆ ಸಂಶೋಧನೆಗೆ ಮೀಸಲಾಗಿದೆ. ಕರ್ನಾಟಕ ಸಾಹಿತ್ಯ-ಸಂಸ್ಕೃತಿಯಲ್ಲಿ ನಡೆಯುವ ನೂತನ ಆವಿಷ್ಕಾರಗಳು, ಹೊಸ ಚಿಂತನೆಗಳು, ವಿದ್ವತ್ ಟಿಪ್ಪಣಿಗಳು, ಅಪ್ರಕಟಿತ ಕೃತಿಯ ಭಾಗಗಳು, ಸಂಶೋಧನಾ ಚಟುವಟಿಕೆಗಳ ವಿವರಗಳು, ಶಾಸ್ತ್ರಗ್ರಂಥಗಳ ವಿಮರ್ಶೆ ಹೀಗೆ ಛಂದೋಬದ್ಧ ಕವಿತೆಗಳ ರಚನೆಗೆ ಪ್ರೋತ್ಸಾಹ ನೀಡುವ ಸಮಸ್ಯಾಪೂರಣ ಮುಂತಾದ ಸಂಶೋಧನೆ-ಪಾಂಡಿತ್ಯಕ್ಕೆ ಪೂರಕವಾದ ಲೇಖನ-ಟಿಪ್ಪಣಿಗಳ ಮೂಲಕ 'ಕರ್ನಾಟಕ ಲೋಚನ' ಕರ್ನಾಟಕದ ಏಕೈಕ ಸಂಶೋಧನಾ ಪತ್ರಿಕೆಯೆನಿಸಿದೆ. ನಿಯತವಾಗಿ ಪ್ರಕಟವಾಗುತ್ತಿರುವ ಏಕೈಕ ಪತ್ರಿಕೆ ಎಂಬ ಹೆಗ್ಗಳಿಕೆಯು ಇದಕ್ಕಿದೆ.

ಈಗ ೧೮ನೇ ವರ್ಷದಲ್ಲಿ ಮುನ್ನಡೆಯುತ್ತಿದೆ. ಕಾಲಕಾಲಕ್ಕೆ ಹಲವು ವಿಶೇಷ ಸಂಚಿಕೆಗಳನ್ನು ಪ್ರಕಟಿಸಲಾಗಿದೆ. ೧೫ ವರ್ಷಗಳ ಲೇಖನಗಳ ಸೂಚಿಯನ್ನು ಪ್ರಕಟಿಸಲಾಗಿದೆ. ಸಂಶೋಧನಾ ಕೇಂದ್ರಕ್ಕೆ ಇರಲೇಬೇಕಾದ ಪ್ರಕಟಣೆಯಾಗಿ ಈ ಪತ್ರಿಕೆ ನಮ್ಮ ಸಂಶೋಧನ ಕೇಂದ್ರದ ಮುಖ್ಯ ಚಟುವಟಿಕೆಯಾಗಿದೆ.

**೭) ವಿಚಾರಗೋಷ್ಠಿಗಳು ಮತ್ತು ಉಪನ್ಯಾಸಗಳು :**

ಪ್ರತಿಷ್ಠಾನ ತನ್ನ ಧ್ಯೇಯೋದ್ದೇಶಕ್ಕೆ ಅನುಗುಣವಾಗಿ ಕಾಲಕಾಲಕ್ಕೆ ವಿಚಾರಗೋಷ್ಠಿಗಳನ್ನು, ಉಪನ್ಯಾಸಗಳನ್ನು ನಡೆಸುವುದರ ಮೂಲಕ ಸಂಶೋಧನಾ ಚಟುವಟಿಕೆಗಳನ್ನು ಸಾರ್ವಜನಿಕರಿಗೆ ತೆರೆದಿಡುತ್ತದೆ. ಈ ಕಾರ್ಯಕ್ರಮಗಳಿಗೆ ನಾಡಿನ ಎಲ್ಲ ಹಿರಿಯ ಕಿರಿಯ ವಿದ್ವಾಂಸರನ್ನು ಒಳಗೊಳ್ಳುವ ಮೂಲಕ ಸರ್ವಜನಾದರಣೀಯವಾಗಿದೆ. ವಿದ್ವತ್‌ವಲಯದಲ್ಲಿ ಸಾಹಿತ್ಯ ಸಂಶೋಧನೆಯ ಈ ಕ್ಷೇತ್ರದಲ್ಲಿ ಹೊಸ ಹೊಸ ಚಿಂತನೆಗಳನ್ನು ಬೆಳೆಸಲು ಈ ವಿಚಾರಗೋಷ್ಠಿ - ಉಪನ್ಯಾಸಗಳು ನೆರವಾಗುತ್ತವೆ.

ಈವರೆಗೆ ನಡೆಸಿರುವ ಕೆಲವು ಮುಖ್ಯ ವಿಚಾರಗೋಷ್ಠಿಗಳನ್ನು ಹೀಗೆ ಮಾಡಬಹುದು.

೧. ರಾಷ್ಟ್ರಮಟ್ಟದ 'ಹಸ್ತಪ್ರತಿಶಾಸ್ತ್ರ' ವಿಚಾರಗೋಷ್ಠಿ (೧೯೮೧)

೨. ರಾಷ್ಟ್ರಮಟ್ಟದ ಕನ್ನಡ ನವೋದಯ ಸಾಹಿತ್ಯ ವಿಚಾರಗೋಷ್ಠಿ (೧೯೮೪)

೩. ರಾಷ್ಟ್ರಮಟ್ಟದ ಪ್ರಾರಂಭಿಕ ವಿಜಯನಗರ ಸಾಮ್ರಾಜ್ಯದ ಇತಿಹಾಸ ಮತ್ತು ಸಂಸ್ಕೃತಿ 'ವಿಚಾರಗೋಷ್ಠಿ' (೧೯೮೬)

೪. 'ಕುಮಾರ ವ್ಯಾಸಭಾರತ' ಸಮಗ್ರ ಸಮೀಕ್ಷೆ (೧೯೮೭)

೫. ಕನ್ನಡ ಸಾಹಿತ್ಯದಲ್ಲಿ ಅದ್ವೈತ (೧೯೮೮)

ಇವು ಕೆಲವು ಪುಸ್ತಕರೂಪದಲ್ಲೂ ಪ್ರಕಟವಾಗಿವೆ. ಪ್ರತಿವರ್ಷವೂ ಒಂದೊಂದು ಕೆಲವೊಮ್ಮೆ ಎರಡು ಮೂರು ವಿಚಾರಗೋಷ್ಠಿಗಳನ್ನು ಪ್ರತಿಷ್ಠಾನ ನಡೆಸುತ್ತಾ ಸಂಶೋಧನಾ ಚಟುವಟಿಕೆಗಳಿಗೆ ಒತ್ತಾಸೆಯಾಗಿ ನಿಂತಿದೆ.

ಉಪನ್ಯಾಸಗಳನ್ನು ನಡೆಸುವುದೂ ಒಂದು ಮುಖ್ಯ ಚಟುವಟಿಕೆಯಾಗಿದೆ. ಎರಡು ರೀತಿಯ ಉಪನ್ಯಾಸ ಕಾರ್ಯಕ್ರಮಗಳು ಪ್ರತಿಷ್ಠಾನದಲ್ಲಿ ನಡೆಯುತ್ತಿವೆ. (೧) ದತ್ತಿ ಉಪನ್ಯಾಸಗಳು. ಇದಕ್ಕಾಗಿ ಹಲವು ಮಹನೀಯರ ಹೆಸರಿನಲ್ಲಿ (ವಿಶೇಷವಾಗಿ ಸಾಹಿತ್ಯ ಸಂಶೋಧನೆಗೆ ಸೇವೆ ಸಲ್ಲಿಸಿದ ವಿದ್ವಾಂಸರು ಉದಾ : ಡಾ|| ಡಿ. ಎಲ್. ನರಸಿಂಹಾಚಾರ್, ಎ. ನೆ. ಉಪಾಧ್ಯೆ, ಬಿ. ಎಂ. ಶ್ರೀ., ಚಂದ್ರಶೇಖರಶರ್ಮ, ಎಸ್. ಶ್ರೀಕಂಠಯ್ಯ, ಟಿ. ಎನ್. ಮಹದೇವಯ್ಯ, ಎಂ. ಜಿ. ನಂಜುಂಡಾರಾಧ್ಯ ಇತ್ಯಾದಿ) ಪುದುವಟ್ಟುಗಳಿದ್ದು ಪ್ರತಿವರ್ಷ ಇದರ ಆದಾಯದಿಂದ ಆಯಾ ವಿದ್ವಾಂಸರ ಸಾಹಿತ್ಯ ಕ್ಷೇತ್ರದ ಈಚಿನ ಚಟುವಟಿಕೆಗಳು, ಹೆಚ್ಚಿನ ಸಂಶೋಧನೆಗೆ ಅವರ ಸೇವೆ, ಇತ್ಯಾದಿ ವಿಚಾರಗಳಲ್ಲಿ ವಿದ್ವತ್‌ಪೂರ್ಣ ಉಪನ್ಯಾಸಗಳು ನಡೆಯುತ್ತಲೇ ಇರುತ್ತವೆ. (೨) ವಿಶೇಷ ಉಪನ್ಯಾಸಗಳು : ಸಾಂದರ್ಭಿಕವಾಗಿ ಗಣ್ಯ ವಿದ್ವಾಂಸರು ಬೆಂಗಳೂರಿಗೆ ಬಂದಾಗ ಅಥವಾ ಕೆಲವು ವಿಶೇಷ ಸಂದರ್ಭಗಳಲ್ಲಿ ಈ ಉಪನ್ಯಾಸಗಳನ್ನು ಉಪನ್ಯಾಸ ಮಾಲಿಕೆಯನ್ನು ನಡೆಸಲಾಗುವುದು. ಉದಾ : 'ಅಂತರಶಿಸ್ತೀಯ ಸಂಶೋಧನ ವಿಧಿ ವಿಧಾನ' ಉಪನ್ಯಾಸ ಮಾಲಿಕೆಯಲ್ಲಿ ೧೯೮೫ರಲ್ಲಿ ವಿವಿಧ ಶಿಸ್ತುಗಳಿರುವ ಈ ಶಾಸ್ತ್ರಲಕ್ಷಣಗಳನ್ನು ದಾಖಲಿಸುವ ಉಪನ್ಯಾಸಗಳು ಪ್ರತಿದಿನ ನಡೆದುವು.

ಈ ಎಲ್ಲ ಉಪನ್ಯಾಸಗಳನ್ನೂ ಪುಸ್ತಕರೂಪದಲ್ಲಿ ಪ್ರಕಟಿಸಿದೆ.

**೮. ಅಧ್ಯಯನ ಕೇಂದ್ರದ ನಿರ್ವಹಣೆ :**

ಈ ಎಲ್ಲ ಚಟುವಟಿಕೆಗಳೊಂದಿಗೆ ಇನ್ನೂ ಹಲವು ಸಾಂದರ್ಭಿಕ ಕಾರ್ಯಕ್ರಮಗಳನ್ನು ರೂಪಿಸಲು ಪ್ರತಿಷ್ಠಾನದಲ್ಲಿ ಒಂದು ವ್ಯವಸ್ಥಿತ ಅಧ್ಯಯನ ಕೇಂದ್ರವೇ ಕಾರ್ಯಪ್ರವೃತ್ತವಾಗಿದೆ. ಇದು ನಡೆಸುವ ಎಲ್ಲ ಚಟುವಟಿಕೆಗಳೂ ಸಂಶೋಧನೆ ವಿದ್ವತ್ತಿಗೆ

ಪೂರಕವಾದವುಗಳೇ ಆಗಿರುತ್ತವೆ. ಈ ಕೇಂದ್ರದ ಮೂಲಕ ಈವರೆಗೆ ನಡೆಸಿರುವ ಕೆಲವು ಕಾರ್ಯಕ್ರಮಗಳನ್ನು ಹೀಗೆ ಪಟ್ಟಿಮಾಡಬಹುದು.

*(೧) ಸಹೃದಯಗೋಷ್ಠಿ* : ಇದು ಪ್ರತಿ ತಿಂಗಳೂ ನಡೆಯುವ ಯುವ ವೇದಿಕೆ. ಯುವ ವಿದ್ವಾಂಸರನ್ನು ಕವಿ, ಲೇಖಕರನ್ನೂ ಪ್ರೋತ್ಸಾಹಿಸುವ ಉದ್ದೇಶದಿಂದ ಸಂಶೋಧನೆ ಮತ್ತು ಸೃಜನಶೀಲತೆ, ಬರಹಗಳ ವಾಚನ, ಚರ್ಚೆಗೆ ಈ ವೇದಿಕೆಯಲ್ಲಿ ಅವಕಾಶವಿರುತ್ತದೆ. ಇದು ನಿರಂತರವಾಗಿ ನಡೆಯುವ ಕಾರ್ಯಕ್ರಮ. ಇದರ ವ್ಯವಸ್ಥೆಗೆ ಸಂಚಾಲಕರಿರುತ್ತಾರೆ.

*(೨) ಸಾಹಿತ್ಯೋಪಾಸಕರು* : ಸಾಹಿತ್ಯ ಸಂಶೋಧನಾ ಕ್ಷೇತ್ರಕ್ಕೆ ಗಣನೀಯ ಸೇವೆ ಸಲ್ಲಿಸಿದ ವಿದ್ವಾಂಸರ ಉತ್ಸವಗಳನ್ನು ಪ್ರತಿಷ್ಠಾನ ವಿಶೇಷವಾಗಿ ಆಚರಿಸಿ ಆ ಮೂಲಕ ಪ್ರತಿ ತಿಂಗಳೂ ಒಬ್ಬೊಬ್ಬ ವಿದ್ವಾಂಸರನ್ನು ಕುರಿತು ಉಪನ್ಯಾಸ-ವಿಚಾರಗೋಷ್ಠಿಗಳನ್ನು ನಡೆಸಲಾಯಿತು. ಸುಮಾರು ೫೦ ಜನ ವಿದ್ವಾಂಸರನ್ನು ಕುರಿತು ನಡೆದ ವಿಶೇಷ ಕಾರ್ಯಕ್ರಮ ಹೆಚ್ಚು ಜನಪ್ರಿಯ ಕಾರ್ಯಕ್ರಮವೂ ಆಗಿತ್ತು. ಈ ಉಪನ್ಯಾಸಗಳನ್ನು ಪುಸ್ತಕರೂಪದಲ್ಲಿ ತರುವ ಯೋಜನೆ ಪ್ರಗತಿಯಲ್ಲಿದೆ.

*(೩) ಶತಮಾನೋತ್ಸವಗಳು* : ಉದ್ದೇಶಿತ ಕ್ಷೇತ್ರದಲ್ಲಿ ಸಾಧನೆ ಮಾಡಿ ಸ್ಮರಣೀಯರಾಗಿದ್ದ ವಿದ್ವಾಂಸರ ಶತಮಾನೋತ್ಸವಗಳನ್ನು ಪ್ರತಿಷ್ಠಾನ ನಿಷ್ಠೆಯಿಂದ ಆಚರಿಸಿ ಅವರ ಜೀವನ-ಸಾಧನೆಗಳನ್ನು ಇಂದಿನ ಪೀಳಿಗೆಗೆ ಪರಿಚಯಿಸುವ ಹಲವು ಕಾರ್ಯಕ್ರಮಗಳನ್ನು ನಡೆಸುತ್ತಿದೆ.

ವಚನ ಪಿತಾಮಹ ಫ. ಗು. ಹಳಕಟ್ಟಿ, ಕನ್ನಡದ ಆಚಾರ್ಯಪುರುಷ ಬಿ. ಎಂ. ಶ್ರೀಕಂಠಯ್ಯ, ಕನ್ನಡದ ಅಶ್ವಿನಿದೇವತೆಗಳೆನಿಸಿದ್ದ ಪ್ರೊ|| ಟಿ. ಎಸ್. ವೆಂಕಣ್ಣಯ್ಯ ಮತ್ತು ಪ್ರೊ|| ಎ. ಆರ್. ಕೃಷ್ಣಶಾಸ್ತ್ರೀ, ಕರ್ನಾಟಕದ ಐತಿಹಾಸಿಕ ರತ್ನ ಎಸ್. ಶ್ರೀಕಂಠಯ್ಯ, ಜ್ಞಾನಪೀಠ ಪ್ರಶಸ್ತಿ ವಿಜೇತ ಕವಿಗಳಾದ ದ. ರಾ. ಬೇಂದ್ರೆ, ಮಾಸ್ತಿವೆಂಕಟೇಶ ಅಯ್ಯಂಗಾರ್ ಇನ್ನೂ ಮುಂತಾದವರನ್ನು ಈ ಮಾಲೆಯಲ್ಲಿ ಸ್ಮರಿಸಲಾಗಿದೆ.

ಈ ಸಂಬಂಧದಲ್ಲಿ ಹಲವಾರು ಪುಸ್ತಕಗಳನ್ನು ಪ್ರಕಟಿಸಲಾಗಿದ್ದು ಅವುಗಳಲ್ಲಿ ಕೆಲವು ಹೀಗಿವೆ.

೧. ಮಣಿಹ (ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ)

೨. ಶ್ರೀನಿಧಿ (ಬಿ. ಎಂ. ಶ್ರೀ. ಸಂಸ್ಮರಣ ಸಂಪುಟ)

೩. ಬಿ. ಎಂ. ಎಸ್. ದಿ. ಮ್ಯಾನ್ ಅಂಡ್ ಹಿಸ್ ಮಿಷನ್.

೪. ಆಚಾರ್ಯ ಬಿ. ಎಂ. ಶ್ರೀ. (ಜೀವನಚರಿತ್ರೆ)

೫. ಕನ್ನಡದ ಕಣ್ವ ಬಿ. ಎಂ. ಶ್ರೀ. (ಮಕ್ಕಳಿಗಾಗಿ)

೬. ಶ್ರೀವಾಣಿ (ಬಿ. ಎಂ. ಶ್ರೀ. ಅವರ ಸೂಕ್ತಿಗಳ ಸಂಕಲನ)

೭. ಟಿ. ಎಸ್. ವೆಂಕಣ್ಣಯ್ಯ (ಜೀವನಚರಿತ್ರೆ)

೮. ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಜೀವನಚರಿತ್ರೆ)

ಕೂಡಿಸಿಕೊಂಡು ಬೆಳೆಯುತ್ತಲೇ ಇತ್ತು. ಆದರೂ ಹದಿಹರೆಯದ ಈ ವಯಸ್ಸಿನಲ್ಲಿ ಹೇಗೆ ಬೆಳೆಯಬೇಕಾಗಿತ್ತೋ ಹಾಗೆ ಬೆಳೆಯಲಿಲ್ಲ ಎಂಬುದಂತೂ ಸತ್ಯ.

ಇದೀಗ ತನ್ನ ಸ್ವಂತ ಕಟ್ಟಡಕ್ಕೆ ಪಾದಾರ್ಪಣ ಮಾಡಿರುವ ಪ್ರತಿಷ್ಠಾನ ಇನ್ನು ಮುಂದಾದರೂ ಹೆಚ್ಚಿನ ಹುರುಪು-ಉತ್ಸಾಹವನ್ನು ಪಡೆದುಕೊಂಡು ಸದಾ ಸುದ್ದಿಯಲ್ಲಿರಬೇಕಾದ ಅಗತ್ಯವಿದೆ. ಈ ಉದ್ದೇಶಕ್ಕಾಗಿ ಮೊದಲಿನಿಂದಲೂ ನಮ್ಮೊಂದಿಗಿರುವ ಸಂಸ್ಥೆಯ ಶ್ರೇಯೋಭಿವೃದ್ಧಿಗೆ ಸಹಕರಿಸುತ್ತಿರುವ ಸದಸ್ಯ ಬಂಧುಗಳೂ ಕಾರ್ಯಕರ್ತರೂ ಆದ ತಮ್ಮನ್ನು ಇಲ್ಲಿ ಈ ದಿನ ಸೇರಿಸಲಾಗಿದೆ. ತಾವು ನೀಡುವ ಅಮೂಲ್ಯ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ಈ ಭವನದ ಮುಂದಿನ ಚಟುವಟಿಕೆಗಳನ್ನು ರೂಪಿಸಲಾಗುವುದು.

ನಮಗೆ ತಮ್ಮಿಂದ ಮುಖ್ಯವಾಗಿ ಎರಡು ರೀತಿಯ ಸಲಹೆ-ಸಹಕಾರ ಬೇಕಾಗಿದೆ. ಒಂದು ಪ್ರತಿಷ್ಠಾನದ ಚಟುವಟಿಕೆಗಳಿಗೆ ಹೊಸದೇನಾದರೂ ಸೇರಿಸಲು ಸಾಧ್ಯವೇ ಎಂಬುದು. ಇನ್ನೊಂದು ಈ ಭವನವನ್ನು ಸದಾ ಚಟುವಟಿಕೆಯಲ್ಲಿಡುವುದು ಮತ್ತು ಪೂರ್ಣರೂಪಕ್ಕೆ ಆದಷ್ಟು ಬೇಗ ತರುವುದು ಹೇಗೆಂಬುದು. ತಮ್ಮ ಸಲಹೆಗಳಿಗೆ ಮೊದಲು ಈವರೆಗೆ ಈ ನಿಟ್ಟಿನಲ್ಲಿ ನಾವು ಯೋಚಿಸಿರುವುದೇನು ಎಂಬುದನ್ನು ತಮ್ಮ ಗಮನಕ್ಕೆ ತರಬಯಸುತ್ತೇನೆ.

ಪ್ರತಿಷ್ಠಾನಕ್ಕೆ ದತ್ತಿನಿಧಿಗಳು ಮತ್ತು ನಿಶ್ಚಿತ ಠೇವಣಿಗಳಿಂದ ಬರಬಹುದಾದ ಸುಮಾರು ೨೫ ಸಾವಿರ ರೂ.ಗಳನ್ನು ಬಿಟ್ಟರೆ ಬೇರಾವುದೇ ನಿರ್ದಿಷ್ಟ ಆರ್ಥಿಕ ಸಂಪನ್ಮೂಲವಿಲ್ಲ. ಸರ್ಕಾರದ ಅನುದಾನ ಪ್ರತಿ ವರ್ಷವೂ ಬರುತ್ತದೆಂದು ನೆಚ್ಚುವಂತಿಲ್ಲ. ಹಾಗೆ ನೋಡಿದರೆ ಈ ವರ್ಷ ಈವರೆಗೂ ಏನೂ ಬಂದಿಲ್ಲ. ಈ ಇಷ್ಟರಲ್ಲಿ ಕಛೇರಿ ನಡೆಯಬೇಕು. ದತ್ತಿ ಕಾರ್ಯಕ್ರಮಗಳು ನಡೆಯಬೇಕು. ಪುಸ್ತಕ ಮಾರಾಟದಿಂದ ಬರುವ ಹಣದಲ್ಲಿ ಲೋಚನ ಮುದ್ರಣವಾಗಿ ವಿತರಣೆಯಾಗುತ್ತದೆ. ಪುಸ್ತಕ ಮುದ್ರಣಕ್ಕೆ ಸಾಕಾಗುವುದಿಲ್ಲ. ಎಂ. ವಿ. ಸೀತಾರಾಮಯ್ಯನವರ ಸಮಗ್ರ ಸಾಹಿತ್ಯ ಪುಸ್ತಕಗಳನ್ನು ವರ್ಷಕ್ಕೊಂದರಂತೆ ಪ್ರಕಟಿಸುವ ಆಲೋಚನೆಯಿದ್ದರೂ ಅಗತ್ಯ ಹಣ ಸಂಗ್ರಹವಾಗುತ್ತಿಲ್ಲದಿರುವುದರಿಂದ ಕಳೆದ ಮೂರು ವರ್ಷಗಳಿಂದ ಒಂದೂ ಸಂಪುಟ ಪ್ರಕಟವಾಗಿಲ್ಲ. ಇದೀಗ ಈ ದ್ವಿದಶಮಾನೋತ್ಸವ ಯೋಜನೆಯಲ್ಲಿ ೨೦ ಪುಸ್ತಕಗಳ ಪ್ರಕಟಣೆಗಾಗಿ ಸರ್ಕಾರಕ್ಕೆ ಮನವಿ ಸಲ್ಲಿಸಿದೆ.

ಸಾಹಿತ್ಯೋಪಾಸಕರು ಯೋಜನೆಯನ್ನು ಮೂರು ವರ್ಷ ಹುರುಪಿನಿಂದ ನಡೆಸಿದೆವಾದರೂ ಇದು ಸಂಪೂರ್ಣವಾಗಿ ಸರ್ಕಾರದ ಅನುದಾನವನ್ನು ಅವಲಂಬಿಸಿರುವುದರಿಂದ ಸಕಾಲಕ್ಕೆ ಅನುದಾನಬಾರದೆ ನಿಂತು ಹೋಗಿದೆ. ಮತ್ತೆ ಪ್ರಾರಂಭಿಸಬೇಕಾಗಿದೆ.

ಹಸ್ತಪ್ರತಿಶಾಸ್ತ್ರ ತರಗತಿಗಳು ತಪ್ಪದೆ ನಡೆಯುತ್ತಿವೆ. ಮುಚ್ಚಿದ ಗ್ರಂಥಾಲಯವನ್ನು ತೆರೆಯಲಾಗಿದೆ. ಸಾರ್ವಜನಿಕರ ಅನುಕೂಲಕ್ಕಾಗಿ ಹೊಸದಾಗಿ ಉಚಿತ

ವಾಚನಾಲಯವನ್ನೂ ವ್ಯವಸ್ಥೆ ಮಾಡಿದೆ. ಈ ಭವನಕ್ಕೆ ಸ್ಥಳೀಯರನ್ನು ಆಕರ್ಷಿಸಲು ಈ ಕ್ರಮಕೈಗೊಂಡಿದೆಯಾದರೂ ಇದರ ಖರ್ಚು ತೂಗಿಸಲು ಸದ್ಯದ ಪರಿಸ್ಥಿತಿಯಲ್ಲಿ ಹಣವಿಲ್ಲದಿರುವುದರಿಂದ ಈ ವರ್ಷದ ಮಟ್ಟಿಗೆ ನಾವು ಸ್ನೇಹಿತರು, ನಾನು, ಶಂಭಣ್ಣ, ರಾಮಸ್ವಾಮಿಅಯ್ಯರ್, ಶಶಿ, ಕೃಷ್ಣಯ್ಯ, ಸೋಮಯ್ಯ ಮತ್ತು ಕುಮಾರ್ ಅವರುಗಳು ತಲಾ ೫೦-೦೦ ರೂ. ಭರಿಸುತ್ತ ಪ್ರತಿ ತಿಂಗಳ ಪೇಪರ್ ಬಿಲ್ ಪಾವತಿಸಲು ನಿರ್ಧರಿಸಿದ್ದೇವೆ. ಇವು, ನಾವು ಈವರೆಗೆ ನಡೆಸುತ್ತಿರುವ ಚಟುವಟಿಕೆಗಳು.

ಭವನದಲ್ಲಿ ಇನ್ನು ಮುಂದೆ ಪ್ರತಿ ತಿಂಗಳು ಕನಿಷ್ಟ ಎರಡು ಕಾರ್ಯಕ್ರಮಗಳನ್ನು ನಡೆಸುವ ಆಲೋಚನೆಯಿದೆ. ಒಂದು ದತ್ತಿ ಉಪನ್ಯಾಸ ಇನ್ನೊಂದು ಸಹೃದಯಗೋಷ್ಠಿ. ಇದು ಎಂ. ವಿ. ಸೀ. ಮನೆ ಬಿಟ್ಟಾಗಿನಿಂದ ನಡೆದಿಲ್ಲ. ಸ್ಥಳಾಭಾವದಿಂದ ನಿಲ್ಲಿಸಲಾಗಿತ್ತು. ಇನ್ನು ಮುಂದೆ ಪ್ರತಿ ತಿಂಗಳೂ ಒಂದು ತಿಂಗಳು ಕವಿಗೋಷ್ಠಿ, ಇನ್ನೊಂದು ತಿಂಗಳು ಸಂಪ್ರಬಂಧಗೋಷ್ಠಿಯನ್ನು ನಡೆಸಲಾಗುವುದು. ಇದರೊಂದಿಗೆ ಇತರೆ ಸಂಘ ಸಂಸ್ಥೆಗಳೂ ಈ ಸಭಾಂಗಣದಲ್ಲಿ ಕಾರ್ಯಕ್ರಮ ನಡೆಸಲು ಉಚಿತವಾಗಿ ನೀಡಲಾಗುವುದು. ಸೇವಾಶುಲ್ಕವೆಂದು ಕೇವಲ ೧೦೦ ರೂ. ಮಾತ್ರ ಪಡೆಯುವ ಯೋಚನೆಯಿದೆ. ಇದರೊಂದಿಗೆ ಕನ್ನಡ ಸಂಸ್ಕೃತಿ ಇಲಾಖೆಯಿಂದ 'ಕಾವ್ಯಕಾವೇರಿ'ಯಂತೆ ಪ್ರತಿ ತಿಂಗಳೂ ಸಾಂಸ್ಕೃತಿಕ ಕಾರ್ಯಕ್ರಮ ನಡೆಸಲು ಕೇಳುವ ಯೋಚನೆ ಇದೆ.

ಈ ಭವನ ತಾತ್ಕಾಲಿಕ. ಇದೊಂದರಲ್ಲೇ ಈಗ ಎಲ್ಲವನ್ನೂ ಹೊಂದಿಸಿದೆ. ಇದರ ಮೇಲೆ ಇನ್ನೂ ಮೂರು ಮಹಡಿಗಳು ಬರುತ್ತವೆ. ಪೂರ್ಣಪ್ರಮಾಣದ ಸಭಾಂಗಣ, ಗ್ರಂಥಾಲಯ, ಹಸ್ತಪ್ರತಿ ಸಂಗ್ರಹಾಲಯ, ಸಮಿತಿ ಕೊಠಡಿ, ಉಪನ್ಯಾಸ ಕೊಠಡಿಗಳು ಇತ್ಯಾದಿ. ಆಗ ಹಿಂದಿನ ರಸ್ತೆಯಿಂದ ಮುಖ್ಯ ದ್ವಾರವಿರುತ್ತದೆ. ಇದೆಲ್ಲ ಆದಾಗಲೇ ಎಂ. ವೀ. ಸೀ.ಯವರ ಶ್ರೀ ಭವನದ ಕನಸು ಸಂಪೂರ್ಣವಾಗುವುದು. ಅದರ ಅಂದಾಜುವೆಚ್ಚ ೩೫ ಲಕ್ಷ. ಈಗ ಈ ನೆಲಮಹಡಿಗೆ ಆರೂವರೆ ಲಕ್ಷ ವೆಚ್ಚವಾಗಿದೆ. ಇದರಲ್ಲಿ ಒಂದೂವರೆ ಲಕ್ಷ ಕಂಟ್ರಾಕ್ಟರ್‌ರವರಿಗೆ ಬಾಕಿ ಇದೆ. ಒಂದೂವರೆ ಲಕ್ಷ ವಿವಿಧ ಎಸ್. ಬಿ. ಖಾತೆಗಳಿಂದ ಸಾಲ ತೆಗೆದಿದೆ. ಈ ಸಾಲ-ಬಾಕಿ ಚುಕ್ತ ಮಾಡಲು ಈ ಕೂಡಲೆ ೩ ಲಕ್ಷ ಹೊಂದಿಸಬೇಕು. ಪ್ರತಿಷ್ಠಾನದ ಯಾವ ಖಾತೆಯಲ್ಲೂ ಈಗ ಹಣವಿಲ್ಲದೆ ಬರಿಗೈಯಾಗಿದೆ.

ವಾಸ್ತವವಾಗಿ ಮೂರು ವರ್ಷಗಳ ಹಿಂದೆಯೇ ಈ ನೆಲಮಹಡಿ ಸಿದ್ಧವಾಗಬೇಕಿತ್ತು. ೧೪-೫-೯೭ರಲ್ಲೇ ನಗರಪಾಲಿಕೆಯಿಂದ ಕಟ್ಟಡದ ನೀಲಿನಕಾಶೆ ಒಪ್ಪಿತವಾಗಿ ೨೪-೧೦-೯೭ರಂದು ಶಂಕುಸ್ಥಾಪನಾ ಸಮಾರಂಭವನ್ನು ಮಾಡಿ ಮಾರನೇ ದಿನದಿಂದಲೇ ಕೆಲಸ ಆರಂಭಿಸುವ ಆಲೋಚನೆಯಿತ್ತು. ಆ ಸಮಾರಂಭದ ದಿನವೇ ಸುಮಾರು ೧ ಲಕ್ಷ ರೂ.ಗಳ ದಾನದ ಭರವಸೆ ದೊರೆಯಿತು. ಆದರೆ ಭವನದ ಹಣಸಂಪನ್ಮೂಲ ಸಂಗ್ರಹಕ್ಕಾಗಿ ಪ್ರೊ॥ ಎಚ್. ಆರ್. ದಾಸೇಗೌಡರ ಸಂಚಾಲಕತ್ವದಲ್ಲಿ ಶ್ರೀಗಳಾದ ಸಿ. ವಿ. ಎಲ್. ಶಾಸ್ತ್ರಿ, ಎಂ. ಕೆ. ಪಾಂಡುರಂಗ ಶೆಟ್ಟಿ, ಕೆ. ಸಿ. ಎನ್.

ಚಂದ್ರಶೇಖರ್, ವಿ. ಎಸ್. ಕೃಷ್ಣಯ್ಯರ್, ಆರ್. ಎಂ. ಬಿ. ಆರಾಧ್ಯ, ವಿ. ಎಸ್. ವೆಂಕಟರಾಜು ಅವರನ್ನೊಳಗೊಂಡು ರಚಿಸಿದ ಸಂಪನ್ಮೂಲ ಸಮಿತಿಯು ಸಭೆ ನಡೆಸಿ ಯೋಜನೆಯ ಇಡೀ ಹಣ ಸಂಗ್ರಹವಾಗುವತನಕ ಕೆಲಸ ಪ್ರಾರಂಭಿಸುವುದು ಬೇಡ ಎಂದು ಅಭಿಪ್ರಾಯಪಟ್ಟಿತು. ಆದರೆ ಹಣ ಸಂಗ್ರಹಕ್ಕಾಗಿ ಒಂದು ಪತ್ರಿಕಾಗೋಷ್ಠಿ ನಡೆಸಿದ್ದನ್ನು ಬಿಟ್ಟರೆ ಬೇರೆ ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ಆದಾಯ ತೆರಿಗೆ ವಿನಾಯಿತಿ ಸೌಲಭ್ಯ ದೊರೆತ ಕೂಡಲೇ ಸಿ.ವಿ.ಎಲ್. ಶಾಸ್ತ್ರೀಯವರು ೧ ಲಕ್ಷ ರೂ.ಗಳನ್ನೂ ಜಿ. ಎಸ್. ವೆಂಕಟರಾಜುರವರು ಒಂದು ಮಹಡಿಯ ನಿರ್ಮಾಣ ವೆಚ್ಚವನ್ನು ನೀಡುವ ಭರವಸೆಯನ್ನು ಕೊಟ್ಟಿದ್ದರು. ಆದರೆ ಇವೆರಡೂ ಈವರೆಗೂ ಸಾಧ್ಯವಾಗಿಲ್ಲ. ಭರವಸೆ ನೀಡಿದವರೆಲ್ಲ ಹಣ ಕಳುಹಿಸಿ ಕಟ್ಟಡ ಏಕೆ ಪ್ರಾರಂಭಿಸಿಲ್ಲ ಎಂದು ಆತಂಕ ವ್ಯಕ್ತಪಡಿಸತೊಡಗಿದರು. ಪ್ಲಾನ್ ಸ್ಯಾಂಕ್ಷನ್‌ನ ಅಂತಿಮ ಗಡುವು ೧೫-೫-೯೯ಕ್ಕೆ ಮುಗಿಯುತ್ತಾ ಬಂದರೂ ಕಟ್ಟಡ ನಿರ್ಮಾಣದ ಬಗ್ಗೆ ಯಾವ ಪ್ರಗತಿಯೂ ಆಗದಿದ್ದಾಗ ಕಾರ್ಯ ಸಮಿತಿಯ ಮುಂದೆ ಈ ವಿಷಯ ತಂದು ಇರುವ ಹಣದಲ್ಲಿ ಕೆಲಸ ಪ್ರಾರಂಭಿಸಲು ನಿರ್ಧರಿಸಲಾಯಿತು.

ಆರ್ಕಿಟೆಕ್ಟ್ ಶ್ರೀ ಗಣೇಶಬಾಬು ಅವರ ನೇತೃತ್ವದಲ್ಲಿ ಕಡಿಮೆ ಟೆಂಡರ್ ದರ ನೀಡಿದ ಮತ್ತು ಸೇವಾ ಮನೋಭಾವದಿಂದ ಸಹಕರಿಸುವ ಅನುಭವಿ ಕಂಟ್ರಾಕ್ಟರ್ ಶ್ರೀ ಲಕ್ಷ್ಮೀನಾರಾಯಣ, ಅವರಿಗೆ ಬಹಳ ಹಿಂದೆಯೇ ಕೆಲಸ ಒಪ್ಪಿಸಿದ್ದರೂ ಕೊನೆಗೂ ೨-೫-೯೯ರಿಂದ ವಿಧ್ಯುಕ್ತವಾಗಿ ಕಾರ್ಯ ಪ್ರಾರಂಭಿಸಲಾಯಿತು. ಆನಂತರವೂ ಈವರೆಗೂ ಸಂಪನ್ಮೂಲ ಸಮಿತಿ ಒಂದು ಬಾರಿಯೂ ಸಭೆ ಸೇರಲಾಗಿಲ್ಲ. ಹಣಸಂಗ್ರಹ ಕಾರ್ಯದಲ್ಲೂ ಪ್ರಗತಿಯಾಗಲಿಲ್ಲ. ಪತ್ರಿಕಾಗೋಷ್ಠಿಯಿಂದ ಹಾಗೂ ಉದ್ಘಾಟನಾ ಸಮಾರಂಭದ ಭರವಸೆಗಳಿಂದ ಸಂಗ್ರಹವಾಗಿದ್ದ ಸುಮಾರು ೨ ಲಕ್ಷ ಮತ್ತು ಎಂ. ವಿ. ಸೀತಾರಾಮಯ್ಯನವರು ತಾವು ಇದ್ದಾಗ ಈ ಉದ್ದೇಶಕ್ಕೆ ಒಂದು ನಿಧಿ ಸ್ಥಾಪಿಸಿ ತಮಗೆ ಬಂದ ಸನ್ಮಾನಧನ, ಗೌರವಧನ ಜೊತೆಗೆ ತಾವು ಹೋದ ಸಭೆ ಸಮಾರಂಭಗಳಲ್ಲೆಲ್ಲಾ ಈ ಬಗ್ಗೆ ಮನವಿಮಾಡಿಕೊಂಡು ತಮ್ಮ ಟೋಪಿ ಕಳಿಸಿ ಸಂಗ್ರಹಿಸಿದ್ದ ೩೫ ಸಾವಿರ ರೂ.ಗಳು ಇಂದು ೧.೨೫ ಲಕ್ಷದ ನಿಧಿಯನ್ನು ಆಪತ್ಕಾಲಕ್ಕೆ ಒದಗಿಸಿಕೊಟ್ಟಿತು.

ನಮ್ಮ ನಿರೀಕ್ಷೆಯಂತೆ ಹಣ ಸಂಗ್ರಹವಾಗುತ್ತಿಲ್ಲ. ಹಿಂದಿನ ಬಿಲ್ಲಿನ ೩೦ ಸಾವಿರವನ್ನು ಕಂಟ್ರಾಕ್ಟರರಿಗೆ ಕೊಡಲು ಎರಡು ತಿಂಗಳಿಂದಲೂ ಸಾಧ್ಯವಾಗುತ್ತಿಲ್ಲ. ಈ ಪರಿಸ್ಥಿತಿಯಲ್ಲಿ ಹಣ ಸಂಗ್ರಹಕ್ಕೆ, ನಮ್ಮ ಯೋಜನೆಯ ಭವನದ ಪೂರ್ಣತೆಗೆ ಹಾಗೂ ಸಕ್ರಿಯ ಚಟುವಟಿಕೆಗಳಿಗೆ ದಯಮಾಡಿ ನಿಮ್ಮ ಅಮೂಲ್ಯ ಸಲಹೆ-ಸೂಚನೆಗಳನ್ನು ನೀಡಿ, ಬಿ. ಎಂ. ಶ್ರೀ. ಪ್ರತಿಷ್ಠಾನದ ಕೆಲಸವನ್ನು ನಿಮ್ಮ ಕೆಲಸ ಎಂದು ಭಾವಿಸಿ ಸಹಕರಿಸಬೇಕಾಗಿ ಕೋರಿಕೆ.

**ನಾ. ಗೀತಾಚಾರ್ಯ**

*ಗೌರವ ಕಾರ್ಯದರ್ಶಿ*

### ಈ ಸಭೆಯಲ್ಲಿ ಆದ ನಿರ್ಣಯಗಳು

೧. ಎಂ. ವಿ. ಸೀ. ಸಾಹಿತ್ಯ ವಾಚಿಕೆಯನ್ನು ಪ್ರಕಟಿಸುವುದು.

೨. ಕರ್ನಾಟಕ ಲೋಚನವನ್ನು ಇನ್ನಷ್ಟು ಉತ್ತಮಗೊಳಿಸಿ ಸಂಶೋಧನಾ ಪತ್ರಿಕೆಯನ್ನಾಗಿಸುವುದು.

೩. ಸಂಶೋಧನಾ ಸಾಹಿತ್ಯ ಕೃತಿಗಳ ವಾರ್ಷಿಕ ಸಮೀಕ್ಷೆಗಳನ್ನು ಪ್ರಕಟಿಸುವುದು.

೪. ಸಂಪನ್ಮೂಲ ಸಮಿತಿಯನ್ನು ಪುನಾರಚಿಸಿ ಆಸಕ್ತರನ್ನು, ಅಭಿಮಾನಿಗಳನ್ನು ಸೇರಿಸಿಕೊಂಡು ಹಣ ಸಂಗ್ರಹವನ್ನು ತೀವ್ರಗೊಳಿಸುವುದು.

೫. ಅಧ್ಯಕ್ಷರು ಸರ್ಕಾರಕ್ಕೆ ನಿಯೋಗ ಕೊಂಡೊಯ್ದು ಶಾಶ್ವತ ಅನುದಾನಕ್ಕೆ ಪ್ರಯತ್ನಿಸುವುದು.

೬. ಬಿ. ಎಂ. ಶ್ರೀ. ಕಲಾಭವನವನ್ನು ಸಾರ್ವಜನಿಕ ಕಾರ್ಯಕ್ರಮಗಳಿಗೆ ಸಾಂಕೇತಿಕ ಸೇವಾಶುಲ್ಕ ಪಡೆದು ನೀಡುವುದು.

೭. ಉಚಿತ ವಾಚನಾಲಯಕ್ಕೆ ನಗರಸಭೆಯಿಂದ ಸಹಾಯಧನ ಪಡೆಯುವುದು.

## ಜುಲೈ ೧೯೯೯ರಿಂದ ಡಿಸೆಂಬರ್ ೨೦೦೦ದವರೆಗಿನ ದತ್ತಿ ಕಾರ್ಯಕ್ರಮಗಳ ವಿವರ

| ಕ್ರಮ ಸಂಖ್ಯೆ | ದಿನಾಂಕ | ದತ್ತಿನಿಧಿ | ಉಪನ್ಯಾಸಕರು | ವಿಷಯ |
|---|---|---|---|---|
| ೧. | ೧-೧೨-೧೯೯೯ | ಎಂ. ಜಿ. ನಂಜುಂಡಾ-ರಾಧ್ಯರ ಸ್ಮಾರಕ ದತ್ತಿ | ಎಚ್. ವಿ. ನಾಗರಾಜರಾವ್ | ಎಂ. ಜಿ. ನಂಜುಂಡಾರಾಧ್ಯರ ಕೃತಿಗಳು |
| ೨. | ೨೨-೪-೨೦೦೦ | ಶಂಬಾ ಜೋಷಿ ಸ್ಮಾರಕ ದತ್ತಿ | ನಿಂಗಣ್ಣ ಸಣ್ಣಕ್ಕಿ | ಶಂಬಾ ಜೋಶಿಯವರ ಸಾಹಿತ್ಯದಲ್ಲಿ ಗ್ರಾಮದೇವತೆಗಳ ಚಿಂತನೆ |
| ೩. | ೫-೩-೨೦೦೦ | ಶ್ರೀ ಟಿ. ಎನ್. ಮಹದೇವಯ್ಯ ದತ್ತಿ | ವಿವಿಧ ವಿದ್ವಾಂಸರು | ಟಿ. ಎನ್. ಎಂ. ಸಾಹಿತ್ಯ ವಿಚಾರಗೋಷ್ಠಿ |
| ೪. | ೨೯-೪-೨೦೦೦ | ದ್ವಿದಶಮಾನೋತ್ಸವ ಕಾರ್ಯಕ್ರಮ : ಸೋಸಲೆ ಅಯ್ಯಾಶಾಸ್ತ್ರಿ ಸ್ಮಾರಕ ದತ್ತಿ ಉಪನ್ಯಾಸ | ಪ್ರೊ|| ಕೆ. ಆರ್. ಸುಧೀಂದ್ರಶರ್ಮ | ಸೋಸಲೆ ಅಯ್ಯಾಶಾಸ್ತ್ರಿಗಳ ನಾಟಕ |

***(೪) ಸಂಸ್ಮರಣೆಗಳು*** : ಸಾಹಿತ್ಯ ಸಂಶೋಧನೆಗೆ ಗಣನೀಯ ಸೇವೆ ಸಲ್ಲಿಸಿದ ಖ್ಯಾತಿವೆತ್ತ ಹಿರಿಯ ವಿದ್ವಾಂಸರು ನಿಧನರಾದಾಗ ಅವರ ಸಾಧನೆಗಳನ್ನು ಜನತೆಗೆ ಪರಿಚಯಿಸುವ ವಿಶೇಷ ಸಂಸ್ಮರಣೆಯ ಕಾರ್ಯಕ್ರಮಗಳನ್ನು ಪ್ರತಿಷ್ಠಾನ ಹಮ್ಮಿಕೊಂಡು ಸಾಹಿತ್ಯ-ಸಂಶೋಧನ ಚಟುವಟಿಕೆಗಳನ್ನು ಜನಮನದಲ್ಲಿ ಬೇರೂರುವಂತೆ ಮಾಡಲಾಗುತ್ತಿದೆ. ಇಡೀ ವರ್ಷ ಪ್ರತಿ ತಿಂಗಳೂ ಉಪನ್ಯಾಸಮಾಲೆ ವಿಚಾರಗೋಷ್ಠಿಗಳನ್ನು ನಡೆಸಿ ಕೊನೆಯಲ್ಲಿ ಇವನ್ನೆಲ್ಲ ಪುಸ್ತಕರೂಪದಲ್ಲಿ ಪ್ರಕಟಿಸಲಾಗುತ್ತದೆ.

ಈವರೆಗೆ ಪ್ರಕಟವಾಗಿರುವ ಪುಸ್ತಕಗಳು ಈ ರೀತಿ ಇವೆ.

೧. ಬೇಂದ್ರೆ ಸ್ಮೃತಿ

೨. ಮಾಸ್ತಿ ಸ್ಮರಣೆ

೩. ನವ್ಯಸ್ಫೂರ್ತಿ (ಗೋಕಾಕ್ ಕುರಿತು)

೪. ಶಂಬಾಕೃತಿ ಸಮೀಕ್ಷೆ

೫. ಎಂ. ವಿ. ಸೀ. ಸಂಸ್ಮರಣೆ

೬. ಕುವೆಂಪುಪೆಂಪು (ಸಿದ್ಧತೆಯಲ್ಲಿದೆ)

೭. ಕಾರಂತಕಿರಣ (ಸಿದ್ಧತೆಯಲ್ಲಿದೆ)

ಹೀಗೆ ಹಲವು ಯೋಜನೆಯ ಮೂಲಕ ಪ್ರತಿಷ್ಠಾನ ನಿರಂತರವಾದ ಸಾಹಿತ್ಯ-ಸಂಶೋಧನ ಚಟುವಟಿಕೆಗಳನ್ನು ನಡೆಸಿಕೊಂಡು ಬರುವುದರ ಮೂಲಕ ಸಾಮಾನ್ಯ ಜನರಲ್ಲೂ ಸಂಶೋಧನ ಸಾಹಿತ್ಯದತ್ತ ಆಸಕ್ತಿ ಮೂಡುವಂತೆ ಮಾಡಲು ಶ್ರಮಿಸುತ್ತಿದೆ.

ಪ್ರತಿಷ್ಠಾನದಲ್ಲಿ ಹಲವು ಯೋಜನೆಗಳು ಯೋಜನೆಗಳ ಹಂತದಲ್ಲೇ ಇದ್ದು ಕಾರ್ಯ ಪ್ರಗತಿಗೆ ಸಂಪನ್ಮೂಲದ ಕೊರತೆಯಿದೆ.

ಪ್ರತಿಷ್ಠಾನ ಹಮ್ಮಿಕೊಳ್ಳುವ ಯಾವುದೇ ಯೋಜನೆಯನ್ನು ಕಾರ್ಯಗತಗೊಳಿಸಲು ತಜ್ಞರ, ವಿದ್ವಾಂಸರ, ಸಂಶೋಧಕರ ಮತ್ತು ಆಸಕ್ತರ ಸಕ್ರಿಯ ಸ್ವಯಂಸೇವಾ ತಂಡವೇ ಪ್ರತಿಷ್ಠಾನದಲ್ಲಿ ಕಾರ್ಯನಿರತವಾಗಿದೆ. ಸುಸಜ್ಜಿತ ಕಟ್ಟಡ, ಗ್ರಂಥಾಲಯ, ಹಸ್ತಪ್ರತಿಭಂಡಾರ, ಸಂಶೋಧನ ಕೇಂದ್ರಗಳ ಸೌಲಭ್ಯವೂ ಇದೆ.

ಯೋಜನೆಗಳನ್ನು ಕಾರ್ಯಗತಗೊಳಿಸಲು ಆರ್ಥಿಕ ಸಂಪನ್ಮೂಲದ ಕೊರತೆಯೊಂದನ್ನು ಬಿಟ್ಟರೆ ಉಳಿದೆಲ್ಲ ಸೌಲಭ್ಯಗಳೂ ಪ್ರತಿಷ್ಠಾನದಲ್ಲಿವೆ. ಈ ಸೌಲಭ್ಯಕ್ಕಾಗಿ ಕೇಂದ್ರ ರಾಜ್ಯ ಸರ್ಕಾರಗಳನ್ನು ಪ್ರಾರ್ಥಿಸಲಾಗಿದೆ. ವಿಶ್ವವಿದ್ಯಾನಿಲಯದ ಮಾನ್ಯತೆ ದೊರೆತರೆ ವಿಶ್ವವಿದ್ಯಾನಿಲಯಗಳ ಮತ್ತು ಯು. ಜಿ. ಸಿ.ಯನ್ನು ಅನುದಾನಕ್ಕಾಗಿ ಪ್ರಾರ್ಥಿಸಲು ಅನುಕೂಲವಾಗುತ್ತದೆ.

ನಾ. ಗೀತಾಚಾರ್ಯ

*ಗೌರವ ಕಾರ್ಯದರ್ಶಿ*

# ಬಿ.ಎಂ.ಶ್ರೀ. ಕಲಾಭವನದ ನೆಲಅಂತಸ್ತಿನ ಉದ್ಘಾಟನೆ



ಹಿರಿಯ ಸಾಹಿತಿ ದಿವಂಗತ ಎಂ. ವಿ. ಸೀತಾರಾಮಯ್ಯನವರು ಸ್ಥಾಪಿಸಿದ ಬಿ. ಎಂ. ಶ್ರೀ. ಪ್ರತಿಷ್ಠಾನವು ನಗರದ ನರಸಿಂಹರಾಜಾ ಕಾಲೋನಿಯಲ್ಲಿ ನಿರ್ಮಿಸುತ್ತಿರುವ ಸ್ವಂತ ಕಟ್ಟಡ ಬಿ. ಎಂ. ಶ್ರೀ. ಕಲಾಭವನದ ನೆಲ ಅಂತಸ್ತಿನ ಕಟ್ಟಡವನ್ನು ಬೆಂಗಳೂರು ಮಹಾನಗರ ಪಾಲಿಕೆಯ ಮಹಾಪೌರ ಎಂ. ರಾಮಚಂದ್ರಪ್ಪ ಫೆಬ್ರವರಿ ೩ರಂದು ಬೆಳಿಗ್ಗೆ ಉದ್ಘಾಟಿಸಿ ಬಿ. ಎಂ. ಶ್ರೀ. ಕಲಾಭವನ ನಿರ್ಮಾಣಕ್ಕೆ ಮಹಾನಗರ ಪಾಲಿಕೆಯ ವತಿಯಿಂದ ಮಾಡಬಹುದಾದ ಆರ್ಥಿಕ ನೆರವಿನ ಭರವಸೆಯನ್ನು ವ್ಯಕ್ತಮಾಡಿದರು.

ಈ ಕಾರ್ಯಕ್ರಮದ ಅಂಗವಾಗಿ ಹೊರತರಲಾದ "ಲೋಚನ ಲೇಖನ ಸೂಚಿ" ಮತ್ತು ಅಂತರ ಶಿಸ್ತೀಯ ಸಂಶೋಧನಾ ವಿಧಿ-ವಿಧಾನಗಳು ಎಂಬ ಕೃತಿಗಳನ್ನು ನಾಡಿನ ಹೆಸರಾಂತ ವಿದ್ವಾಂಸರಾದ ಡಾ॥ ಟಿ.ವಿ.ವೆಂಕಟಾಚಲಶಾಸ್ತ್ರೀಯವರು ಬಿಡುಗಡೆ ಮಾಡಿದರು.

ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರೂ ಆದ ಕ.ಸಾ.ಪ. ಅಧ್ಯಕ್ಷ ಎನ್. ಬಸವಾರಾಧ್ಯ ಅವರು ೩೫ ಲಕ್ಷ ರೂ.ಗಳ ಕಟ್ಟಡ ಪೂರ್ಣಗೊಂಡಾಗ ಸುಸಜ್ಜಿತ ಗ್ರಂಥಾಲಯ, ಪ್ರಾಚೀನ ಹಸ್ತ ಪ್ರತಿಗಳ ಸ್ಥಿರವಸ್ತು ಸಂಗ್ರಹಾಲಯ, ಸಂಶೋಧನಾ ಕೇಂದ್ರಗಳನ್ನು ಒಳಗೊಳ್ಳಲಿದ್ದು, ಸಾಹಿತ್ಯಿಕ-ಸಾಂಸ್ಕೃತಿಕ ಕೇಂದ್ರವಾಗಲಿದೆ ಎಂದರು.

ನಿವೃತ್ತ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಅವರು ಅಧ್ಯಕ್ಷತೆ ವಹಿಸಿದ್ದ ಈ ಸಮಾರಂಭದಲ್ಲಿ ಶತಾಯುಷಿ ಎ. ಎನ್. ಮೂರ್ತಿರಾವ್ ಅವರನ್ನು ಸನ್ಮಾನಿಸಲಾಯಿತು. ಸಮಾರಂಭದಲ್ಲಿ ಸ್ಥಳೀಯ ಶಾಸಕ ಕೆ. ಎನ್. ಸುಬ್ಬಾರೆಡ್ಡಿ, ಮಾಜಿ ಸಚಿವರಾದ ಪಿ. ಎಸ್. ಕೃಷ್ಣ ಅಯ್ಯರ್, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ವೈ. ಕೆ. ಮುದ್ದುಕೃಷ್ಣ ಮೊದಲಾದ ಗಣ್ಯರು ಭಾಗವಹಿಸಿದ್ದರು. ಪ್ರತಿಷ್ಠಾನದ ಪ್ರ॥ ಕಾರ್ಯದರ್ಶಿಗಳಾದ ಪ್ರೊ॥ ಡಿ. ಲಿಂಗಯ್ಯ ಸ್ವಾಗತಿಸಿದರು. ಗೌ॥ ಕಾರ್ಯದರ್ಶಿ

ಪ್ರೊ|| ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿದರು. ಕಾರ್ಯಕ್ರಮದ ಅಂಗವಾಗಿ ಪುರಾತನ ಹಸ್ತಪ್ರತಿಗಳ ಪ್ರದರ್ಶನವನ್ನು ವ್ಯವಸ್ಥೆಗೊಳಿಸಲಾಗಿದ್ದಿತು.

**ಸುಗಮ ಸಂಗೀತ**

ಕಟ್ಟಡದ ಉದ್ಘಾಟನಾ ಸಮಾರಂಭದ ಸಾಂಸ್ಕೃತಿಕ ಕಾರ್ಯಕ್ರಮಗಳ ಅಂಗವಾಗಿ ಫೆ. ೪ರಂದು ಗಾಯಕಿ ಗಾಯತ್ರಿ ರಾಮಣ್ಣ ಇವರಿಂದ ಸುಗಮ ಸಂಗೀತ ಕಾರ್ಯಕ್ರಮ ಜರುಗಿತು. ಕು|| ಸುಷ್ಮಾ ಸಹಗಾಯಕಿಯಾಗಿ, ರಾಧಾಕೃಷ್ಣ ರಾವ್ ಕ್ಯಾಸಿಯೊ, ರಾಮಣ್ಣ ತಬಲ ವಾದಕರಾಗಿ ಪಾಲ್ಗೊಂಡಿದ್ದರು. ೫ರಂದು ಶ್ರೀಮತಿ ಜಯಾಪಾರ್ಥಸಾರಥಿ ತಂಡದವರಿಂದ ಕನ್ನಡ ಗೀತೆಗಳ ಗಾಯನವೂ, ೬ರಂದು ನೇತ್ರಾ ಎಸ್. ನಾಥ್ ಅವರಿಂದ ಹಿಂದೂಸ್ತಾನಿ ಗಾಯನವೂ ನಡೆಯಿತು.

ಕೃಪೆ : **'ಬಹುಜನ ಕನ್ನಡಿಗರು', ಫೆಬ್ರವರಿ ೧೬, ೨೦೦೧**

## ಎಂ. ವಿ. ಸೀ. ಬದುಕು, ಸಾಹಿತ್ಯ ಸ್ಮರಣೆ

ಕನ್ನಡ ಸಾಹಿತ್ಯಲೋಕಕ್ಕೆ ಎಂ. ವಿ. ಸೀತಾರಾಮಯ್ಯನವರ ಕೊಡುಗೆ ಅನನ್ಯವಾದದ್ದೆಂದು ವಿಮರ್ಶಕ ಪ್ರೊ|| ಎಲ್. ಎಸ್. ಶೇಷಗಿರಿರಾವ್ ಇಂದಿಲ್ಲಿ ಹೇಳಿದರು.

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ಏರ್ಪಡಿಸಿದ್ದ ಎಂ. ವಿ. ಸೀ. ಸಂಸ್ಮರಣೆ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಶಾಸ್ತ್ರಗ್ರಂಥ, ಸಂಶೋಧನೆ ಜತೆಜತೆಗೆ ಸೃಜನಶೀಲ ಸಾಹಿತ್ಯದಲ್ಲೂ ಕೃಷಿ ಮಾಡಿದ ಬೆರಳೆಣಿಕೆಯಷ್ಟು ಸಾಹಿತಿಗಳಲ್ಲಿ ಎಂ. ವಿ. ಸೀ. ಪ್ರಮುಖರೆಂದು ಹೇಳಿದರು. ಹಿಂದಿನ ಹಾಗೂ ಮುಂದಿನ ತಲೆಮಾರಿನ ಸಾಹಿತ್ಯಕ್ಕೆ ಸೇತುವೆಯಾಗಿ ಎಂ. ವಿ. ಸೀ. ದುಡಿದರು. ತಮ್ಮ ಅನಾರೋಗ್ಯದ ನಡುವೆಯೂ ಕನ್ನಡವನ್ನು ಕಟ್ಟುವ ಕೆಲಸ ಕೊನೆಯುಸಿರಿರುವವರೆಗೂ ಮಾಡಿದರೆಂದರು.

ಕಥೆ, ಕವನ, ಕಾದಂಬರಿ, ನಾಟಕ ಪ್ರಕಾರಗಳಲ್ಲಿ ವಿಶಿಷ್ಟ ರಚನೆ ಮಾಡಿದ ಎಂ. ವಿ. ಸೀ.ಯವರ ಸಾಮಾಜಿಕ ಕಳಕಳಿ ಅಸಾಧಾರಣವಾದದ್ದು. ಅಸ್ಪೃಶ್ಯತೆ ವಿರುದ್ಧ ತಮ್ಮ ಕತೆಗಳ ಮೂಲಕ ದನಿ ಎತ್ತಿದ್ದರು. ಅನ್ಯಾಯದ ವಿರುದ್ಧ ಕಾವ್ಯದ ಮೂಲಕ ಪ್ರತಿಭಟಿಸಿದರೆಂದು ವಿವರಿಸಿದರು.

ಬಿ. ಎಂ. ಶ್ರೀ. ಪ್ರತಿಷ್ಠಾನ ಹುಟ್ಟುಹಾಕಿ ಅದನ್ನು ಬೆಳೆಸಲು ಅವರು ಪಟ್ಟ ಶ್ರಮ ಮರೆಯುವುದಕ್ಕಾಗುವುದಿಲ್ಲ. ಎಷ್ಟೇ ಕಷ್ಟ ಬಂದರೂ ಅದನ್ನೆದುರಿಸಿ ಸಂಸ್ಥೆಗಾಗಿ ಜೀವ ತೇಯ್ದರೆಂದು ಹೇಳಿದರು. ಪ್ರತಿಷ್ಠಾನದಿಂದ ಎಂ. ವಿ. ಸೀ.ಯವರ ಕೃತಿಗಳ ಆಯ್ದ ಭಾಗಗಳ ವಾಚಿಕೆ ಪ್ರಕಟಿಸುವ ಕೆಲಸ ತುರ್ತಾಗಿ ಆಗಬೇಕಿದೆ. ಸಂಶೋಧನಾ ಗ್ರಂಥಗಳ ವಾರ್ಷಿಕ ಸಮೀಕ್ಷೆ, ಹಸ್ತಪ್ರತಿಗಳ ಸಂಗ್ರಹ, ಅದರ ಅನುಕ್ರಮ ಜೋಡಣೆಯೂ ಆಗಬೇಕಿದೆ ಎಂದು ನುಡಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ ಜಿ. ನಾರಾಯಣ ಮಾತನಾಡಿ ಎಂ. ವಿ. ಸೀ.ಯವರ ಕೆಲಸದ ಅಚ್ಚುಕಟ್ಟು ಮಾರ್ಗದರ್ಶನೀಯವಾದದ್ದೆಂದರು. ಅವರು ಕಂಡ ಕನಸು ಇಂದು ನನಸಾಗಿದೆ. ಅವರ ಶಿಷ್ಯ ಗೀತಾಚಾರ್ಯ ಅದನ್ನು ನಿಷ್ಠೆಯಿಂದ ಪಾಲಿಸಿದ್ದಾರೆ. ಪ್ರತಿಷ್ಠಾನ ಖಂಡಿತ ಬೆಳೆಯುತ್ತದೆ. ಕನ್ನಡಕ್ಕಾಗಿ ಸೀತಾರಾಮಯ್ಯ ಅವರು ಶ್ರಮಿಸಿದರು. ಕನ್ನಡಕ್ಕೆ ಶಕ್ತಿ ತಂದು ಕೊಡಲು ಪ್ರಯತ್ನಿಸಿದರು. ಅವರು ಹಾಕಿಕೊಟ್ಟ ಮಾರ್ಗದಲ್ಲಿ ನಾವು ಮುಂದುವರೆಯಬೇಕಿದೆ ಎಂದರು. ಪ್ರತಿಷ್ಠಾನಕ್ಕೆ ಆರ್ಥಿಕ ಬಲ ತಂದು ಕೊಡಲು ಎಲ್ಲರೂ ಶ್ರಮಿಸಬೇಕು. ಸಕ್ರಿಯವಾಗಿ ತೊಡಗಬೇಕು ಎಂದರು. ಸಾಹಿತ್ಯ ಸಂಸ್ಥೆಗಳು ರಾಜಕೀಯ ಸಂಪರ್ಕ ಇಟ್ಟುಕೊಳ್ಳದೇ ಹೋದಲ್ಲಿ ಯಾವುದೇ ಕೆಲಸ ಮಾಡಲು ಸಾಧ್ಯವಾಗುವುದಿಲ್ಲ. ಇದನ್ನು ಸಾಹಿತ್ಯ ಸಂಘಟನೆಗಳು ಮನಗಾಣಬೇಕಿದೆ ಎಂದು ಹೇಳಿದರು.

ಸಭೆಯಲ್ಲಿ ಉಪಸ್ಥಿತರಿದ್ದ ಹಲವು ಗಣ್ಯರು ಅಮೂಲ್ಯ ಸಲಹೆಗಳನ್ನು ನೀಡಿ, ನಿರ್ಣಯಗಳನ್ನು ಮಂಡಿಸಿದರು.

ಕೃಪೆ : **ಉದಯವಾಣಿ, ೧೩-೩-೨೦೦೦ ಮತ್ತು ಬಹುಜನ ಕನ್ನಡಿಗರು**

## ಎಂ.ವಿ.ಸೀ. ಸಂಸ್ಮರಣೆ ಸಂದರ್ಭದಲ್ಲಿ ನಡೆದ 'ಪ್ರತಿಷ್ಠಾನ ಮುಂದೇನು ? - ಸಮಾಲೋಚನಾ ಸಭೆ'ಯ ಪ್ರಾಸ್ತಾವಿಕ ಮಾತುಗಳು

ಆತ್ಮೀಯರೆ,

ಈ ದಿನ ಪ್ರತಿಷ್ಠಾನಕ್ಕೊಂದು ಶುಭದಿನ. ಇಪ್ಪತ್ತು ವರ್ಷಗಳನ್ನು ಪೂರೈಸಿರುವ ಪ್ರತಿಷ್ಠಾನ ತನ್ನ ದ್ವಿದಶಮಾನೋತ್ಸವ ಸಂದರ್ಭದಲ್ಲಿ ಸಂಸ್ಥಾಪಕರಾದ ಎಂ. ವಿ. ಸೀತಾರಾಮಯ್ಯನವರ ಸಂಸ್ಮರಣೆಯನ್ನು ಅವರ ಕನಸಿನ ಸಾಕಾರರೂಪವಾದ ಪ್ರತಿಷ್ಠಾನದ ಸ್ವಂತ ಕಟ್ಟಡವಾದ ಬಿ. ಎಂ. ಶ್ರೀ. ಭವನದಲ್ಲಿ ನಡೆಸುತ್ತಿರುವ ಸುದಿನ. ಈ ದಿನಕ್ಕಾಗಿ ಅವರು ಸಂಸ್ಥೆಯನ್ನು ನಮ್ಮ ಕೈಗೆ ಕೊಟ್ಟುಹೋದ ಮೇಲೆ ಹತ್ತು ವರ್ಷಗಳನ್ನೇ ಕಾಯಬೇಕಾಯಿತು.

ಸಂಸ್ಥಾಪಕರು ಇರುವವರೆಗೆ ಅವರ ಮನೆಯಲ್ಲೇ ಅವರ ಕಣ್ಣೆದುರೇ ಸಂಪುಷ್ಟವಾಗಿ ಬೆಳೆಯುತ್ತಿದ್ದ ಪ್ರತಿಷ್ಠಾನ ಆ ನಂತರ, ಹಲವು ಕಡೆ ಆಶ್ರಯವನ್ನು ಪಡೆಯಬೇಕಾಯಿತು. ಈ ಅನ್ಯಾಶ್ರಯದ ಕಾರಣದಿಂದಲೋ ಏನೋ ತನ್ನ ಮೊದಲಿನ ಹುರುಪನ್ನೂ, ಉತ್ಸಾಹವನ್ನೂ ಈವರೆಗೂ ಪಡೆದುಕೊಳ್ಳಲಾಗಿರಲಿಲ್ಲ. ಎಷ್ಟೋ ಜನರಿಗೆ ಪ್ರತಿಷ್ಠಾನ ಇದೆಯೇ? ಎನ್ನಿಸುವಷ್ಟರಮಟ್ಟಿಗೆ (ಹಲವು ಕಡೆ ಹಲವರು ನನ್ನನ್ನು ಈ ರೀತಿ ಪ್ರಶ್ನಿಸಿರುವುದುಂಟು) ಹೆಚ್ಚು ಸದ್ದು ಮಾಡದೆ ಇದ್ದರೂ ಯಾವ ಚಟುವಟಿಕೆಗಳನ್ನೂ ನಿಲ್ಲಿಸದೆ, ಬದಲಿಗೆ ಸಾಹಿತ್ಯೋಪಾಸಕರಂತಹ ಹೊಸ ಚಟುವಟಿಕೆಗಳನ್ನು

| | | | | |
|---|---|---|---|---|
| ೫. | ೧೦-೬-೨೦೦೦ | ಬೇಟೆರಾಯ ದೀಕ್ಷಿತ ಸ್ಮಾರಕ ದತ್ತಿ | ಮಲ್ಲೇಪುರಂ ಜಿ. ವೆಂಕಟೇಶಯ್ಯ | 'ಬೇಟೆರಾಯ ದೀಕ್ಷಿತರ ಶಾಕುಂತಲ ನಾಟಕ' |
| ೬. | ೧೭-೭-೨೦೦೦ | ಕನ್ನಡ ಸಂಶೋಧನಾ ಸಾಹಿತ್ಯ ದತ್ತಿ (ಅನಂತರಂಗ ಪ್ರತಿಷ್ಠಾನ) | ಎಂ. ವೈ. ಧರ್ಮಪಾಲ್ | ಸಿರಿಭೂವಲಯ |
| ೭. | ೩೦-೭-೨೦೦೦ | ಚಂದ್ರಶೇಖರ ಶರ್ಮ ಸ್ಮಾರಕ ದತ್ತಿ | ಡಾ॥ ಶ್ರೀನಿವಾಸ ಹಾವನೂರ | ಚಂದ್ರಶೇಖರ ಶರ್ಮರ ಬದುಕು-ಬರಹ |
| ೮. | ೯-೯-೨೦೦೦ | ಡಿ.ಎಲ್.ನರಸಿಂಹಾಚಾರ್ ಸ್ಮಾರಕ ದತ್ತಿ ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿ ವಿತರಣೆ ರಾಸ ಸಾಹಿತ್ಯ ದತ್ತಿ ವಿಮರ್ಶಾ ಸ್ಪರ್ಧೆ ಬಹುಮಾನ | ಡಾ॥ ಎನ್.ಎಸ್. ತಾರಾನಾಥ್ | ಭಾಷೆ, ವ್ಯಾಕರಣ, ಛಂದಸ್ಸಿಗೆ ಡಿ. ಎಲ್. ಎನ್. ಕೊಡುಗೆ |
| ೯. | ೪-೧೦-೨೦೦೦ | ಎಸ್. ಶ್ರೀಕಂಠಯ್ಯ ದತ್ತಿ ನಿಧಿ | ಡಾ॥ ಎಸ್. ನಾಗರಾಜ್ | ಕರ್ನಾಟಕದಲ್ಲಿ ನಾಗರೀಕತೆ ಪ್ರಾರಂಭಿಕ ಘಟ್ಟಗಳು |
| ೧೦. | ೫-೧೦-೨೦೦೦ | ಡಾ॥ ಅ. ನೇ. ಉಪಾಧ್ಯೆ ಸ್ಮಾರಕ ದತ್ತಿ | ಶ್ರೀಮತಿ ವಿ. ರಾಣಿ ಗೋವಿಂದರಾಜು | ಅ. ನೇ. ಉಪಾಧ್ಯೆ ಯವರ ಬದುಕು-ಬರಹ |
| ೧೧. | ೨೫-೧೧-೨೦೦೦ | ಜಿ. ಪಿ. ರಾಜರತ್ನಂ ಮತ್ತು ವೆಂಕಟರಂಗಪ್ಪ ಸ್ಮಾರಕ ದತ್ತಿ | ಪ್ರೊ॥ ಜಿ. ಅಬ್ದುಲ್ ಬಷೀರ್ | ತತ್ವಪದಕಾರರು ಮತ್ತು ಮತೀಯ ಸಹಿಷ್ಣುತೆ |
| ೧೨. | ೨೬-೧೧-೨೦೦೦ | ಬೆಳ್ಳೂರುಶಾಖೆಯ ಕಾರ್ಯಕ್ರಮ ಕನ್ನಡ ರಾಜ್ಯೋತ್ಸವ | ಪ್ರೊ॥ ರಾಜೇಶ್ವರಿಗೌಡ | ಆದಿಚುಂಚನಗಿರಿ ಸಾಂಸ್ಕೃತಿಕ ಕೇಂದ್ರವಾಗಿ |

## ದಾನಗಳು

### ೧. ಕಟ್ಟಡ ನಿಧಿ ಸಂಗ್ರಹ

| | | |
|---|---|---|
| ೧) | ಪ್ರೊ॥ ಎಲ್. ಎಸ್. ಶೇಷಗಿರಿರಾವ್, ಬೆಂಗಳೂರು | ೧,೦೦೦-೦೦ |
| ೨) | ಶ್ರೀ ಎಂ. ಜಿ. ನಾಗರಾಜ್, ಬೆಂಗಳೂರು | ೧,೦೦೦-೦೦ |

| | | |
|---|---|---|
| ೩) | ಶ್ರೀ ಎಸ್. ಟಿ. ರಾಧಾಕೃಷ್ಣ, ಬೆಂಗಳೂರು | ೨೫,೦೦೦-೦೦ |
| ೪) | ಶ್ರೀ ಎಸ್. ಜಿ. ವಾಸುದೇವರಾವ್, ಬೆಂಗಳೂರು | ೨೫೦-೦೦ |
| ೫) | ಪ್ರೊ॥ ಬಿ. ರಾಮಸ್ವಾಮಿ, ಹೈದರಾಬಾದ್ | ೫,೧೦೧-೦೦ |
| ೬) | ಶ್ರೀ ಸಿ. ಸೋಮಶೇಖರ್, ಬೆಂಗಳೂರು | ೧೦,೦೦೦-೦೦ |
| ೭) | ಶ್ರೀಮತಿ ಎಸ್. ಜಯಲಕ್ಷ್ಮಮ್ಮ, ಬೆಂಗಳೂರು | ೫,೦೦೧-೦೦ |
| ೮) | ಶ್ರೀ ಎಸ್. ವಿ. ಶ್ರೀನಿವಾಸರಾವ್, ಬೆಂಗಳೂರು | ೧,೦೦೦-೦೦ |
| ೯) | ನಾಗಾರ್ಜುನ ಫರ್ಟಿಲೈಸರ್ಸ್, ಬೆಂಗಳೂರು | ೧೦,೦೦೦-೦೦ |
| ೧೦) | ಪ್ರೊ॥ ನಾ. ಗೀತಾಚಾರ್ಯ, ಬೆಂಗಳೂರು | ೫೦೦-೦೦ |
| ೧೧) | ಶ್ರೀ ಎಸ್. ಆರ್. ಆರ್. ಕೆ. ಶರ್ಮ, ಬೆಂಗಳೂರು | ೫,೦೦೦-೦೦ |
| ೧೨) | ಮೆ॥ ಬಳ್ಳಾರಿ ಸ್ಟೀಲ್ಸ್, ಬೆಂಗಳೂರು | ೨೫,೦೦೦-೦೦ |
| ೧೩) | ಪ್ರೊ॥ ಡಿ. ಲಿಂಗಯ್ಯ, ಬೆಂಗಳೂರು | ೧,೦೦೦-೦೦ |
| ೧೪) | ಪ್ರೊ॥ ಅ. ರಾ. ಮಿತ್ರ, ಬೆಂಗಳೂರು | ೧,೦೦೦-೦೦ |
| ೧೫) | ಶ್ರೀಮತಿ ಜಯಮ್ಮ ಕರಿಯಣ್ಣ, ಬೆಂಗಳೂರು | ೧,೦೦೦-೦೦ |
| ೧೬) | ಶ್ರೀ ಗಿರೀಶ ಎಕ್ಸ್‌ಪ್ಲೋರಾಮಾರ್ಬಲ್ಸ್, ಬೆಂಗಳೂರು | ೧,೦೦೦-೦೦ |
| ೧೭) | ಶ್ರೀಮತಿ ಲಲಿತಮ್ಮ ಚಂದ್ರಶೇಖರ, ಹರಿಹರ | ೧,೦೦೦-೦೦ |
| ೧೮) | ಶ್ರೀ ಬಿ. ಆನಂದ, ಬೆಂಗಳೂರು | ೫,೦೦೦-೦೦ |
| ೧೯) | ಶ್ರೀ ಕೆ. ವಿ. ಸುಬ್ಬರಾಯ, ಬೆಂಗಳೂರು | ೫೦೧-೦೦ |
| ೨೦) | ಶ್ರೀಮತಿ ಎಂ. ಕೆ. ರಮಾದೇವಿ, ಬೆಂಗಳೂರು | ೫೦೧-೦೦ |
| ೨೧) | ಶ್ರೀಮತಿ ವೈ. ಸಿ. ಭಾನುಮತಿ, ಮೈಸೂರು | ೧,೦೦೦-೦೦ |
| ೨೨) | ಶ್ರೀ ಬಿ. ವೀರಭದ್ರಯ್ಯ, ತುಮಕೂರು | ೧,೦೦೦-೦೦ |
| ೨೩) | ಮೆ॥ ಮಂಗಳೂರು ರಿಫೈನರಿ ಪೆಟ್ರೋಕೆಮಿಕಲ್ಸ್ ಲಿಮಿಟೆಡ್, ಬೆಂಗಳೂರು | ೧೦,೦೦೦-೦೦ |
| ೨೪) | ಪ್ರೊ॥ ಎಂ. ಎಚ್. ಕೃಷ್ಣಯ್ಯ, ಬೆಂಗಳೂರು | ೧,೦೦೦-೦೦ |
| ೨೫) | ಶ್ರೀ ಎ. ಎಚ್. ರಾಮರಾವ್, ಬೆಂಗಳೂರು | ೨೫,೦೦೦-೦೦ |
| ೨೬) | ಶ್ರೀಮತಿ ಉಷಾ ಪಿ. ರೈ, ಬೆಂಗಳೂರು | ೧,೦೦೦-೦೦ |
| ೨೭) | ಇಂಡಸ್ಟ್ರೀ ವಾಚ್ ಟ್ರಸ್ಟ್, ಮಂಗಳೂರು | ೭೫,೦೦೦-೦೦ |
| ೨೮) | ಹೋಟೆಲ್ ಉದ್ಯಮದಾರರ ಸಹಕಾರ ಬ್ಯಾಂಕ್, ಬೆಂ. | ೧೦,೦೦೦-೦೦ |
| ೨೯) | ಶ್ರೀ ಅಶೋಕ ಕುಮಾರ್, ಲಕ್ಷ್ಮೀ ಪ್ರಿಂಟರ್ಸ್, ಬೆಂಗಳೂರು | ೧೦,೦೦೦-೦೦ |
| ೩೦) | ಸೈಯದ್ ಮಂಜೂರ ಅಹಮದ್, ಚಾಮರಾಜನಗರ | ೧೦೦-೦೦ |

## ೨. ದತ್ತಿನಿಧಿ ದಾನಗಳು

**(ಅ) ಟಿ. ಎನ್. ಮಹದೇವಯ್ಯ ಸ್ಮಾರಕ ದತ್ತಿನಿಧಿ**

| | | |
|---|---|---|
| ಡಾ॥ ಕೆ. ವೈ. ಶಿವಕುಮಾರ | ಮೈಸೂರು | ೫೦೦-೦೦ |
| ಶ್ರೀಮತಿ ವಸಂತಕುಮಾರಿ | ಮಂಡ್ಯ | ೩೦೦-೦೦ |
| ಡಾ॥ ವಿದ್ಯಾಶಂಕರ್ | ಬೆಂಗಳೂರು | ೫೦೦-೦೦ |
| ಶ್ರೀ ವಿ. ಮಹದೇವ | ತುಮಕೂರು | ೫೦೦-೦೦ |
| ಶ್ರೀಮತಿ ಸುಶೀಲಮ್ಮ | ಬೆಂಗಳೂರು | ೨,೦೦೦-೦೦ |
| ಶ್ರೀಮತಿ ಎಸ್. ವಿನುತ | ಬೆಂಗಳೂರು | ೧,೦೦೦-೦೦ |

**(ಆ) ಎಂ. ಎ. ಜಯಚಂದ್ರ ದತ್ತಿನಿಧಿ**

| | | |
|---|---|---|
| ಡಾ॥ ಎಂ. ಎ. ಜಯಚಂದ್ರ | ಬೆಂಗಳೂರು | ೫,೦೦೦-೦೦ |

**(ಇ) ಡಾ॥ ಶಾಂತಾ ಪ್ರಭುಶಂಕರ ಸ್ಮಾರಕ ದತ್ತಿ ನಿಧಿ**

| | | |
|---|---|---|
| ಡಾ॥ ಪ್ರಭುಶಂಕರ | ಮೈಸೂರು | ೧೦,೦೦೦-೦೦ |

**(ಈ) ಆ. ನೇ. ಉಪಾಧ್ಯೆ ಸ್ಮಾರಕ ದತ್ತಿ ನಿಧಿ**

| | | |
|---|---|---|
| ಶ್ರೀ ಎಸ್. ಬಿ. ವಸಂತರಾಜಯ್ಯ | ಬೆಂಗಳೂರು | ೫,೦೦೦-೦೦ |

**(ಉ) ಡಿ. ಎಲ್. ಎನ್. ಸ್ಮಾರಕ ದತ್ತಿ ನಿಧಿ**

| | | |
|---|---|---|
| ಬಿ. ವೀರಭದ್ರಯ್ಯ | ತುಮಕೂರು | ೨,೫೦೦-೦೦ |
| ಡಾ॥ ಎಸ್. ಎಸ್. ತಾರಾನಾಥ್ | ಮೈಸೂರು | ೩೦೦-೦೦ |

**(ಊ) ಸೋಸಲೆ ಅಯ್ಯಾಶಾಸ್ತ್ರೀ ಸ್ಮಾರಕ ದತ್ತಿನಿಧಿ**

| | | |
|---|---|---|
| ಶ್ರೀಮತಿ ಅನಿತಾ ಸೋಸಲೆ ರಾವ್ | ಅಮೇರಿಕಾ | ೧೦೦ ಡಾಲರ್ |

## ೩. ಗ್ರಂಥಾಲಯ ಪೀಠೋಪಕರಣಗಳ ದಾನ

| | |
|---|---|
| ೧. ಶ್ರೀ ಕೆ. ಆರ್. ಗಣೇಶ್ (ಬುಕ್ ಷೆಲ್ಫ್‌ಗಳಿಗೆ) | ೨,೦೦೦-೦೦ |
| ೨. ಪ್ರೊ॥ ಎಂ. ಎಚ್. ಕೃಷ್ಣಯ್ಯ (ಬುಕ್ ಷೆಲ್ಫ್‌ಗಳಿಗೆ) | ೨,೦೦೦-೦೦ |
| ೩. ಗಮಕಿ ಶ್ರೀ ಆರ್. ಶಂಕರನಾರಾಯಣ (ಬುಕ್ ಷೆಲ್ಫ್‌ಗಳಿಗೆ) | ೨,೦೦೦-೦೦ |
| ೪. ಶ್ರೀಮತಿ ಮನೋಹರಿ ಪಾರ್ಥಸಾರಥಿ | ೨ ಬುಕ್ ಶೆಲ್ಫ್‌ಗಳು |
| ೫. ಶ್ರೀ ಬಿ. ಎಸ್. ರಾಮಪ್ರಸಾದ್ | ೨ ಬುಕ್ಸ್ ಷೋಕೇಸುಗಳು |

## ೪. ವಾಚನಾಲಯ ಸೇವಾನಿಧಿ ದಾನ

| | |
|---|---|
| ೧. ಶಶಿಧರ್ | ೧೦೦-೦೦ |
| ೨. ಕೃಷ್ಣಯ್ಯ ಎಂ. | ೪೫೦-೦೦ |

| | |
|---|---|
| ೩. ರಾ. ನಂ. ಚಂದ್ರಶೇಖರ್ | ೩೫೦-೦೦ |
| ೪. ಶಂಭಣ್ಣ | ೧೦೦-೦೦ |
| ೫. ಸೋಮಯ್ಯ | ೧೫೦-೦೦ |
| ೬. ಕುಮಾರ್ | ೧೦೦-೦೦ |
| ೭. ರಾಮಸ್ವಾಮಿ ಅಯ್ಯರ್ | ಕಸ್ತೂರಿ, ಮಯೂರ ಪತ್ರಿಕೆಗಳು |
| ೮. ಗೀತಾಚಾರ್ಯ | ಪ್ರಜಾವಾಣಿ, ಸುಧಾ ಪತ್ರಿಕೆಗಳು |

## ೫. ಗ್ರಂಥದಾನ

| | |
|---|---|
| ಶ್ರೀ ಕೆ. ಎಂ. ರಾಮಮೂರ್ತಿ | - ೧೮೮೭ರ ಅಧ್ಯಾತ್ಮರಾಮಾಯಣ ಕನ್ನಡ ಟೀಕು |
| ಶ್ರೀ ಎಸ್. ನರಸಿಂಹಯ್ಯ | - ಶಬ್ದಾರ್ಥಕಲ್ಪದ್ರುಮ, ಸಾಹಿತ್ಯ ದರ್ಪಣ |
| ಶ್ರೀ ಆರ್. ಶ್ರೀನಿವಾಸಯ್ಯ | - ವಿನಾಯಕ (ಪ್ರಬಂಧ ಸಂಕಲನ) |
| | ಕನ್ನಡ ಸಾಹಿತ್ಯ ಭಂಡಾರ (ಸಂಪುಟ-೧) |
| | ಗೀತೆಗಳು |
| | ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು |
| ಪ್ರೊ॥ ಎಲ್. ಎಸ್. ಶೇಷಗಿರಿರಾವ್ | - ೨೫ ಪುಸ್ತಕಗಳು |
| ಆರ್. ಶಂಕರನಾರಾಯಣ | - 'ಭೀಮಸೇನವಿಜಯ' |
| ಮಧುಕರ್ ಆಚಾರ್ಯ | - ಗಾನಕಲಾ ಭೂಷಣ, |
| | ವೈಣಿಕ ವಿದ್ವಾನ್ ಎಲ್. ರಾಜಾರಾವ್ |
| ಸಮುದಾಯ ಅಧ್ಯಯನ ಕೇಂದ್ರ | - ೯ ಪುಸ್ತಕಗಳು |
| ಶ್ರೀ ಪೂ. ನಾ. ರಘುನಾಥನ್ | - 'ಶ್ರೀಮದ್ಭಗವದ್ಗೀತೆ-ತತ್ವವಿವೇಚನೀ |
| ಶ್ರೀ ಕೈವಾರ ಗೋಪೀನಾಥ್ | - ೭೨ ಪುಸ್ತಕಗಳು |

ಶ್ರೀ ಎಂ. ಆರ್. ಅನಂತರಾಮಯ್ಯ ಅವರು ಸಂಕ್ಷಿಪ್ತ ರಾಮಾಯಣದ ೧೦೦ ಪ್ರತಿಗಳನ್ನು ದಾನವಾಗಿ ನೀಡಿದ್ದಾರೆ. ಇದರಿಂದ ಮಾರಿ ಬಂದ ಹಣವನ್ನು ಕಟ್ಟಡ ನಿಧಿಗೆ ದಾನವಾಗಿ ತೆಗೆದುಕೊಳ್ಳಲು ತಿಳಿಸಿದ್ದಾರೆ.

## ೬. ಹಸ್ತಪ್ರತಿ, ವಸ್ತುದಾನ

ಶ್ರೀ ಎಚ್. ರಾಮಣ್ಣ ಅವರು ಬಿ. ಎಂ. ಶ್ರೀ ಅವರ 'ಅಶ್ವತ್ಥಾಮನ್' ನಾಟಕದ ಒಂದು ಅಮೂಲ್ಯ ಫೋಟೋವನ್ನು ದಾನವಾಗಿ ಕೊಟ್ಟಿದ್ದಾರೆ.

ಈ ಎಲ್ಲಾ ದಾನಿಗಳಿಗೆ ಪ್ರತಿಷ್ಠಾನ ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸುತ್ತದೆ.

## ವಸ್ತು ಸಂಗ್ರಹ

### ಸನ್ಮಾನಗಳು

**(೧) ಡಾ|| ಹೋ. ಶ್ರೀನಿವಾಸಯ್ಯ :**

ಪ್ರಸಿದ್ಧ ಲೇಖಕರೂ, ಪ್ರಕೃತಿ ಚಿಕಿತ್ಸಾ ಕೇಂದ್ರದ ಸಂಸ್ಥಾಪಕರೂ, ಸಮಾಜ ಸೇವಾಕರ್ತರೂ ಆದ ಹೋ. ಶ್ರೀನಿವಾಸಯ್ಯ ಸನ್ಮಾನ ಸಮಿತಿ ನಗರದಲ್ಲಿ ೯-೧-೨೦೦೦ದಂದು ಅದ್ದೂರಿ ಸನ್ಮಾನವನ್ನು ನೀಡಿತು. 'ಧವಳಶ್ರೀ' ಎಂಬ ಅಭಿನಂದನ ಗ್ರಂಥವನ್ನೂ 'ಅಪರಂಜಿ' ಎಂಬ ಸ್ಮರಣಸಂಚಿಕೆಯನ್ನೂ ಈ ಸಂದರ್ಭದಲ್ಲಿ ಬಿಡುಗಡೆ ಮಾಡಲಾಯಿತು. ಡಾ|| ಹೋ. ಶ್ರೀ ಅವರು ಬಿ.ಎಂ.ಶ್ರೀ. ಪ್ರತಿಷ್ಠಾನದ ಸದಸ್ಯರೂ, ಹಿತೈಷಿಗಳೂ ಆಗಿದ್ದು ಬಿ.ಎಂ.ಶ್ರೀ. ಜನ್ಮಶತಾಬ್ಧಿ ಆಚರಣೆಯಲ್ಲಿ ಸಕ್ರಿಯವಾಗಿ ಸಹಕರಿಸಿದ್ದರು. ಪ್ರತಿಷ್ಠಾನಕ್ಕೆ "ಕನ್ನಡ ಕಣ್ವ ಬಿ. ಎಂ. ಶ್ರೀ" ಎಂಬ ಪುಸ್ತಕವನ್ನು ಬರೆದುಕೊಟ್ಟಿರುವ ಹೋ. ಶ್ರೀ. ಅವರಿಗೆ ಈ ಸನ್ಮಾನ ಗೌರವೋಚಿತವಾದುದಾಗಿದೆ.

**(೨) ಪ್ರೊ|| ಎಲ್. ಎಸ್. ಶೇಷಗಿರಿರಾವ್ :**

ಪ್ರತಿಷ್ಠಾನದ ಅಧ್ಯಕ್ಷರೂ ಆಗಿ ಸೇವೆ ಸಲ್ಲಿಸಿದ್ದು ಪ್ರಸ್ತುತ ಕಾರ್ಯಸಮಿತಿ ಸದಸ್ಯರಾಗಿ ಸಹಕರಿಸುತ್ತಿರುವ ಪ್ರಸಿದ್ಧ ಸಾಹಿತಿ-ವಿಮರ್ಶಕ-ಚಿಂತಕರಾದ ಪ್ರೊ|| ಎಲ್. ಎಸ್. ಎಸ್. ಅವರಿಗೆ ಕನ್ನಡ ಗೆಳೆಯರ ಬಳಗ ೭೫ನೇ ವರ್ಷದ ನೆನಪಿಗಾಗಿ ೧೬-೨-೨೦೦೦ದಂದು ಅಭಿನಂದನೆಯನ್ನು ಸಲ್ಲಿಸಿತು. ಇದೇ ಕಾರ್ಯಕರ್ತರು ಹಿಂದೆಯೂ ಇದೇ ರೀತಿಯ ಒಂದು ಕಾರ್ಯಕ್ರಮ ಮಾಡಿ 'ಸೌಜನ್ಯ' ಎಂಬ ಪುಟ್ಟ ಪುಸ್ತಕ ಅರ್ಪಿಸಿದ್ದರು. ಈ ಸಂದರ್ಭದಲ್ಲೂ ಇಳಾ ಪ್ರಿಂಟರ್ಸ್ ಸಹಕಾರದಿಂದ ಎಲ್. ಎಸ್. ಎಸ್. ೭೫' ಎಂಬ ಪುಟ್ಟ ಪುಸ್ತಕವನ್ನು ವಿತರಿಸಿತು.

**(೩) ಪ್ರೊ|| ಕೆ. ಎಸ್. ನಿಸಾರ್ ಅಹಮದ್ :**

ಖ್ಯಾತ ಕವಿ ಕೆ. ಎಸ್. ನಿಸಾರ್ ಅಹಮದ್ ಅವರ ೬೫ನೇ ಹುಟ್ಟುಹಬ್ಬದ ಸ್ಮರಣೆಗಾಗಿ ಭಾರತೀಯ ವಿದ್ಯಾಭವನ ೫-೨-೨೦೦೦ದಂದು ಕವಿ ಸನ್ಮಾನದೊಂದಿಗೆ ಕಾವ್ಯಾಸ್ವಾದ-ಕವಿಸಂವಾದ ಎಂಬ ವಿಶಿಷ್ಟ ಕಾರ್ಯಕ್ರಮವನ್ನು ಹಮ್ಮಿಕೊಂಡು ಗೌರವವನ್ನು ಸಲ್ಲಿಸಿತು.

(೪) ಡಾ|| ಪಾಟೀಲ ಪುಟ್ಟಪ್ಪ :

ದಿಟ್ಟ ಪತ್ರಕರ್ತರಾಗಿ, ಕನ್ನಡ ಹೋರಾಟಗಾರರಾಗಿ, ಲೇಖಕರಾಗಿ ಪ್ರಸಿದ್ಧರಾಗಿರುವ ಪಾಟೀಲ ಪುಟ್ಟಪ್ಪ ಅವರಿಗೆ ೮೦ನೇ ವರ್ಷದ ಸಂದರ್ಭದಲ್ಲಿ ನಗರದ ತರಳಬಾಳು ಕೇಂದ್ರದಲ್ಲಿ ಡಾ|| ಪಾಟೀಲ ಪುಟ್ಟಪ್ಪ ಅಭಿನಂದನ ಸಮಿತಿಯಿಂದ ಅದ್ದೂರಿ ಸನ್ಮಾನ ನೀಡಲಾಯಿತು. 'ಸಮಗ್ರ ಪಾಪು ಪ್ರಪಂಚ' ಮತ್ತು 'ಪಾಪು ಸಮಗ್ರ ಕಥೆಗಳು' ಗ್ರಂಥಗಳನ್ನು ಈ ಸಂದರ್ಭದಲ್ಲಿ ಹೊರತರಲಾಯಿತು. ಲೇಖಕರ ಸನ್ಮಾನ ಸಂದರ್ಭದಲ್ಲಿ ಗೌರವ ಗ್ರಂಥಗಳೊಂದಿಗೆ ಅವರ ಅಪ್ರಕಟಿತ ಕೃತಿ, ಲೇಖನಗಳ ಪ್ರಕಟಣೆ ಅಥವಾ ಪ್ರಕಟಿತ ಕೃತಿಗಳ ಸಮಗ್ರ ಆವೃತ್ತಿಗಳನ್ನು ತರುವ ಪ್ರಯತ್ನ ಸ್ತುತ್ಯರ್ಹ ವಾದದ್ದು. ❖

## ಶತಮಾನೋತ್ಸವ ಸಮಾರಂಭಗಳು

(೧) ಎ. ಎನ್. ಮೂರ್ತಿರಾವ್ ಶತಮಾನೋತ್ಸವ :

ಕನ್ನಡದ ಪ್ರಸಿದ್ಧ ಸಾಹಿತಿಗಳೂ, ಲಲಿತ ಪ್ರಬಂಧಕಾರರೂ, ಚಿಂತಕರೂ ಆದ ಪ್ರೊ|| ಎ. ಎನ್. ಮೂರ್ತಿರಾಯರಿಗೆ ೨೦೦೦ ಜನವರಿಗೆ ೧೦೦ ವರ್ಷ ತುಂಬಿ ೧೦೧ರಲ್ಲಿ ಪದಾರ್ಪಣ ಮಾಡಿದ್ದಾರೆ. ಕನ್ನಡ ಸಾಹಿತ್ಯಲೋಕಕ್ಕೆ ಇದೊಂದು ಸುವರ್ಣಾವಕಾಶ. ಶತಮಾನವನ್ನು ಕಂಡು ನಮ್ಮೊಂದಿಗಿರುವ ಮೂರ್ತಿರಾಯರನ್ನು ಕನ್ನಡನಾಡಿನ ಜನತೆ, ಸರ್ಕಾರ, ಸಂಘ-ಸಂಸ್ಥೆಗಳು ಸೂಕ್ತ ರೀತಿಯಲ್ಲಿ ನೆನಪಿಸಿಕೊಂಡು ಗೌರವಿಸಿ ಸತ್ಕರಿಸಿವೆ. ಸಂವಾದ ಕಾರ್ಯಕ್ರಮಗಳನ್ನು ಏರ್ಪಡಿಸಿವೆ. ಪ್ರತಿಷ್ಠಾನದ ಗೌರವ ಸದಸ್ಯರೂ ಆಗಿರುವ ಶತಾಯುಷಿ ಮೂರ್ತಿರಾಯರನ್ನು ಪ್ರತಿಷ್ಠಾನ ತನ್ನ ಬಿ. ಎಂ. ಶ್ರೀ. ಕಲಾಭವನದಲ್ಲಿ ಉದ್ಘಾಟನೆಯ ಸಂದರ್ಭದಲ್ಲಿ ಗೌರವಿಸಿದೆ.

೨) ಬೆಟಗೇರಿ ಕೃಷ್ಣಶರ್ಮ ಶತಮಾನೋತ್ಸವ :

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಬೆಟಗೇರಿ ಕೃಷ್ಣಶರ್ಮರ ಹೆಸರು ಚಿರಸ್ಥಾಯಿಯಾದುದು. ಇವರ ಶತಮಾನೋತ್ಸವವನ್ನು ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಲೇಖಕರ ಸಂಘ ಮತ್ತು ಬಿ. ನಾರಾಯಣಮ್ಮ ಪ್ರತಿಷ್ಠಾನಗಳು ಸಂಯುಕ್ತವಾಗಿ ಆಯೋಜಿಸಿದ್ದವು. ೧೬-೪-೨೦೦೦ದಂದು ಪರಿಷತ್ತಿನಲ್ಲಿ ನಡೆದ ಈ ಸಮಾರಂಭದಲ್ಲಿ ಕೃಷ್ಣಶರ್ಮರ ಸಾಧನೆಗಳನ್ನು ಪರಿಚಯಿಸುವ ಉಪನ್ಯಾಸಗಳು, ಕವಿಗೋಷ್ಠಿ ನಡೆದವು.

ಕರ್ನಾಟಕ ಸಾಹಿತ್ಯ ಅಕಾಡೆಮಿಯು ದಿವಂಗತ ಬೆಟಗೇರಿ ಕೃಷ್ಣಶರ್ಮ ಶತಮಾನೋತ್ಸವ ಆಚರಣಾ ಅಂಗವಾಗಿ 'ಆನಂದಕಂದ' ಎಂಬ ಸಾಹಿತ್ಯ ವಾಚಿಕೆಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಡಾ|| ಬೆಟಗೇರಿಯವರ ಸಮಗ್ರ ಸಾಹಿತ್ಯದ ಒಂದು ಕಿರುಚಿತ್ರವು

ದೊರೆಯುತ್ತದೆ. ಇದನ್ನು ಕನ್ನಡದ ಹಿರಿಯ ಸಾಹಿತಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರು ಸಂಪಾದಿಸಿದ್ದಾರೆ.

ನಾಡು-ನುಡಿಗೆ ದುಡಿದ ಸಾಹಿತ್ಯೋಪಾಸಕರ ಜನ್ಮಶತಮಾನೋತ್ಸವಗಳ ಆಚರಣೆ ಅತ್ಯಗತ್ಯವಾಗಿ ಸೂಕ್ತ ರೀತಿಯಲ್ಲಿ ಆಗುವುದೊಳಿತು. ಇದರಿಂದ ಅವರ ಸಾಹಿತ್ಯದ ಪುನರ್ ಮೌಲ್ಯೀಕರಣವಾಗುವುದಲ್ಲದೆ ಸಾಧನೆಗಳ ಪರಿಚಯ ವಿಶೇಷವಾಗಿ ಮುಂದಿನ ಪೀಳಿಗೆಗೆ ಅತ್ಯಗತ್ಯವಾಗಿ ಬೇಕಾಗುತ್ತದೆ. ನಾಡಿನ ಸಾಹಿತ್ಯ-ಸಂಸ್ಕೃತಿಯ ತೇರು ಸಂಭ್ರಮದಿಂದ ಮುಂದೆ ಸಾಗುವುದಕ್ಕೆ ಇಂತಹ ಸಮ್ಮೇಳನಗಳು ಮತ್ತು ಕಾರ್ಯಕ್ರಮಗಳು ಬಹಳ ಮುಖ್ಯವಾಗುತ್ತವೆ.

## ಸಮ್ಮೇಳನಗಳು

**೧. ಸಾಹಿತ್ಯ ಸಮ್ಮೇಳನ :**

ಬಾಗಲಕೋಟೆಯಲ್ಲಿ ನಡೆದ ೬೮ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನವು ಪ್ರತಿಷ್ಠಾನದ ಗೌ॥ ಸದಸ್ಯರೂ ಆಗಿರುವ ಶ್ರೀಮತಿ ಶಾಂತಾದೇವಿ ಮಾಳವಾಡ ಅವರ ಅಧ್ಯಕ್ಷತೆಯ ಗೌರವದೊಂದಿಗೆ ಅದ್ದೂರಿಯಾಗಿ ಜರುಗಿತು. ಮುಳುಗಡೆಯಾಗಲಿರುವ ಬಾಗಲಕೋಟೆ ಜನರ ಗಮನವನ್ನು ಸೆಳೆಯುವಲ್ಲಿ ಅಗತ್ಯ ಸೌಲಭ್ಯಗಳನ್ನು ಪಡೆಯುವಲ್ಲಿ ಈ ಸಮ್ಮೇಳನ ಯಶಸ್ವಿಯಾಯಿತೆಂದೇ ಹೇಳಬಹುದು. ಸಮ್ಮೇಳನದಿಂದ ಸಮ್ಮೇಳನಕ್ಕೆ ಹೆಚ್ಚು ಹೆಚ್ಚು ಅದ್ದೂರಿಯಾಗುತ್ತಿದ್ದಂತೆ ಮುಂದಿನ ಸಮ್ಮೇಳನಗಳ ಸಿದ್ಧತೆ ವ್ಯವಸ್ಥೆಗೆ ದೊಡ್ಡ ಸವಾಲು ಎದುರಾಗುತ್ತಿರುತ್ತದೆ. ಇದರಿಂದ ಅನೇಕ ಹೊಸ ಹೊಸ ಸಮಸ್ಯೆಗಳೂ ಹುಟ್ಟಿಕೊಳ್ಳುತ್ತವೆ. ಆದ್ದರಿಂದ ಪರಿಷತ್ತು, ಸಮ್ಮೇಳನದ ಖರ್ಚು ವೆಚ್ಚಗಳಿಗೆ ಒಂದು ಮಿತಿ ಹಾಕುವ ಬಗ್ಗೆ ಮತ್ತು ಸಮ್ಮೇಳನಗಳನ್ನು ಎರಡು ಅಥವಾ ಮೂರು ವರ್ಷಗಳಿಗೊಮ್ಮೆ ನಡೆಸುವ ಬಗ್ಗೆ ಚರ್ಚೆಯನ್ನು ಆರಂಭಿಸುವುದು ಉತ್ತಮ ಎನಿಸುತ್ತದೆ. ಪ್ರತಿಷ್ಠಾನದ ಅಧ್ಯಕ್ಷರೂ ಆಗಿರುವ ಎನ್. ಬಸವಾರಾಧ್ಯರ ಅಧ್ಯಕ್ಷತೆಯಲ್ಲಿ ಜರುಗಿದ ಎರಡನೇ ಯಶಸ್ವೀ ಸಮ್ಮೇಳನವಾಗಿ ಇದು ಹೆಸರು ಮಾಡಿತು.

**೨) ಇತಿಹಾಸ ಸಮ್ಮೇಳನ :**

ಇತಿಹಾಸ ಅಕಾಡೆಮಿ ಈ ಬಾರಿಯ ಸಮ್ಮೇಳನವನ್ನು ಹಂಪಿಯಲ್ಲಿ ನಡೆಸಿತು. ಸಂಶೋಧಕರಿಗೆ ಪ್ರಿಯವಾದ ಈ ಸಮ್ಮೇಳನದ ಅಧ್ಯಕ್ಷತೆಗೆ ಪ್ರಸಿದ್ಧ ಇತಿಹಾಸ ತಜ್ಞರಾದ ಕೊಟ್ರಯ್ಯ ಅವರು ಅಧ್ಯಕ್ಷರಾಗಿ ಆಯ್ಕೆಯಾದರು. ಸುಮಾರು ೭೦ಕ್ಕೂ ಹೆಚ್ಚು ಇತಿಹಾಸ ಸಂಶೋಧನಾ ಪ್ರಬಂಧಗಳು ಈ ಬಾರಿ ಮಂಡಿತವಾದವು.



# ಅಭಿನಂದನೆ

**೧. ಪಂಪಪ್ರಶಸ್ತಿ :**

ಕರ್ನಾಟಕ ಸರ್ಕಾರ ನೀಡುವ ಪ್ರತಿಷ್ಠಿತ ಸಾಹಿತ್ಯ ಪ್ರಶಸ್ತಿಯಾದ 'ಪಂಪ ಪ್ರಶಸ್ತಿ'ಯು ಖ್ಯಾತ ಸಂಶೋಧಕ, ಪ್ರಸಿದ್ಧ ಗ್ರಂಥ ಸಂಪಾದಕ, ಬಹುಮುಖ ಪ್ರತಿಭೆಯ ಮಹಾ ವಿದ್ವಾಂಸರಾದ ಡಾ॥ ಎಲ್. ಬಸವರಾಜುರವರಿಗೆ ಈ ವರ್ಷ (೨೦೦೦) ಪಂಪ ಪ್ರಶಸ್ತಿ ಲಭಿಸಿದೆ. ಇವರಿಗೆ ಬಿ. ಎಂ. ಶ್ರೀ. ಪ್ರತಿಷ್ಠಾನ ಹಾಗೂ ಲೋಚನದ ಸಂಪಾದಕವರ್ಗ ಹಾರ್ದಿಕ ಅಭಿನಂದನೆ ಸಲ್ಲಿಸುತ್ತವೆ.

**೨. ಚಾವುಂಡರಾಯ ಪ್ರಶಸ್ತಿ :**

ಕನ್ನಡ ಸಾಹಿತ್ಯ ಪರಿಷತ್ತು ನೀಡುವ ಈ ಪ್ರತಿಷ್ಠಿತ ಪ್ರಶಸ್ತಿಯನ್ನು ಸಂಶೋಧಕರೂ ವಿಶೇಷವಾಗಿ ಪ್ರಾಚೀನ ಹಸ್ತ ಪ್ರತಿಗಳ ಸಂಪಾದನೆಯ ಕ್ಷೇತ್ರದಲ್ಲಿ ನುರಿತ ತಜ್ಞರೂ ಆಗಿರುವ ಮೈಸೂರಿನ ಶ್ರೀ ಬಿ. ಎಸ್. ಸಣ್ಣಯ್ಯ ಅವರಿಗೆ ೧೯೯೯ನೇ ಸಾಲಿಗೆ ನೀಡಲಾಗಿದೆ.

**೩. ನಾಡೋಜ ಗೌರವ ಪದವಿ :**

ಕನ್ನಡ ವಿಶ್ವವಿದ್ಯಾನಿಲಯ ಹಂಪಿ ತನ್ನ ನುಡಿ ಹಬ್ಬದಲ್ಲಿ ನೀಡುವ ಸಂಪ್ರದಾಯವಿಟ್ಟುಕೊಂಡಿರುವ ಈ ಗೌರವ ಡಾಕ್ಟರೇಟ್ ಪದವಿಯಾದ ಪ್ರಶಸ್ತಿಯನ್ನು ನಾಡೋಜ ಶತಾಯುಷಿ ಎ. ಎನ್. ಮೂರ್ತಿರಾಯರಿಗೆ ೨೦೦೦ನೇ ಸಾಲಿನಲ್ಲಿ ನೀಡಿ ಗೌರವಿಸಿದೆ.

**೪. ಅತ್ಯುತ್ತಮ ಪ್ರಕಾಶನ ಪ್ರಶಸ್ತಿ :**

ಕನ್ನಡ ಪುಸ್ತಕ ಪ್ರಾಧಿಕಾರ ಆರಂಭಿಸಿರುವ ಈ ವಿನೂತನ ಪ್ರಶಸ್ತಿ ಬಹಳ ಉಚಿತವಾದುದಾಗಿದೆ. ಕರ್ನಾಟಕದಲ್ಲಿ ನಾಡು-ನುಡಿ ಸೇವೆ ಮಾಡುವ ಲೇಖಕರಂತೆ ಸಂಸ್ಥೆಗಳೂ ಸಾಕಷ್ಟಿವೆ. ಅನೇಕ ಪ್ರಕಾಶನ ಸಂಸ್ಥೆಗಳು, ಸಾಹಿತ್ಯಕ-ಸಾಂಸ್ಕೃತಿಕ ಸಂಸ್ಥೆಗಳು ಕನ್ನಡವನ್ನು ಕಟ್ಟುವ ಕೆಲಸದಲ್ಲಿ ನಿರತವಾಗಿವೆ. ತನ್ನ ಉದ್ದೇಶಕ್ಕೆ ಅನುಗುಣವಾಗಿ ಪುಸ್ತಕ ಪ್ರಾಧಿಕಾರ ಪ್ರಕಾಶನ ಸಂಸ್ಥೆಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಪ್ರತಿವರ್ಷ ಅತ್ಯುತ್ತಮ ಪ್ರಕಾಶನ ಸಂಸ್ಥೆಗಳನ್ನು ಗುರುತಿಸಿ ಪ್ರಶಸ್ತಿಯನ್ನು ನೀಡುವ ಮೂಲಕ ೨೫ ಸಾವಿರ ರೂ.ಗಳ ಧನ ಸಹಾಯ ನೀಡುವುದು ಆ ಸಂಸ್ಥೆಗಳ ಚಟುವಟಿಕೆಗೆ ಇಂಬು ನೀಡಿದಂತಾಗಿದೆ. ಇದು ಸಾರೋದ್ಧಾರವಾಗಿ ನಡೆಯಲಿ ಎಂಬುದೇ ಲೋಚನದ ಆಶಯ.

ಈ ಬಾರಿಯ ಪ್ರಶಸ್ತಿಗೆ ಆಯ್ಕೆಯಾದ ಸಂಸ್ಥೆ : ಕ್ರೈಸ್ಟ್ ಕಾಲೇಜು ಕನ್ನಡ ಸಂಘ (೧೯೯೮) ಇದೀಗ ೧೯೯೯ನೇ ಸಾಲಿಗೆ ಈ ಸಂಸ್ಥೆಗೆ ಲಭಿಸಿದೆ.

**೫. ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ :**

ಸರಕಾರ ನೀಡುವ ಈ ಪ್ರತಿಷ್ಠಿತ ಪ್ರಶಸ್ತಿ ಕನ್ನಡದ ಹಿರಿಯ ಸಾಹಿತಿ ಮಲ್ಲಿಕಾ ಕಡಿದಾಳರವರಿಗೆ ೧೯೯೯ನೇ ಸಾಲಿನ ಮತ್ತು ಶ್ರೀಮತಿ ಜಯಲಕ್ಷ್ಮಿ ಶ್ರೀನಿವಾಸನ್ ಅವರಿಗೆ ೨೦೦೦ನೇ ಸಾಲಿನ ಪ್ರಶಸ್ತಿ ಲಭಿಸಿದೆ. (೩೦-೧೧-೨೦೦೦)

**೬. ಇನಾಂದಾರ್ ಪ್ರಶಸ್ತಿ :**

ಕನ್ನಡದ ಪ್ರಸಿದ್ಧ ವಿಮರ್ಶಕರಾಗಿದ್ದ ವಿ. ಎಂ. ಇನಾಂದಾರ್ ಅವರ ಸ್ಮರಣೆಯಲ್ಲಿ ಪ್ರತಿವರ್ಷ ಉತ್ತಮ ವಿಮರ್ಶಾ ಗ್ರಂಥಕ್ಕೆ ನೀಡುವ ಈ ಪ್ರಶಸ್ತಿ ೨೦೦೦ನೇ ಸಾಲಿಗೆ ಖ್ಯಾತ ವಿಮರ್ಶಕರಾಗಿರುವ ಡಾ|| ನರಹಳ್ಳಿ ಬಾಲಸುಬ್ರಹ್ಮಣ್ಯಂ ಅವರಿಗೆ ಲಭಿಸಿದೆ.

**೭. ಅಂತರರಾಷ್ಟ್ರೀಯ ತುಳಸಿ ಪ್ರಶಸ್ತಿ :**

ಕನ್ನಡದಲ್ಲಿ ತುಳಸಿದಾಸರ ರಾಮಚರಿತಮಾನಸಕ್ಕೆ ಮಕರಂದ ವ್ಯಾಖ್ಯೆ ಬರೆದು ೧೦ ಸಂಪುಟಗಳಲ್ಲಿ ಪ್ರಕಟಿಸಿರುವ ಎಂ. ಕೆ. ಭಾರತಿರಮಣಾಚಾರ್ಯರ ಸಾಧನೆ ಅಸಾಧಾರಣವಾದದ್ದು. ಕನ್ನಡ ಸಾಹಿತ್ಯಕ್ಕೆ ಇದು ಒಂದು ಅಮೂಲ್ಯ ಕೊಡುಗೆ. ಸರ್ಕಾರದ ಕಿಂಚಿತ್ತು ನೆರವಿಲ್ಲದೆ ಸ್ವಲ್ಪ ಮಟ್ಟಿಗೆ ದಾನಿಗಳ ಸಹಕಾರದಿಂದ ಹೊರಬಂದಿರುವ ಈ ಗ್ರಂಥಕ್ಕೆ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಬಾರದಿರುವುದು ಒಂದು ಕೊರತೆ. ಆದರೆ, ಅಮೆರಿಕದ ಮಿಯಾಮಿ ವಿಶ್ವವಿದ್ಯಾಲಯ ಇದನ್ನು ಇದರ ಮಹತ್ವವನ್ನು ಗಮನಿಸಿ 'ಇಂಟರ್‌ನ್ಯಾಷನಲ್ ತುಳಸಿ ಅವಾರ್ಡ್'ನ್ನು ನೀಡಿ ಗೌರವಿಸಿದೆ. ಶ್ರೀಯುತರು ಪ್ರತಿಷ್ಠಾನದ ಅಭಿಮಾನಿಗಳೂ, ಸದಸ್ಯರೂ ಆಗಿದ್ದು ಈ ಅಮೂಲ್ಯ ಗ್ರಂಥದ ಹತ್ತು ಸಂಪುಟಗಳ ತಲಾ ಹತ್ತು ಪ್ರತಿಗಳನ್ನು ಪ್ರತಿಷ್ಠಾನಕ್ಕೆ ಕೊಡುಗೆಯಾಗಿ ನೀಡಿ ಇದರ ಮಾರಾಟದಿಂದ ಬರುವ ಹಣವನ್ನು ಶ್ರೀ ಭವನ ನಿರ್ಮಾಣಕ್ಕೆ ಬಳಸಿಕೊಳ್ಳಲು ತಿಳಿಸಿದ್ದಾರೆ.

**೮. ಚಿದಾನಂದ ಪ್ರಶಸ್ತಿ :**

ಪ್ರಸಿದ್ಧ ಸಂಶೋಧಕರೂ ಕನ್ನಡ ಹೋರಾಟಗಾರರೂ ಆಗಿರುವ ಡಾ|| ಚಿದಾನಂದಮೂರ್ತಿಯವರ ಹೆಸರಿನಲ್ಲಿ ಖ್ಯಾತ ಸಂಶೋಧಕರಿಗೆ ನೀಡುವ ಈ ಪ್ರಶಸ್ತಿಯನ್ನು ೨೦೦೦ನೇ ಸಾಲಿಗೆ ಭಾರತೀಯ ಕಲೆ, ಇತಿಹಾಸ, ಸಾಹಿತ್ಯಗಳನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಪರಿಚಯಿಸಿರುವ ಪ್ರಸಿದ್ಧ ಸಂಶೋಧಕ ಇತಿಹಾಸತಜ್ಞ ಡಾ|| ಎಸ್. ಶೆಟ್ಟರ್ ಅವರಿಗೆ ನೀಡಿ ಗೌರವಿಸಲಾಗಿದೆ.

**೯. ಅ. ನ. ಕೃ. ಪ್ರಶಸ್ತಿ :**

ಪ್ರಸಿದ್ಧ ಕಾದಂಬರಿಕಾರರಾಗಿದ್ದ ಅ.ನ.ಕೃಷ್ಣರಾಯರ ಹೆಸರಿನಲ್ಲಿ ಅ.ನ.ಕೃ. ಪ್ರತಿಷ್ಠಾನ ಪ್ರತಿವರ್ಷ ಪ್ರಸಿದ್ಧ ಕಾದಂಬರಿಕಾರರೊಬ್ಬರಿಗೆ ನೀಡುವ ಈ ಪ್ರಶಸ್ತಿ ೧೯೯೯ನೇ ಸಾಲಿಗೆ ಖ್ಯಾತ ಕಾದಂಬರಿಕಾರರಾದ ವ್ಯಾಸರಾಯಬಲ್ಲಾಳರಿಗೆ ಸಂದಿದೆ. ಇದೇ ಸಾಲಿನ **'ನಿರಂಜನ ಪ್ರಶಸ್ತಿ'**ಯೂ ಶ್ರೀಯುತರಿಗೆ ಲಭಿಸಿದ್ದು ಇದನ್ನು ಪುತ್ತೂರಿನ ಶಿವರಾಮಕಾರಂತ ಅಧ್ಯಯನ ಕೇಂದ್ರ ನೀಡಿದೆ.

**೧೦. ಗೊರೂರು ಪ್ರಶಸ್ತಿ :**

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಹೆಸರಿನಲ್ಲಿ ಗೊರೂರು ಪ್ರತಿಷ್ಠಾನ ನೀಡುವ ಈ ಪ್ರಶಸ್ತಿ ೨೦೦೦ನೇ ಸಾಲಿಗೆ ಪ್ರಸಿದ್ಧ ಕವಿಗಳಾದ ಕೆ. ಎಸ್. ನರಸಿಂಹಸ್ವಾಮಿ ಅವರಿಗೆ ಸಂದಿದೆ.

**೧೧. 'ಬಸವಶ್ರೀ ಪ್ರಶಸ್ತಿ' :**

ಬಸವ ವೇದಿಕೆ ನೀಡಲುದ್ದೇಶಿಸಿರುವ ಈ ರಾಷ್ಟ್ರೀಯ ಪ್ರಶಸ್ತಿಯನ್ನು ಕನ್ನಡದ ಖ್ಯಾತ ಸಾಹಿತಿ, ವಿದ್ವಾಂಸ, ಮಾಜಿ ಉಪಕುಲಪತಿ ಪ್ರೊ॥ ದೇ. ಜವರೇಗೌಡ ಅವರಿಗೆ ಪ್ರಥಮವಾಗಿ ಈ ಸಾಲಿಗೆ ನೀಡಿ ಗೌರವಿಸಿದೆ.

**೧೨. ಶ್ರೀಧರ ಸಾಹಿತ್ಯ ಪ್ರಶಸ್ತಿ :**

ಶಿರಸಿಯಿಂದ ಬಿ. ಎಚ್. ಶ್ರೀಧರರ ಹೆಸರಿನಲ್ಲಿ ನೀಡುತ್ತ ಬಂದಿರುವ ಈ ಪ್ರಶಸ್ತಿ ೨೦೦೦ನೇ ಸಾಲಿಗೆ ಪ್ರಸಿದ್ಧ ಕವಯಿತ್ರಿ ಪ್ರತಿಭಾನಂದಕುಮಾರ್ ಅವರಿಗೆ ಲಭಿಸಿದೆ.

**೧೩. ಯುಜಿಸಿ ಸಂಶೋಧನ ಯೋಜನೆಗೆ ಆಯ್ಕೆ :**

ಖ್ಯಾತ ಇತಿಹಾಸತಜ್ಞರೂ ಪ್ರತಿಷ್ಠಾನದ ಸದಸ್ಯರೂ ಅಭಿಮಾನಿಗಳೂ ಆದ ಶಿರಸಿಯ ಡಾ॥ ಎ. ಕೆ. ಶಾಸ್ತ್ರಿ ಅವರನ್ನು ಕೇಂದ್ರ ಸರ್ಕಾರದ ವಿಶ್ವವಿದ್ಯಾಲಯ ಧನಸಹಾಯ ಆಯೋಗ (ಯುಜಿಸಿ) ಮೂರು ವರ್ಷಗಳ ಅವಧಿಗೆ ಸಂಶೋಧನ ಯೋಜನೆಗೆ ಪ್ರಧಾನ ಸಂಶೋಧಕರನ್ನಾಗಿ ಆಯ್ಕೆ ಮಾಡಿದೆ.

**೧೪. ರಾಷ್ಟ್ರೀಯ ಪುರಸ್ಕಾರ :**

ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾಗಿರುವ ಡಾ॥ ಪ್ರಧಾನ ಗುರುದತ್ ಅವರು ಹಿಂದಿಗೆ ಅನುವಾದಿಸಿರುವ ಕುವೆಂಪು ಅವರ 'ಶ್ರೀರಾಮಾಯಣದರ್ಶನಂ' ಕೃತಿಗೆ ಭಾರತ ಸರ್ಕಾರದ ಕೇಂದ್ರೀಯ ಹಿಂದಿ ನಿರ್ದೇಶನಾಲಯದ ೨೫ ಸಾವಿರ ರೂ.ಗಳ ರಾಷ್ಟ್ರೀಯ ಪುರಸ್ಕಾರ ಲಭಿಸಿದೆ.

**೧೫. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ :**

ಈ ಪ್ರಶಸ್ತಿ(೨೦೦೦)ಯು ಕನ್ನಡದ ಖ್ಯಾತ ಲೇಖಕರಾದ, ಡಾ॥ ಶಾಂತಿನಾಥ ದೇಸಾಯಿ ಅವರ ಕಾದಂಬರಿ 'ಓಂಣಮೊ'ಗೆ ಲಭಿಸಿದೆ.

೧೬. ಕನ್ನಡ ಸಾಹಿತ್ಯ ಪರಿಷತ್ತಿನ ಅಂತರರಾಷ್ಟ್ರೀಯ ಮಹಿಳಾ ವರ್ಷದ ಪ್ರಶಸ್ತಿ ಶ್ರೀಮತಿ ಹೇಮಾ ಪಟ್ಟಣಶೆಟ್ಟಿಯವರಿಗೆ ಇದೇ ಪರಿಷತ್ತಿನ ಕೆ. ವಿ. ರತ್ನಮ್ಮ ದತ್ತಿ ಬಹುಮಾನ ಡಾ॥ ಕೆ. ಆರ್. ಪ್ರೇಮಲೀಲಾರವರಿಗೆ, ಡಾ॥ ಹೆಚ್. ನರಸಿಂಹಯ್ಯ ದತ್ತಿ ಬಹುಮಾನ ಶ್ರೀಮತಿ ಬಿ. ಎಸ್. ಶೈಲಜಾರವರಿಗೆ, ನೀಲಗಂಗಾ ದತ್ತಿ ಬಹುಮಾನ ಶ್ರೀಮತಿ ಎಂ. ಶಹನಾಜ್‌ರವರಿಗೆ ಲಭಿಸಿವೆ. ಕರ್ನಾಟಕ ಸರ್ಕಾರ ನೀಡುವ ರಾಷ್ಟ್ರಮಟ್ಟದ ಪ್ರಶಸ್ತಿಗಳಾದ

೨೦೦೦ನೇ ಸಾಲಿನ ಟಿ. ಚೌಡಯ್ಯ ಪ್ರಶಸ್ತಿ, ಶಾಂತಲಾ ನಾಟ್ಯ ಪ್ರಶಸ್ತಿ ಮತ್ತು ಡಾ॥ ಗುಬ್ಬಿ ವೀರಣ್ಣ ಪ್ರಶಸ್ತಿಗಳು ಕ್ರಮವಾಗಿ ಡಾ॥ ಟಿ. ಕೆ. ಮೂರ್ತಿ, ಶ್ರೀ ಕೆ. ಮುರಳೀಧರರಾವ್ ಹಾಗೂ ಶ್ರೀ ಎಚ್. ಎನ್. ಹೂಗಾರರವರಿಗೆ ಲಭಿಸಿವೆ. ಸ್ವರಲಿಪಿ ಪ್ರಶಸ್ತಿ ಪ್ರತಿಷ್ಠಾನದ ಪ್ರಶಸ್ತಿಯು ಡಾ॥ ನಿರುಪಮಾರವರಿಗೆ, "ಸ್ವರಭೂಷಿತೆ" ಪ್ರಶಸ್ತಿಯು ಶ್ರೀಮತಿ ರಂಗನಾಯಕಮ್ಮನವರಿಗೆ ಲಭಿಸಿದೆ. ೨೦೦೦ನೇ ಸಾಲಿನ ರಾಜ್ಯೋತ್ಸವ ಪ್ರಶಸ್ತಿಯು ಶ್ರೀಮತಿ ಸುಧಾನಾರಾಯಣಮೂರ್ತಿ, ಪ್ರೊ॥ ಜಿ. ಎಸ್. ಆಮೂರ, ಪ್ರೊ॥ ಜಿ. ಎಚ್. ನಾಯಕ್, ಶ್ರೀ ಎ. ಕೆ. ರಾಮೇಶ್ವರ, ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯ ಮತ್ತು ಡಾ॥ ಸಿ. ಅನ್ನಪೂರ್ಣಮ್ಮನವರಿಗೆ, ಸಾವಿತ್ರಮ್ಮ ದೇಜಗೌ ಮಹಿಳಾ ಪ್ರಶಸ್ತಿ ಶ್ರೀಮತಿ ಆರ್ಯಾಂಬ ಪಟ್ಟಾಭಿಯವರಿಗೆ, ಸತ್ಯಕಾಮ ಪ್ರತಿಷ್ಠಾನದ ಪ್ರಶಸ್ತಿ ಹಾಗೂ ಹಾವನೂರು ಪ್ರತಿಷ್ಠಾನದ ಪ್ರಶಸ್ತಿಗಳು ಶ್ರೀಮತಿ ರೇಖಾಕಾಖಂಡಕಿಯವರಿಗೆ ಸಂದಿವೆ.

ಈ ಎಲ್ಲ ಪ್ರಶಸ್ತಿ ವಿಜೇತರಿಗೆ ಪ್ರತಿಷ್ಠಾನದ ಗೌರವಪೂರ್ವಕ ಅಭಿನಂದನೆಗಳು ಸಲ್ಲುತ್ತವೆ.



# ಶ್ರದ್ಧಾಂಜಲಿ

**೧. ಪ್ರೊ|| ಕು. ಶಿ. ಹರಿದಾಸಭಟ್ಟ :**

ಭಾಷಾತಜ್ಞ, ವಿದ್ವಾಂಸ, ಸಂಶೋಧಕ, ಅರ್ಥಶಾಸ್ತ್ರ ಪ್ರವೀಣ, ಅಂಕಣಕಾರ ಹಾಗೂ ಸಮರ್ಥ ಸೃಜನಶೀಲ ಸಾಹಿತಿಯಾಗಿದ್ದ ಪ್ರೊ|| ಕು. ಶಿ. ಹರಿದಾಸಭಟ್ಟರು ಉಡುಪಿಯಲ್ಲಿ ದಿನಾಂಕ ೨೦-೮-೨೦೦೦ರಂದು ನಿಧನರಾದುದು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತುಂಬಲಾಗದ ಕೊರತೆಯಾಗಿದೆ. (ಅವರ ಜೀವಿತ ಕಾಲ ಮಾರ್ಚ್ ೧೯೨೪ರಿಂದ ಆಗಸ್ಟ್ ೨೦೦೦).

**೨. ಆರ್. ಎಸ್. ರಾಮರಾವ್ :**

ಪ್ರತಿಷ್ಠಾನದ ಅಭಿಮಾನಿಗಳೂ, ಸ್ಥಾಪಕ ಸದಸ್ಯರೂ ಆಗಿದ್ದ ಸಾಹಿತಿ ಆರ್. ಎಸ್. ರಾಮರಾವ್ ಅವರು ಕನ್ನಡ ಸಾರಸ್ವತಲೋಕವನ್ನು ಅಗಲಿದ್ದಾರೆ. 'ಮಾಸ್ತಿ ವೆಂಕಟೇಶ ಅಯ್ಯಂಗಾರ್' ಜೀವನ ಚರಿತ್ರೆಯ ಪುಸ್ತಕವನ್ನು ಪ್ರತಿಷ್ಠಾನಕ್ಕೆ ಬರೆದುಕೊಟ್ಟಿದ್ದ ದಿವಂಗತರು ಸರ್ಕಾರದ ಮತ್ತು ಸಂಘ ಸಂಸ್ಥೆಗಳ ಹಲವಾರು ಸಾಹಿತ್ಯ ಸಮಿತಿಗಳಲ್ಲಿ ಸದಸ್ಯರಾಗಿ ದುಡಿದಿದ್ದರಲ್ಲದೆ ಕೆಲವು ಗ್ರಂಥಗಳನ್ನೂ ರಚಿಸಿದ್ದಾರೆ. ಪ್ರತಿಷ್ಠಾನದ ಸಂಸ್ಥಾಪಕರಾಗಿದ್ದ ದಿ|| ಸೀತಾರಾಮಯ್ಯನವರ ನಿಕಟವರ್ತಿಗಳಾಗಿದ್ದ ರಾಮರಾಯರು ಅವರಂತೆ ಅಂಗವಿಕಲತೆಯನ್ನು ಎಂದೂ ದೋಷವಾಗಿ ಪರಿಗಣಿಸದೆ ಬೇರೆಯವರು ನಾಚುವಂತೆ ಚಟುವಟಿಕೆಯಿಂದಿದ್ದ ಸಾಧಕರಾಗಿದ್ದರು.

**೩. ಸಮೇತನಹಳ್ಳಿ ರಾಮರಾವ್ :**

ದಿನಾಂಕ ೭-೧೦-೧೯೯೯ರಂದು ನಮ್ಮನ್ನಗಲಿದ ದಿವಂಗತರು ಕನ್ನಡದ ಹೆಸರಾಂತ ಸಾಹಿತಿಗಳು ಮತ್ತು ಐತಿಹಾಸಿಕ ಕಾದಂಬರಿಕಾರರು. ಪ್ರತಿಷ್ಠಾನದ ದಾನಿಗಳಾಗಿ 'ರಾಸ ಸಾಹಿತ್ಯ ವಿಮರ್ಶಾ ಸ್ಪರ್ಧೆ' ದತ್ತಿ ನಿಧಿಯನ್ನು, ಗ್ರಂಥಾಲಯ ಪುಸ್ತಕ ಖರೀದಿ ದತ್ತಿಯನ್ನು ಪ್ರತಿಷ್ಠಾನದಲ್ಲಿ ಸ್ಥಾಪಿಸಿದ್ದಾರೆ.

**೪. ಗಮಕಿ ರಾಘವೇಂದ್ರರಾವ್ :**

ಕರ್ನಾಟಕ ಸರ್ಕಾರದ ಪ್ರತಿಷ್ಠಿತ ಕನಕ-ಪುರಂದರ ಪ್ರಶಸ್ತಿ ವಿಜೇತರಾಗಿದ್ದ ಎಂ. ರಾಘವೇಂದ್ರರಾಯರು ೩೦-೧೧-೧೯೯೯ರಂದು ಇನ್ನಿಲ್ಲವಾದರು. ಕರ್ನಾಟಕದಲ್ಲಿ ಗಮಕ ಕಲೆಯನ್ನು ಉಳಿಸಿ ಬೆಳೆಸಿ ಪ್ರೋತ್ಸಾಹಿಸಿದ ಕೀರ್ತಿ ಅವರದ್ದು. ಕರ್ನಾಟಕ ಗಮಕಕಲಾ ಪರಿಷತ್ತನ್ನು ಸ್ಥಾಪಿಸಿ ಅದು ಶಾಶ್ವತವಾಗಿ ಮುಂದುವರಿಯುವಂತೆ ಮಾಡಿದ ದಿವಂಗತರು ಪ್ರಸಿದ್ಧ ಗಮಕಿಗಳಾಗಿ ಹೆಸರು ಮಾಡಿದ್ದರಲ್ಲದೆ ಹಲವಾರು ಛಂದೋಬದ್ಧ ಕಾವ್ಯಗಳನ್ನು ಬರೆದು ಗಮಕಕಲೆಯನ್ನು ಪ್ರೋತ್ಸಾಹಿಸಿದ್ದರು.

೫. ಟಿ. ಎನ್. ರಾಮರಾವ್ :

ಬಿ. ಎಂ. ಶ್ರೀ. ಅವರ ಇಂಗ್ಲೀಷ್ ಗೀತೆಗಳನ್ನು ಮೊದಲ ಬಾರಿ ವಿಮರ್ಶೆ ಮಾಡಿ ಶ್ರೀಯವರಿಂದಲೇ ಮೆಚ್ಚುಗೆ ಗಳಿಸಿದ್ದ ಪ್ರಸಿದ್ದ ಸಾಹಿತಿಗಳಾದ ಟಿ. ಎನ್. ರಾಮರಾವ್ ಅವರು ಡಿಸೆಂಬರ್ ತಿಂಗಳಿನಲ್ಲಿ ನಮ್ಮನ್ನಗಲಿದರು. ೯೦ ವರ್ಷಗಳ ತುಂಬು ಜೀವನ ನಡೆಸಿದ್ದ ರಾಮರಾಯರು ಇಂಗ್ಲೀಷ್ ಭಾಷೆಗೆ ಕನ್ನಡ ಸಾಹಿತ್ಯದ ಮುಖ್ಯ ಕವಿ-ಕೃತಿ-ಚರ್ಚೆಗಳನ್ನು ಅನುವಾದ-ವಿಮರ್ಶೆ ಮಾಡುವ ಮೂಲಕ ಹೊರ ಜಗತ್ತಿಗೆ ಕನ್ನಡ ಸಾಹಿತ್ಯದ ಸವಿಯನ್ನು ಪರಿಚಯಿಸುವ ಕಾಯಕದಲ್ಲಿ ಮುಖ್ಯವಾಗಿ ತೊಡಗಿಸಿಕೊಂಡಿದ್ದರು. ಪ್ರತಿಷ್ಠಾನದ ಗೌರವ ಸದಸ್ಯರೂ ಸಂಸ್ಥಾಪಕ ಸೀತಾರಾಮಯ್ಯನವರ ನಿಕಟವರ್ತಿಗಳೂ ಆಗಿದ್ದ ದಿವಂಗತರು ನಿಧನಕ್ಕೆ ಮುನ್ನ ಪ್ರತಿಷ್ಠಾನದಲ್ಲಿ ಒಂದು ದತ್ತಿ ನಿಧಿಯನ್ನು ಸ್ಥಾಪಿಸುವ ಆಶಯವನ್ನು ವ್ಯಕ್ತಪಡಿಸಿದ್ದರು. ೨೫ ಸಾವಿರ ರೂ.ಗಳನ್ನು ಶ್ರೀ ಭವನದ ನಿರ್ಮಾಣಕ್ಕೆ ಉದಾರವಾಗಿ ನೀಡಿದ್ದರು. ಪ್ರತಿಷ್ಠಾನದ ಬೆಳವಣಿಗೆಯನ್ನು ಸದಾ ಬಯಸುತ್ತಿದ್ದ ಹಿತೈಷಿಗಳಾಗಿದ್ದರು.

೬. ಡಾ|| ಹಾ. ಮಾ. ನಾಯಕ :

ಕನ್ನಡ ಸಾರಸ್ವತ ಲೋಕದ ಹೆಮ್ಮೆಯ ನಾಯಕ, ಖ್ಯಾತ ಅಂಕಣಕಾರ, ಪ್ರಸಿದ್ಧ ಗ್ರಂಥ ಸಂಪಾದಕ, ಸಂಶೋಧಕ, ವಿಮರ್ಶಕ ಹಾಗೂ ಬಹುಮುಖ ಪ್ರತಿಭೆಯ ಪ್ರತೀಕ, ಸೃಜನಶೀಲ ಹಾಗೂ ಸೃಜನೇತರ ಸಾಹಿತ್ಯ ಕ್ಷೇತ್ರಗಳೆರಡರಲ್ಲೂ ಯಶಸ್ಸಿನ ಹೆಜ್ಜೆ ಮೂಡಿಸಿರುವ ಹಾರೋಗದ್ದೆ ಮಾನಪ್ಪ ನಾಯಕರು ಬಿ.ಎಂ.ಶ್ರೀ. ಪ್ರತಿಷ್ಠಾನದ ಹಿತೈಷಿಗಳಾಗಿದ್ದರು. ಇಂತಹ ಕನ್ನಡದ ಕಟ್ಟಾಳು, ಸಾಂಸ್ಕೃತಿಕ ನಾಯಕರು ದಿನಾಂಕ ೧೦-೧೧-೨೦೦೦ದಂದು ನಿಧನರಾದುದು ಕನ್ನಡ ಸಾಹಿತ್ಯ ಲೋಕಕ್ಕೆ ಅಪಾರ ದುಃಖ ತಂದಿದೆ. (ಜೀವಿತ ಕಾಲ ೧೨-೯-೧೯೩೧ ರಿಮದ ೧೦-೧೧-೨೦೦೦)

೭. ಉಷಾ ನವರತ್ನರಾಮ್ :

ಕನ್ನಡದ ಖ್ಯಾತ ಕಾದಂಬರಿಗಾರ್ತಿ ಶ್ರೀಮತಿ ಉಷಾನವರತ್ನರಾಂ ಅವರು ದಿನಾಂಕ ೧-೧೦-೨೦೦೦ದಂದು ನಿಧನರಾದುದು ಸಾರಸ್ವತ ಲೋಕಕ್ಕೆ ಅಪಾರ ದುಃಖ ತಂದಿದೆ. (ಅವರ ಜೀವಿತಕಾಲ ೨೫-೧೧-೧೯೪೩ ರಿಂದ ೧-೧೦-೨೦೦೦.)

೮. ಪಿ. ಲಂಕೇಶ್ :

ಲಂಕೇಶ್ ಪತ್ರಿಕೆಯ ಖ್ಯಾತಿಯ ಹೆಸರಾಂತ ಸಾಹಿತಿ ಪಿ. ಲಂಕೇಶ್ ನಿಧನ (೨೫-೧-೨೦೦೦) ಕನ್ನಡ ಸಾಹಿತ್ಯ ಲೋಕಕ್ಕೆ ಮರೆಯಲಾಗದ ನೆನಪು. ಕನ್ನಡ ಪತ್ರಿಕಾರಂಗಕ್ಕೇ ಒಂದು ಹೊಸ ಆಯಾಮವನ್ನು ಸೃಷ್ಟಿಸಿಕೊಟ್ಟ ಲಂಕೇಶರ ಸಾಹಿತ್ಯ ಕೊಡುಗೆಯು ವಿಶಿಷ್ಟವಾದುದು. ಜೀವಿತ ಕಾಲ (೮-೩-೧೯೩೫ ರಿಂದ ೨೫-೧-೨೦೦೦)

**೯. ಕೆ. ನರಸಿಂಹಮೂರ್ತಿ :**

ದಿನಾಂಕ ೧೨-೦೬-೧೯೯೯ರಂದು ನಿಧನರಾದ ದಿವಂಗತರು ಪ್ರಸಿದ್ಧ ವಿಮರ್ಶಕರೂ ಸಾಹಿತಿಗಳೂ ಆಗಿದ್ದಾರೆ. ಪ್ರತಿಷ್ಠಾನದ ಸ್ಥಾಪಕ ಸದಸ್ಯರಾಗಿ, ಹಿತೈಷಿಗಳಾಗಿ ಅನೇಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು.

**೧೦. ಪ್ರೊ|| ಎಸ್. ವಿ. ಪರಮೇಶ್ವರಭಟ್ಟರು :**

ಬಹುಮುಖ ಪ್ರತಿಭೆಯ ಕವಿ, ವಿದ್ವಾಂಸ, ಪ್ರಬಂಧಕಾರ, ಉಪನ್ಯಾಸಕ, ಪ್ರೊ|| ಎಸ್. ವಿ. ಪರಮೇಶ್ವರಭಟ್ಟರು ದಿನಾಂಕ ೨೭-೧೦-೨೦೦೦ದಂದು ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. (ಜೀವಿತ ಕಾಲ ೮-೨-೧೯೧೪ ರಿಂದ ೨೭-೧೦-೨೦೦೦) 'ಕಾಳಿದಾಸ ಮಹಾ ಸಂಪುಟ' ಇವರ ಅತ್ಯುತ್ತಮ ಕೃತಿ. ಇವರಿಗೆ ಚಾವುಂಡರಾಯ ಪ್ರಶಸ್ತಿ ಲಭಿಸಿದೆ. ಇವರು ರಚಿಸಿರುವ ಕೃತಿಗಳು ೬೦ಕ್ಕೂ ಹೆಚ್ಚು. ರಾಜ್ಯ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಸಂದಿದೆ.

**೧೧. ಎಂ. ಜಿ. ಭೀಮರಾವ್ (ವಂಶಿ)** : ಇವರು ದಿನಾಂಕ ೧೮-೧೧-೧೯೯೯ರಂದು , **ಶಾರದಾ ಹೆಮ್ಮಿಗೆಯವರು** ದಿನಾಂಕ ೧೭-೧೨-೧೯೯೯ರಂದು, **ಜಿ. ಎಸ್. ಶಿವಪ್ರಕಾಶ್**ರವರು *(ಕಾವ್ಯನಾಮ ಜಯಸುದರ್ಶನ)* ದಿನಾಂಕ ೫-೧೦-೨೦೦೦ದಂದು, **ದು. ನಿಂ. ಬೆಳಗಲಿ**ಯವರು ದಿನಾಂಕ ೮-೧-೨೦೦೦ದಂದು ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ.

ಈ ಮಹಾಚೇತನಗಳಿಗೆ ಚಿರಶಾಂತಿ ದೊರಕಲೆಂದು ಪ್ರತಿಷ್ಠಾನ ತನ್ನ ಶ್ರದ್ಧಾಪೂರ್ವಕವಾದ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.



# ಈ ಸಂಚಿಕೆಯ ಲೇಖಕರು

೧. ಎಸ್. ವಿ. ಶ್ರೀನಿವಾಸರಾವ್
೪೩೦, ಸೌರಭ, ೧೭ನೇ ಮೇನ್,
ಶ್ರೀನಗರ,
ಬೆಂಗಳೂರು-೫೦

೨. ಎಂ. ಆರ್. ಅನಂತರಾಮಯ್ಯ
ನಂ. ೧೪, ಇಂಚರ,
ಗಿರಿನಗರ, ೨ನೇ ಫೇಸ್
ಬೆಂಗಳೂರು-೫೬೦ ೦೮೫

೩. ತಲೆಂಗಳ ರಾಮಕೃಷ್ಣಭಟ್ಟ
ಅಂಚೆ ಬಾಯೂರು-೬೭೧೩೪೮
ವಯಾ-ಪೈವಳಿಕೆ
ಕಾಸರಗೋಡು ಜಿಲ್ಲೆ

೪. ವಿದ್ವಾನ್ ಟಿ. ಕೇಶವಭಟ್
೭೫೪, ೧೫ನೇ ಮುಖ್ಯರಸ್ತೆ,
೨ನೇ ಹಂತ ಬನಶಂಕರಿ
ಬೆಂಗಳೂರು - ೫೬೦ ೦೭೦

೫. ನಾ. ಗೀತಾಚಾರ್ಯ
ನಂ. ೧, ೫ನೇ ಕ್ರಾಸ್,
ಕೆಂಪೇಗೌಡ ನಗರ,
ಬೆಂಗಳೂರು - ೫೬೦ ೦೧೯

೬. ಡಾ|| ನಿಂಗಣ್ಣ ಎಸ್. ಸಣ್ಣಕ್ಕಿ
ಶ್ರೀ ನೀಲಕಂಠ ನಿವಾಸ ಬಸವನಗರ,
ಗೋಕಕ್-೫೯೧ ೩೦೭
ಬೆಳಗಾವಿ ಜಿಲ್ಲೆ, ಕರ್ನಾಟಕ ರಾಜ್ಯ

೭. ಕೌಲಗಿ ಶೇಷಾಚಾರ್
"ಅಪರ್ಣಾ" ೫-೧, ಸೀತಾವಿಲಾಸ ರಸ್ತೆ,
ಮರಿಮಲ್ಲಪ್ಪ ಜುನಿಯರ್ ಕಾಲೇಜು
ಎದುರುಗಡೆ, ಮೈಸೂರು-೨೪

೮. ಎಸ್. ಶಿವಣ್ಣ
ನಂ. ೧೩೮, ೭ 'ಸಿ' ಮೇನ್,
ವಿಜಯನಗರ ೨ನೇ ಸ್ಟೇಜ್,
ಬೆಂಗಳೂರು-೫೬೦ ೦೪೦

೯. ಡಾ|| ಕೆಳದಿ ವೆಂಕಟೇಶ್
ಕೆಳದಿ ಮ್ಯೂಸಿಯಂ
ಕೆಳದಿ ಅಂಚೆ - ೫೭೭೪೪೩
ಸಾಗರ ತಾಲ್ಲೂಕ್

೧೦. ಡಾ|| ಸಿ. ನಾಗಭೂಷಣ
ನಂ. ೭೦೧, ವೈ ೧೪ನೇ
ಮುಖ್ಯರಸ್ತೆ, ೩ನೇ ಬ್ಲಾಕ್,
ರಾಜಾಜಿನಗರ
ಬೆಂಗಳೂರು - ೫೬೦ ೦೧೦

೧೧. ಪ್ರೊ|| ಜಿ. ಅಶ್ವತ್ಥನಾರಾಯಣ
ನಂ. ೯೫ (ಮಹಡಿ) ೩೪ನೇ 'ಬಿ' ಕ್ರಾಸ್,
೧೬ನೇ ಮೇನ್, ೪ನೇ 'ಟಿ' ಬ್ಲಾಕ್,
ಜಯನಗರ,
ಬೆಂಗಳೂರು - ೫೬೦ ೦೧೧

೧೨. ಡಾ|| ಉಪ್ಪಂಗಳ ರಾಮಭಟ್ಟ
"ಪರಾಶರ" ೮-೧-೬೪೨೯
ಸುಧೀಂದ್ರ ತೀರ್ಥಮಾರ್ಗ
ಕುಂಜಿಬೆಟ್ಟು, ಉಡುಪಿ-೫೭೬ ೧೦೨

೧೩.ಎಸ್.ಎಲ್. ಶ್ರೀನಿವಾಸಮೂರ್ತಿ
೭೦೨, ೭ನೇ ಅಡ್ಡರಸ್ತೆ,
೭ನೇ ಮುಖ್ಯರಸ್ತೆ, ಭುವನೇಶ್ವರಿ ನಗರ
ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

೧೪. ವಿದ್ವಾನ್ ಟಿ. ಕೃಷ್ಣಭಟ್
ಬೋಧಾಯನ ಪಂಜಳ,
ಉಪ್ಪಿನಂಗಡಿ,
ದಕ್ಷಿಣ ಕನ್ನಡ ಜಿಲ್ಲೆ - ೫೭೪೨೧೪೧

೧೫. ಎ. ವಿಜಯಲಕ್ಷ್ಮಿ
ಭುವನೇಶ್ವರಿ ಗಂಜಿಗುಂಟೆ
ನಂ. ೩೧೬, ೯ನೇ ಮುಖ್ಯರಸ್ತೆ,
ಹನುಮಂತನಗರ,
ಬೆಂಗಳೂರು - ೫೬೦ ೦೧೯

೧೬. ಡಾ॥ ಜಿ. ಎನ್. ಉಪಾಧ್ಯ
ಮುಂಬಯಿ ವಿಶ್ವವಿದ್ಯಾನಿಲಯ,
ವಿದ್ಯಾನಗರಿ
ಸಾಂತಾಕ್ರೂಜ್, (ಪೂರ್ವ)
ಮುಂಬಯಿ - ೪೦೦ ೦೯೩

೧೭. ಡಾ॥ ಎಂ. ಎನ್. ಪ್ರಭಾಕರ್
'ಪದ್ಮ ಪ್ರಭಾ' ನಂ. ೪೨,
ಬ್ಲಾಕ್ - ೧೭, ಬ್ಯಾಂಕ್ ಕಾಲೋನಿ
(ಶ್ರೀರಾಮಪುರ ೨ನೇ ಹಂತ)
ಮೈಸೂರು - ೫೭೦ ೦೨೩

೧೮. ಎಂ. ಕೆ. ಗೋಪಿನಾಥ್
೭-೧೨೭, ನಾಲ್ಕನೇ ಬ್ಲಾಕ್
ಜಯನಗರ,
ಬೆಂಗಳೂರು - ೫೬೦ ೦೧೪

೧೯. ಕೆ. ಬಸವರಾಜಪ್ಪ
ಕನ್ನಡ ಅಧ್ಯಾಪಕರು
ಶೇಷಾದ್ರಿಪುರಂ ಸಂಯುಕ್ತ ಪದವಿ
ಪೂರ್ವ ಕಾಲೇಜು, ಶೇಷಾದ್ರಿಪುರಂ
ಬೆಂಗಳೂರು-೫೬೦ ೦೨೦

೨೦. ರತ್ನ ರಾಮನಗರ
ಬೆಂಗಳೂರು

೨೧. ಡಾ॥ ಸೀ. ಕೃ. ರಾಮಶೇಷನ್
M04 ಶ್ರೀ ಗುರುಪ್ರಸಾದ,
ಕೆ. ಬಿ. ಬ್ಲಾಕ್, ೩ನೇ ಕ್ರಾಸ್,
ಹಗಲುಗನಸು ರಸ್ತೆ, ಕುವೆಂಪು ನಗರ
ಮೈಸೂರು-೫೭೦ ೦೨೩



## ಪ್ರತಿಷ್ಠಾನದ ಗೌರವ ಸದಸ್ಯರು

1) ಪ್ರೊ॥ ಎ. ಎನ್. ಮೂರ್ತಿರಾವ್ 2) ಪ್ರೊ॥ ಎಸ್. ವಿ. ಪರಮೇಶ್ವರಭಟ್ಟ
3) ಡಾ॥ ಜಿ. ಎಸ್. ದೀಕ್ಷಿತ್ 4) ವಿದ್ವಾನ್ ಎನ್. ರಂಗನಾಥಶರ್ಮ
5) ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯ 6) ಗೌರೀಶ ಕಾಯ್ಕಿಣಿ
7) ಶ್ರೀಮತಿ ಶಾಂತಾದೇವಿ ಮಾಳವಾಡ

## ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳಿಸಬೇಕು

*ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.*

## ವಿನಿಮಯ ಪತ್ರಿಕೆಗಳು

1) ಪ್ರಬುದ್ಧ ಕರ್ಣಾಟಕ, ಮಾನವಿಕ ಕರ್ಣಾಟಕ, ವಿಜ್ಞಾನ ಕರ್ಣಾಟಕ, ಮೈಸೂರು. 2) ಸಾಧನೆ, ಬೆಂಗಳೂರು 3) ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು. 4) ಮಿಥಿಕ್ ಸೊಸೈಟಿ ಜರ್ನಲ್ 5) ಬಸವ ಪಥ, ಬೆಂಗಳೂರು. 6) ಶಂಕರ ಭಾಸ್ಕರ, ಬೆಂಗಳೂರು. 7) ಧರ್ಮಪ್ರಭ, ಬೆಂಗಳೂರು 8) ಜಾನಪದ ಜಗತ್ತು, ಬೆಂಗಳೂರು. 9) ಅನ್ವೇಷಣೆ, ಬೆಂಗಳೂರು. 10) ಅಪರಂಜಿ, ಬೆಂಗಳೂರು. 11) ಕರ್ನಾಟಕ ಭಾರತಿ, ಧಾರವಾಡ. 12) ಸುಗುಣಮಾಲಾ, ಉಡುಪಿ. 13) ಸತ್ಯಶುದ್ಧ ಕಾಯಕ, ಚಿತ್ರದುರ್ಗ, 14) ತರಳಬಾಳು, ಸಿರಿಗೆರೆ. 15) ಅಭಿಮತ, ದೆಹಲಿ.

## ಕರ್ನಾಟಕ ಲೋಚನ ಚಂದಾ ವಿವರ

*ವಾರ್ಷಿಕ ಚಂದಾ* : *ವ್ಯಕ್ತಿಗಳಿಗೆ ರೂ. 15-00*
*ಗ್ರಂಥಾಲಯ, ಸಂಘ ಸಂಸ್ಥೆಗಳಿಗೆ ರೂ. 25-00*
*ಆಜೀವ* : *ರೂ. 150-00*
*ಬಿಡಿ ಪ್ರತಿ ರೂ. 10-00*
*ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತ.*
*ಪ್ರತಿಷ್ಠಾನದ ಸದಸ್ಯತ್ವ* : *ವಾರ್ಷಿಕ ರೂ. 25-00 ಆಜೀವ ರೂ. 250-00*

KARNATAKA LOCHANA–Half Yearly Journal
*Published by B. M. Sri. Smaraka Prathishthana, N.R.Colony, Bangalore-560 019.*
*Printed by : Prathibha Printers, Bangalore-560 019. Ph. : 6692113*

ಕರ್ನಾಟಕ ಲೋಚನ ೧೯೮೩ ರಿಂದ ನಡೆಯುತ್ತಿರುವ ಪ್ರತಿಷ್ಠಾನದ ವಿದ್ವತ್ ಪತ್ರಿಕೆ. ಕರ್ನಾಟಕದಲ್ಲಿ ಸಾಹಿತ್ಯ ಸಂಶೋಧನೆಗೆ ಮೀಸಲಾಗಿರುವ, ನಿಯತವಾಗಿ ಪ್ರಕಟವಾಗುತ್ತಿರುವ ಏಕೈಕ ಸಾಹಿತ್ಯ ಪತ್ರಿಕೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಇದು ಪ್ರತಿಷ್ಠಾನ ತನ್ನ ಇಪ್ಪತ್ತು ವರ್ಷಗಳ ಇತಿಹಾಸದಲ್ಲಿ ಸ್ವಂತಕಟ್ಟಡ ಮಾಡಿಕೊಳ್ಳುವ ಸಂದರ್ಭದಲ್ಲಿ ಸ್ವಲ್ಪ ತಡವಾಗಿ ಶ್ರೀಭವನ ಉದ್ಘಾಟನೆಯ ಹಾಗೂ ದ್ವಿದಶಮಾನೋತ್ಸವದ ವಿಶೇಷಾಂಕವಾಗಿ ಕೂಡು ಸಂಚಿಕೆಯಾಗಿ ಹೊರಬಂದಿದೆ.



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ